ಏಳನೆಯ ಪ್ರಕಟನೆ :

# ಅಕ್ಕ - ತಂಗಿ

ಸರಸ ಸುಂದರ ಸಾಮಾಜಿಕ ಕಾದಂಬರಿ

ಶ್ರೀ. ನಾರಾಯಣ ಸಂಗಮ

೧೯೪೩

ಸಾಹಿತ್ಯ ಭಾಂಡಾರ
ಹುಬ್ಬಳ್ಳಿ

## ಅರ್ಪಣ

ರಸರುಚಿಗಳ ಪರಿಚಯ ಹೇಳಿ,

ಜೀವನಕ್ಕೆ

ಸಂಸ್ಕೃತಿಯ ಸಂಜೀವನ ತಗುಳಿಸಿದ,

ನನ್ನಲ್ಲಿ ಅವಿತ

ಪ್ರವೃತ್ತಿಗಳಿಗೆ ಪುಟಗೊಟ್ಟು ಅರಳಿಸಿದ,

ಎಳೆವರೆಯದ

ನನ್ನ ವಿದ್ಯಾಗುರು,

ಕರ್ನಾಟಕದ ಖ್ಯಾತನಾಮ ಕವಿ,

**ಶ್ರೀ. "ಅಂಬಿಕಾತನಯದತ್ತ"ರಿಗೆ**

—ನಾರಾಯಣ ಸಂಗಮ

# ಪ್ರಕಾಶಕರ ಮಾತು



ಗೆಳೆಯ ಸಂಗಮ ನಾರಾಯಣರಾಯರ ಕಾದಂಬರಿಯನ್ನು ಪ್ರಕಟಿಸುವದಾಗಿ ನಾಲ್ಕು ವರ್ಷಗಳ ಹಿಂದೆ ನಮ್ಮ "ದೇವದಾಸ" ಪ್ರಕಟನೆಯಲ್ಲೇ ನಾವು ಬರೆದಿದ್ದೆವು. ಬಂಗಾಲೀ ಕಾದಂಬರೀ ಪ್ರಪಂಚದೊಳಗಿನ ಔನ್ನತ್ಯ ನಮಗೆ ದೇವದಾಸ ಕಾದಂಬರಿ ಯಿಂದಲೇ ಕಂಡುಬಂದಿತ್ತು. 'ಅಕ್ಕ-ತಂಗಿ' ಭಾಷಾಂತರವಲ್ಲ. ಬಂಗಾಲಿಯೊಳಗಿನ ಕಥಾವಸ್ತು ಮಾತ್ರ. ಹೀಗಿದ್ದರೂ ಯಾವ ರೀತಿಯಲ್ಲಿಯೂ ಇದು ಬಂಗಾಲೀ ಕಾದಂಬರಿಗಳ ಮಟ್ಟಕ್ಕೆ ಕಡಿಮೆ ಯಾಗಿಲ್ಲ. ಇಂತಹ ರಸವತ್ತಾದ ಕಾದಂಬರಿಯನ್ನು ಒದಗಿಸಿಕೊಟ್ಟ ಬಗೆಗೆ ಶ್ರೀ. ನಾರಾಯಣ ಸಂಗಮರಿಗೆ ನಾವು ಕೃತಜ್ಞರಾಗಿರ ಬೇಕಾಗಿದೆ. ಕೃತಿಗೆ ತಕ್ಕ ಮುನ್ನುಡಿ ಬರೆದುಕೊಟ್ಟ ಪ್ರಿನ್ಸಿಪಾಲ್ ಗೋಕಾಕರಿಗೂ ಆಭಾರಿಗಳು. ಕಾಗದದ ಕೊರತೆಯ ಈ ದಿನ ಗಳಲ್ಲಿ ಕಸಕಸಿಯ ಗಾತ್ರದ ಅಕ್ಷರಗಳಲ್ಲಿ ಮುದ್ರಿತವಾದ ಈ ಪುಸ್ತಕ ವನ್ನು ಓದುವಾಗ ಓದುಗರು ತಾಳ್ಮೆವಹಿಸುವರೆಂಬ ನಂಬಿಗೆಯಿಂದ ಅವರಿಗೂ ಧನ್ಯವಾದಗಳು. ಅಂದವಾಗಿ ಮುದ್ರಿಸಿಕೊಟ್ಟ ಸಂಯುಕ್ತ ಕರ್ನಾಟಕ ಮುದ್ರಣಾಲಯವನ್ನೂ ನಾವು ಮರೆಯುವಂತಿಲ್ಲ.

ಈ ಪುಸ್ತಕದಲ್ಲಿ ಬಳಸಿದ ಅಕ್ಷರ ಬಹಳ ಚಿಕ್ಕವು. ಅದರಿಂದ ಅಲ್ಲಲ್ಲಿ ಕೆಲವು ತಪ್ಪು ಉಳಿದಿವೆ. ಚಿಕ್ಕಪುಟ್ಟ ತಪ್ಪುಗಳನ್ನು ಹಾಗೆಯೆ ಬಿಟ್ಟು ಅರ್ಥಭಂಗವಾಗಬಹುದಾದವುಗಳ ಒಪ್ಪೋಲೆಯನ್ನು ಈ ಪುಸ್ತಕದ ಕೊನೆಗೆ ಕೊಟ್ಟಿದೆ.

೩೦-೭-೪೩<br>ಹುಬ್ಬಳ್ಳಿ

—ಪ್ರಕಾಶಕ

# ನಿವೇದನ

ಈ ಮೊದಲೇ ಪ್ರಕಟವಾದಂತೆ ಶ್ರೀಮತಿ ನಿರುಪಮಾದೇವಿಯರ 'ದಿದಿ' ಎಂಬ ಬಂಗಾಲಿ ಕಾದಂಬರಿಯ ಭಾಷಾಂತರವೇ ಪ್ರಸಿದ್ಧವಾಗ ಬೇಕಿತ್ತು. ಈಗಿದು ಕೇವಲ ಭಾಷಾಂತರವಲ್ಲ. ಆದ್ದರಿಂದ ಮುಖ್ಯ ಮಾತೆಂದರೆ ಇದರಲ್ಲಿಯ ಕುಂದುಕೊರತೆಗಳಿಗೆ ನಾನು ಹೊಣೆಯಲ್ಲದೆ ನಿರುಪಮಾದೇವಿಯರಲ್ಲ. ಭಾಷಾಂತರವೇ ಆಗಿದ್ದರೆ ಚನ್ನಾಗಿರುತ್ತಿತ್ತು. ಹಾಗೆ ಮಾಡಿದ್ದರೆ ಅದೊಂದು ೬೦೦ ಪುಟಗಳ ತೋರ ಹೊತ್ತಗೆಯಾಗಿ, ಆ ಮಾನದಿಂದ ಬೆಲೆಯೂ ಭಾರವಾಗುವ ಭೀತಿಯಿತ್ತು. ಬರೆಹಗಾರರೂ, ಪ್ರಕಾಶಕರೂ ಈ ಎಲ್ಲ ಎಲ್ಲೆಗಳನ್ನೂ ಮೀರಿ ಮುದ್ರಣ ಕೈಕೊಳ್ಳುವಷ್ಟು ಸ್ವಚ್ಛಂದವಾಗಿರುವ ಫಲಕಾಲ ನಮ್ಮ ಕನ್ನಡ ಸಾಹಿತ್ಯಕ್ಷೇತ್ರಕ್ಕೆ ಇನ್ನೂ ಬಂದಿಲ್ಲ. ಅದು ಒದಗಿದಂದು ಬರೆಹಗಾರರು, ಪ್ರಕಾಶಕರು, ರಸಿಕರು ಎಲ್ಲರೂ ಧನ್ಯರಾಗಬಹುದು.

ನಮಗಿರುವ ಈ ಅನೇಕ ನಿರ್ಬಂಧಗಳನ್ನು ಮನದಂದು, ಶ್ರೀಮತಿ ನಿರುಪಮಾದೇವಿಯರ ಕಥಾವಸ್ತುವನ್ನೇ ಈ 'ಅಕ್ಕ-ತಂಗಿ' ಯರ ಕಥೆಗೆ ಸಾಮಗ್ರಿಯಾಗಿ ತೆಗೆದು, ಅದನ್ನೇ ನಾದಿ ಮಿದ್ದಿ ಸಾಧ್ಯವಾದಷ್ಟೂ ಸ್ವಾದಿಷ್ಟ ವಾಗುವ ಹಾಗೆ ಹದಗೊಳಿಸಿ ಪಾಕಮಾಡಿ ರಸಿಕರಿಗೆ ಉಣಲು ಅಣಿಗೊಳಿಸಿ ದ್ದೇನೆ. ಅಡಿಗೆ ರುಚಿಯಾಗಿದ್ದರೆ ಬಳಸಿದ ಸಾಮಗ್ರಿಯ ಸ್ವಾದವೆನ್ನಬೇಕು. ಸಪ್ಪೆಯಾಗಿದ್ದರೆ, ಅಟ್ಟಕ್ಕೆ ಅಷ್ಟೊಂದು ಅನುಭವದ್ದಲ್ಲವೆಂದುಕೊಳ್ಳಬೇಕು.

ಇದೇ ಕಥಾವಸ್ತುವನ್ನು ಬಳಸಿ ಮರಾಠಿಯಲ್ಲಿ 'ಪ್ರೇಮಳ ಸವತ್' ಎಂಬೊಂದು ಕಾದಂಬರಿಯು 'ಭಾರತ ಗೌರವ ಗ್ರಂಥಮಾಲೆ' ಯಲ್ಲಿ ಬಹುದಿನಗಳ ಹಿಂದೆ ಪ್ರಕಟಿತವಾಗಿದೆ. ಇವೆರಡೂ ಗ್ರಂಥಗಳಿಗೂ ಇಂಗ್ಲಿಷು ಭಾಷೆಯಲ್ಲಿದ್ದ ಒಂದು ಕಥೆಯೇ ಆಧಾರವೆಂದು ತೋರುತ್ತದೆ. ಆದರೆ ಆ ವಸ್ತುವನ್ನು ಉಪಯೋಗಿಸಿಕೊಂಡವರು ತಮತಮಗೆ ತೋರಿದ ರೀತಿಯಲ್ಲಿ ಅದನ್ನು ಅಳವಡಿಸಿಕೊಂಡು ಎರಕ ಹೊಯ್ದಿದ್ದಾರೆ. ಬಂಗಾಲಿಗಳ ದಿನದ ಜೀವನಚಿತ್ರ ನಮ್ಮವರ ಮನದಲ್ಲಿ ಸ್ವಲ್ಪವಾದರೂ ಬಿಂಬಿಸಲಿ ಎಂಬ ಉದ್ದೇಶದಿಂದ ಬೇಕೆಂದೇ ಪಾತ್ರಗಳ ಹೆಸರುಗಳು, ಸನ್ನಿವೇಶಗಳು, ಭಾವನೆ ಗಳು, ಸಂಭಾಷಣೆಯ ರೀತಿಗಳು ಹಾಗೂ ಇವಕ್ಕೆ ಪೋಷಕವಾಗುವ ವಾತಾ ವರಣ ಇವನ್ನೆಲ್ಲ ವಂಗದೇಶದ್ದೇ ಇರಿಸಲಾಗಿದೆ.

ಈ ಕಥೆ ಬರೆದಾಗ ಅದೇ ಹೊಸದಾಗಿ ನಾನು ವಂಗದೇಶದಿಂದ ಮರಳಿದ್ದೆ. ಆ ಕಾರಣ, ನಮ್ಮ ಕನ್ನಡ ಭಾಷೆಯಲ್ಲಿ ಬಳಕೆಗೊಳ್ಳದ ಹೊಸ ಅರ್ಥದ ಛಾಯೆಯುಳ್ಳ ಅನೇಕ ಪದಪ್ರಯೋಗಗಳು ಬಂದುಹೋಗಿವೆ. ಇತ್ತೀಚೆ ಈ ಬರೆಹವನ್ನು ಓದಿ ನೋಡಿದಾಗಲೂ ಬಳಸಿದ ಆ ಮಾತುಗಳು ಕಿವಿಗೆ ಕಟುವಾಗಿ ಕೇಳಿಸಲಿಲ್ಲ; ಸಂದರ್ಭಕ್ಕೆ ಗಡುಚಾಗಿ ತೋರಲಿಲ್ಲ. ಅಲ್ಲದೆ, ಕನ್ನಡಕ್ಕೆ ಬಂಗಾಲಿಯ ಶಬ್ದ ಭಾವಗಳ ಕಲವಾಗಿ ಭಾಷೆಗೆ ಒಂದು ಬಗೆಯ ಹುಲುಸು ಹುಟ್ಟಿದೆಯೆಂದು ತಿಳಿದಿದ್ದೇನೆ. ಕೈಪಳಗಿದ ನನ್ನ ಕೆಲ ಸಾಹಿತ್ಯಕ ಸ್ನೇಹಿತರು ಸಹ ಹೀಗೆ ಅಭಿಪ್ರಾಯಪಟ್ಟಿದ್ದಾರೆ. ಸಂದರ್ಭದಿಂದ ಸಹಜವಾಗಿ ಪದಗಳ ಭಾವಾರ್ಥವಾಗುವ ಹಾಗೂ ಇರುವವಾಗಿ ಆ ಎಲ್ಲ ಹೊಸ ನುಡಿಗಳನ್ನೂ ಬದಲಿಸುವ ಗೋಜಿಗೆ ಹೋಗಲಿಲ್ಲ. ಸುಲಭವಾಗಿ ಅರ್ಥ ಸ್ಫುರಣವಾಗದೆನಿಸಿದಾಗ ಆ ಮಾತುಗಳಿಗೆ ಕೊನೆಗೆ ಕೋಶವನ್ನೇ ಕೊಟ್ಟು ದಾಗಿದೆ. ಕನ್ನಡಕ್ಕೆ ಶಬ್ದಸಂಪದವಿಲ್ಲದಿಲ್ಲ. ಆದರೂ ಭಾಂಡಾರ ಹೆಚ್ಚಿಸಿ ದರೆ ಯಾರಿಗೆ ಬೇಡ? ಈ ದೃಷ್ಟಿಯಿಂದಲಾದರೂ ಆ ಹೊಸ ಪದಪ್ರಯೋಗ ಗಳು ಅನ್ಯಾಯವಾಗಲಾರದೆಂದು ತಿಳಿದುಕೊಂಡಿದ್ದೇನೆ.

ಒಂದೆರಡು ಕಡೆಗಳಲ್ಲಿ ಕಾವ್ಯದ ಗತಿಯನುಕರಿಸಿದ ವರ್ಣನೆಗಳಿವೆ. ಅವು, ಬರೆಹದ ತೊರೆಯಲ್ಲಿ ತೇಲಿಬಂದ ಭಾವನೆಯ ತೆರೆಗಳಾದ್ದರಿಂದ, ಮತ್ತು ಅವು ಅತಿ ಸಂಕ್ಷಿಪ್ತವಾಗಿರುವದರಿಂದ, ಸ್ವಲ್ಪ ಸಹನೆಯಿಂದ ಓದಿ ಕೊಂಡಲ್ಲಿ ಸಾರಸ್ಯವೆನಿಸದೆ ಇರವು.

ಓರಗೆಯ ಚಿಕ್ಕ ಹುಡುಗರದು ನಮ್ಮದು ಒಂದು ಪರಿಕರವಿತ್ತು. ಶ್ರೀ. ಬೇಂದ್ರೆಯವರು ಆ ಗುಂಪಿಗೆ ಸಾಹಿತ್ಯದೀಕ್ಷೆ ಕೊಟ್ಟು ಇಂದಿಗೆ ೨೦ ವರ್ಷಗಳಾಗ ಬಂದಿವೆ. ಆದರೂ ಆ ಪರಿಕರದಲ್ಲೊಬ್ಬನಾದ ನನ್ನಿಂದ, ಮತ್ತು ಇನ್ನೊಬ್ಬರಿಂದ, ಈ ವರೆಗೆ ಯಾವ ಕೃತಿಯೂ ಹೊರಬಂದಿರಲಿಲ್ಲ. ಅದಕ್ಕೆ, ನನ್ನಮಟ್ಟಿಗಂತೂ ಅವರ ಆಗಿನ ಉಪದೇಶವೇ ಕಾರಣ. “ಬರೆಯು ತ್ತಿರಿ. ಆದರೆ ಬರೆದದ್ದು ಮುದ್ರಿತವಾಗಬೇಕೆಂಬ ಮೋಹ ಬೇಡ. ಕೈಮಾಗಿ, ಲೆಕ್ಕಣಿಕೆ ಕಳಿತು ರಸರಸವಾದರೆ ಪ್ರಕಟನೆಗೆ ತಕ್ಕಕಾಲ ತಾನಾಗಿ ಬಂದು ಫಲ ಸಿಕ್ಕುವದು” ಎಂದು ಆಗಾಗ ಅವರು ಅನ್ನುತ್ತಿದ್ದರು. ಈ ಮಾತು ಮನದಲ್ಲಿ ನಾಟಿ, ನನ್ನಂಥವನ ಬರೆಹವೇನು ಮಹಾ ಎಂದು ಈ ತನಕ ಉದಾಸೀನನಾಗಿದ್ದೆ. ಆದರೆ ಈ ಮೌನ, ಈ ವೈರಾಗ್ಯ ಶ್ರೀ. ಬೇಂದ್ರೆ ಯವರಿಗೆ ಸಹನವಾಗಲಿಲ್ಲವೇನೊ. ಇತ್ತೀಚೆ ಒಮ್ಮೆ ಅವರು, “೨೦ ವರ್ಷ

ಗಳ ಹಿಂದಿನ ನನ್ನ ಉಪದೇಶ ನಿನಗೆ ಶಾಪವಾಗಿ ಪರಿಣಮಿಸಿದಂತೆ ತೋರು ತ್ತದೆ ಬರೆಹದ ಬಗ್ಗೆ ಇನ್ನು ಈ ನಿಗ್ರಹ ಸಾಕು. ಈ ದೀರ್ಘ ಮೌನದ ಬಲದಿಂದ ಬರೆಹಕ್ಕೆ ಬೆಲೆಬಾರದಿರದು. ಆ ಬೆಲೆ ಬಾರದಿದ್ದರೂ ಸರಿ, ಇನ್ನು ನೀವು ಸುಮ್ಮನಿರುವದು ಸರಿಯಲ್ಲ. ಇಂದಿನಿಂದ ಒಂದು ವರ್ಷದ ಅವಧಿ ಯಲ್ಲಿ, ಎಂಥದಾದರೂ ಸರಿ ಒಂದು ಪುಸ್ತಕ ಹೊರ ಬರಲೇ ಬೇಕು" ಎಂದು ಮುಂತಾಗಿ ಗದ್ದರಿಸಿದ್ದರು. ಅವರ ಆದೇಶಕ್ಕನುಸರಿಸಿ, ಈಗ ನಾನೇನೋ ಈ ಪುಸ್ತಕ ಪ್ರಕಟನೆಗೆ ತಂದೆ. ಇನ್ನೊಬ್ಬ ನನ್ನ ಸರಿಕನೂ ಹಾಗೆ ಮಾಡಬಹುದೆಂದಿದ್ದೇನೆ. ನನ್ನ ಲೆಕ್ಕಣಿಕೆಗೆ ಸೂಸುರಸವಲ್ಲದಿದ್ದರೂ ಬಿಸಿಹಸಿಯಾದರೂ ಹತ್ತಿ ಬಂದಿದೆಯೆಂದು ಓದುಗರಿಗೆ ತೋರಿದರೆ ನಾನು ಕೃತಾರ್ಥನು.

ನನ್ನ ಮೇಲಿನ ಪ್ರೇಮಾಭಿಮಾನಗಳಿಂದ, ಈ ಪುಸ್ತಕವನ್ನು, ಕಾಗದ ದೊರಕದ ಈ ದಿನಗಳಲ್ಲಿ, ಕಸಕಸಿಯ ಮಾಟದ ಅಕ್ಷರಗಳಲ್ಲಿಯೇ ಆಗಲಿ ಪ್ರಕಟಿಸುವ ಹೊಣೆಹೊತ್ತ ನನ್ನ ಮಿತ್ರರಾದ, ಹುಬ್ಬಳ್ಳಿ ಸಾಹಿತ್ಯ ಭಾಂಡಾರದ ಮಂಗಳೂರು ಗೋವಿಂದರಾಯರಿಗೆ, ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಈ ಬರೆಹಕ್ಕೆ ನಿಮಿತ್ತರಾಗಿ ಕಥಾಸೂತ್ರವನ್ನು ಒದಗಿಸಿ ಉಪಕರಿಸಿದ, ಶ್ರೀಮತಿ ನಿರುಪಮಾದೇವಿಯರಿಗೂ ನಾನು ಚಿರಋಣಿ. ಪ್ರಿನ್ಸಿಪಾಲ್ ಗೋಕಾಕರವರ ಅಮೂಲ್ಯವಾದ ಮುನ್ನುಡಿ ಈ ಪುಸ್ತಕಕ್ಕೊಂದು ಅಲಂ ಕಾರವಾಗಿದೆ. ಈ ಸುಂದರ ಅಲಂಕಾರದ ಬೆಡಗಿಗಾದರೂ ರಸಿಕ ಜನರು ಆಕರ್ಷಿತರಾಗಬಹುದೆಂದುಕೊಂಡಿದ್ದೇನೆ. ಅದಕ್ಕಾಗಿ ಶ್ರೀ. ಗೋಕಾಕರನ್ನು ನಾನು ಸದಾ ಕೊಂಡಾಡುತ್ತೇನೆ.

ಹುಲ್ಲು ಪಕ್ಕಲದಂತೆ ಬಲೆಯಿಲ್ಲದ ಬರೆಹವಾದರೂ ಸರಿ, ನನ್ನ ಪ್ರಥಮ ಕೃತಿಯನ್ನು ನನ್ನ ಎಳೆಯ ವಿದ್ಯಾಗುರು ಶ್ರೀಮಾನ್ ಬೇಂದ್ರೆಯವರಿಗೆ ಅರ್ಪಿಸಬೇಕೆಂದು ಬಯಸಿದ್ದೆ. ಹಾಗೆ ಈಗ ಈ ಕಿರಿಕೆಯನ್ನು ಗುರುಚರ ಣಕ್ಕೆ ಅತಿ ವಿಶ್ವಾಸದಿಂದ ಅರ್ಪಿಸುವಾಗ ಅವರ ಸಮ್ಮತಿ ಕೇಳಲಿಲ್ಲ. ಕೇಳದೆ ಮಾಡಿದ ಭಕ್ತಿ ಪ್ರಮಾದವಾಗದು. ಭಕ್ತನೆಂದಾದರೂ ದೇವರ ಸಮ್ಮತಿ ಪಡೆದು ಕೈಮುಗಿಯುವದುಂಟೆ ? ಆದ್ದರಿಂದ ಸಮರ್ಪಣಕ್ಕೆ ಸಮ್ಮತಿ ಪಡೆಯದ್ದು ಪ್ರಮಾದವೆಂದು ಶ್ರೀ. ಬೇಂದ್ರೆಯವರು ಎಂದುಕೊಳ್ಳಲಾರ ರೆಂದು ನಂಬಿದ್ದೇನೆ.

ಬಾಗಿಲುಕೋಟೆ
೧೬-೫-೧೯೪೩

ನಾರಾಯಣ ಸಂಗಮ

# ಮುನ್ನುಡಿ

ಗೆ. ಸಂಗಮು ನಾರಾಯಣರಾಯರು ಬರೆದ ಈ ಮೋಹಕ ಕಾದಂಬರಿಯನ್ನು ಓದಿದ ಹಾಗೆಲ್ಲ ಅಂತಃಕರಣವು ತಳಮಳಿಸುತ್ತದೆ; ಬುದ್ಧಿಯು ಕುಂಠಿತವಾಗುತ್ತದೆ; ಕೊನೆಯ ಪುಟದಲ್ಲಿಯ ವಿಧಿಶಾಸನವೇನಿದೆಯೆಂಬುದನ್ನು ತಿಳಿಯಲು ಲವಲವಿಕೆಯುಂಟಾಗುತ್ತದೆ. ಹೀಗೆ ನೇರವಾಗಿ ಅಂತಃಕರಣವನ್ನು ಮುಟ್ಟುವ ಕಲೆಯೇ ಯಶಸ್ವಿ ಕಲೆ; ಅದೇ ರಸಸಿದ್ಧಿ.

ಮೊದಲಿನಿಂದ ಕೊನೆಯ ವರೆಗೆ ಮೂರು ಜೀವಗಳ ಹೊಯ್ದಾಟವು ಇಲ್ಲಿ ಚಿತ್ರಿತವಾಗಿದೆ. ಇಲ್ಲದ ವರ್ಣನೆಗಳ ಸೆಳವಿಗೆ ಲೆಕ್ಕಣಿಕೆಯು ಜಾರಿಲ್ಲ. ಇಂಥ ಒಂದೆರಡು ವರ್ಣನೆಗಳಿವೆಯೆಂದು ಲೇಖಕರು ಹೇಳಿದ್ದಾರೆ. ಅವಾವುವೆಂಬುದನ್ನು 'ನಿವೇದನ' ವನ್ನೋದಿ ಹುಡುಕಬೇಕಾಗುತ್ತದೆ. ಗುರುವಿನ ಗಾತ್ರವನ್ನು ದುರ್ಬೀನಿನಿಂದ ಕಾಣಲೆಳಸಿ ಶನಿಯ ಸುತ್ತಲಿನ ಮಂಡಲಗಳನ್ನೆಣಿಸುತ್ತ ನಿಂತ ನಕ್ಷತ್ರಜ್ಞನಂತೆ ಇಲ್ಲಿಯ ಸ್ಥಿತಿಯಾಗಿಲ್ಲ. ಇಟ್ಟ ಗುರಿಯನ್ನು ಬಿಟ್ಟು ಒಂದಿಷ್ಟಾದರೂ ಲೇಖಕರ ದೃಷ್ಟಿ ಚಲಿಸಿಲ್ಲ. ಇದರಿಂದ ಕಥಾವಸ್ತುವಿಗೇ ಒಂದು ವಿಧದ ಕಾಂತಿ ಬಂದಿದೆ.

ಈ ಕಾದಂಬರಿಯಲ್ಲಿ ನವೀನ ಪದಪ್ರಯೋಗಗಳಾಗಿವೆಯೆಂದೂ ಲೇಖಕರು ಬರೆದಿದ್ದಾರೆ. ಈ ಮಾತು ಸಹ ಅವರು ಕೊಟ್ಟ ಕೋಶವನ್ನು ನೋಡಿದಾಗ ಮಾತ್ರ ನಮಗೆ ಗೊತ್ತಾಗುತ್ತದೆ. ಹೊಸ ಶಬ್ದಗಳು ಕನ್ನಡದಲ್ಲಿ ನೆಲೆಗೊಳ್ಳಬೇಕಾದರೆ ಹೀಗೆ– ನಮಗೆ ಗೊತ್ತಿಲ್ಲದೆ– ಒಳಸೇರಬೇಕು. ಸಂಗಮರು ಒದಗಿಸಿದ ವಂಗ ಶಬ್ದಸಂಪತ್ತಿಯು ಕನ್ನಡದ ಜೀವಾಳಕ್ಕೆ ಹೊಂದಿಕೊಂಡು ಬಂದಿದೆ. ಅದು ಎಂದಿಗೂ ನಮಗೆ ಬೇಕಾದುದು.

ಇಂಗ್ಲಿಷಿನಿಂದ ಬಂದರೂ ಸರಿ; ಬಂಗಾಲಿಯಿಂದ ಬಂದರೂ ಸರಿ; ತಮ್ಮ ಹದವಾದ ಮಿದುವಾದ ಶೈಲಿಯಲ್ಲಿ ಸಂಗಮರು ಕಥಾವಸ್ತುವನ್ನರಳಿಸುವಾಗ ಇದೊಂದು ಸ್ವತಂತ್ರ ಕಾದಂಬರಿಯಾಗಿ ಪರಿಣಮಿಸಿದೆ. ಕನ್ನಡ ಸಾಹಿತ್ಯವು ಇಲ್ಲಿಯ ವರೆಗೆ ರೂಪಿಸಿದ ಪ್ರೀತಿಯ ಸಮಸ್ಯೆಗಳಲ್ಲಿ ಇದೊಂದು ಹೊಸ ಬಗೆಯ ಸಮಸ್ಯೆ. ಸವತಿಮತ್ಸರದಷ್ಟು ಸವತಿಪ್ರೇಮವು ನೋಡಲು ಸುಲಭವಾಗಿ ದೊರೆಯುವ ಬದುಕಲ್ಲ. ಅದರಲ್ಲಿಯೂ ತನ್ನ ಅಸ್ತಿತ್ವವನ್ನೇ ಹೋಮಿಸುವ ಸುಧೆಯ ಸವತಿಪ್ರೇಮವನ್ನು ನಾವು ತೀರ ವಿರಳವಾಗಿ ಕಾಣಬಲ್ಲೆವು. ಆದರೆ ಈ ವಿರಳತೆಯು ಅವಾಸ್ತವಿಕತೆಯ ದಾರಿಯದಲ್ಲ; ರೋಮಾಂಚಕಾರಿಯಾಗಿದೆ. ಒಂದು ದೃಷ್ಟಿಯಿಂದ ನೋಡಿದರೆ ಸುಧೆಯೇ ಇಲ್ಲಿಯ ಕಥಾನಾಯಕಿಯಾಗಿದ್ದಾಳೆ. ಅವಳ ದುರದೃಷ್ಟವೇ ಇಲ್ಲಿಯ ಕಥಾವಸ್ತು. ಸ್ವಭಾವತಃ ಸುಧೆಯು ಮೌನಿ. ಆದರೆ ಆಕೆಯ ಮೌನದಿಂದಲೇ

ಈ ಕಥೆಯ ಸಾಗರವು ಆಲ್ಲೋಲಕಲ್ಲೋಲವಾಗುತ್ತದೆ. ತನ್ನನ್ನು ತ್ಯಜಿಸಿದ ಸುರೇಶನನ್ನೂ ಈ ದುರ್ದೈವಕ್ಕೆ ಕಾರಣಳಾದ ಸ್ನೇಹಳನ್ನೂ ಸುಧೆಯು ಕರುಳು ಹಿಸುಕಿ ಸೇಡು ತೀರಿಸಿಕೊಳ್ಳಬಹುದಾಗಿತ್ತು— ಆವರು ಜಮೀನುದಾರಿಯ ಮನೆಯಲ್ಲಿರಲು ಬಂದ ಮೇಲೆ. ಆದರೆ ಸ್ನೇಹಳ ಮೇಲಿನ ಮಮತೆಯು ಬಂದು ಈ ಕೃತ್ಯವನ್ನು ಅಡ್ಡಗಟ್ಟಿತು. ಮುಂದೆ ಸುರೇಶನು ತನ್ನ ತಪ್ಪನ್ನು ಕಂಡು ಹಿಡಿದು ಸುಧೆಯಲ್ಲಿ ಪ್ರೇಮಭಿಕ್ಷೆಯನ್ನು ಯಾಚಿಸಿದಾಗ— ಈ ಮಮತೆಯೇ ಅವಳನ್ನು ಒಂದು ಮಹಾ ತ್ಯಾಗಕ್ಕೆ ಅಣಿಗೊಳಿಸಿತು. ಸಂತೋಷ-ಬಾಬು, ದಿವಾಣ, ಸ್ನೇಹಾ, ಪ್ರಭಾತ, ಸುರೇಶ— ಹೀಗೆ ಒಬ್ಬರ ಹಿಂದೊಬ್ಬರು ಬಂದು ಸುಧೆಯ ಅಂತಃಕರಣವನ್ನು ವಿಶಾಲವಾಗಿಸಿ ಒಂದು ದಿವಸ ತಪಸ್ಸಿಗೆ ಗೊತ್ತಿದ್ದೋ ಗೊತ್ತಿಲ್ಲದೆಯೋ ಆವಳನ್ನು ಅಣಿಗೊಳಿಸುತ್ತಾರೆ. ಜನ್ಮಾಂತರದಲ್ಲಿ ನಮಗೆ ನಂಬುಗೆಯಿದ್ದುದಾದರೆ ಇನ್ನೊಂದು ಜನ್ಮ ಇಲ್ಲವೆ ಇನ್ನೊಂದು ಲೋಕದಲ್ಲಿ ಸುಧಾ – ಸುರೇಶರ ಪ್ರೀತಿಯು ಫಲಿಸದಿರದೆಂದು ನಮಗೆನಿಸುತ್ತದೆ. ಇಂಥ ನೋಟದಲ್ಲಿಯೇ ಕಾದಂಬರಿಯ ಮುಕ್ತಾಯವಿದೆ. ಕಾದಂಬರಿಯ ರುದ್ರಮಮತೆಯಲ್ಲಿ ಇದೊಂದೇ ಆಶಾಕಿರಣವಾಗಬಲ್ಲದು. ಸ್ನೇಹಾ – ಸುರೇಶರಿಬ್ಬರೂ ಸಿದ್ಧರಿರುವಾಗ ಸುಧೆಯೇಕೆ ಅವರ ಪ್ರೀತಿಯಲ್ಲಿ ಪಾಲುಗಾರಳಾಗಲಿಲ್ಲವೆಂದು ಓದುಗರು ಕೇಳಬಹುದು. ಆದರೆ ಸುಧೆಯ ಸ್ವಭಾವವನ್ನೂ ಪರಿಸ್ಥಿತಿಯನ್ನೂ ಲಕ್ಷಿಸಿದ್ದಾದರೆ ಈ ಪ್ರಶ್ನೆಯೇ ಏಳುವದಿಲ್ಲ. ಸುಧೆಯೊಂದಿಗೆ ಸ್ನೇಹಾ – ಸುರೇಶರ ಪಾತ್ರಗಳೂ ಬಹಳ ಚೆನ್ನಾಗಿ ಚಿತ್ರಿತವಾಗಿವೆ. ಕಾದಂಬರಿಯ ಉಳಿದ ವ್ಯಕ್ತಿಗಳೆಲ್ಲ ಕಥಾವಸ್ತುವನ್ನು ಅನುಪೋಷಿಸಲು ಮಾತ್ರ ಬಂದು ಹೋಗುತ್ತಾರೆ. ಪ್ರಕೃತಿಯನ್ನೂ ವ್ಯಕ್ತಿಗಳನ್ನೂ ಯೋಜಿಸುವದರಲ್ಲಿ ಕಾಣುವ ಈ ಬಿಗುವು ಇತ್ತೀಚಿಗಿನ ಬಂಗಾಲಿ ಕಾದಂಬರಿಕಾರರ ವೈಶಿಷ್ಟ್ಯವೆಂದು ತೋರುತ್ತದೆ. ಸಂಗಮರು ಅದನ್ನು ಇಲ್ಲಿ ಸಾಧಿಸಿದ್ದಾರೆ. ನಿರುಪಮಾದೇವಿಯವರ ಕಾದಂಬರಿಯಿಂದ ಸಂಗ್ರಹಿಸುವಾಗ ಈ ಯೋಜನೆಯು ಲೇಖಕರಿಗೆ ಅನಿವಾರ್ಯವಾಗಿಯೂ ಕಂಡಿರಬಹುದು.

ಗೆ. ಸಂಗಮರು ತಮ್ಮ 'ನಿವೇದನ' ದಲ್ಲಿ ಉಲ್ಲೇಖಿಸಿದ ಗುಂಪಿಗೆ ಹಿಂದಿನಿಂದ ಬಂದು ಕೂಡಿದವರಲ್ಲಿ ನಾನೂ ಒಬ್ಬ. ಅವರ ಕಲಾಜೀವನವು ಅಂದಿನಿಂದ ಇಂದಿನವರೆಗೆ ಒಂದೇ ಸಮನೆ ಹೇಗೆ ಅರಳುತ್ತಿರುವದೆಂಬುದನ್ನು ನಾನು ಕಂಡು ಕೊಂಡಿದ್ದೇನೆ. ನಾನು ಇನ್ನೂ ಕನ್ನಡದಲ್ಲಿ ಲೆಕ್ಕಣಿಕೆ ಎತ್ತಿರಲಿಲ್ಲ; ಆದರೊಳಗೇ ಸಂಗಮರು ಅನೇಕ ಸುಂದರ ಕವಿತೆಗಳನ್ನು ಬರೆದಿದ್ದರು; ಒಂದು ಮೋಹಕ ಕಾವ್ಯಾತ್ಮಕ ಗದ್ಯಶೈಲಿಯನ್ನು ಸಿದ್ಧಪಡಿಸಿದ್ದರು. ಆ ಶೈಲಿ

ಯಲ್ಲಿ ಅವರು ತಮ್ಮ ಗೆಳೆಯರನೇಕರಿಗೆ ಬರೆದ ಪತ್ರಗಳು ಆಗಲೇ ನನ್ನ ಕಿವಿಗಳಲ್ಲಿ ಕಟ್ಟಿದ್ದವು; ಇನ್ನೂ ಅವುಗಳ ಸವಿ ನೆನಪು ಅಲ್ಲಿ ಗುಣಿಸುತ್ತಿದೆ. ಒಂದು ಕೃತಿಯ ಸ್ವತಂತ್ರ ಪ್ರಕಾಶನ ದೃಷ್ಟಿಯಿಂದ ಜನತೆಯೆದುರಿಗೆ ಅವರು ಈಗ ಬಂದು ನಿಂತಿದ್ದರೂ ಕನ್ನಡದ ಸರಸತಿಯ ಗುಡಿಯಲ್ಲಿ ಅವರು ಇಪ್ಪತ್ತು ವರ್ಷ ಪೂಜೆ ಕಟ್ಟುತ್ತ ಬಂದಿದ್ದಾರೆ. ರಾಷ್ಟ್ರೀಯ ಶಿಕ್ಷಣವನ್ನು ದೊರಕಿಸ ಲೆಂದು ನಮ್ಮ 'ವಿಶ್ವ' ವಿದ್ಯಾಲಯದ ಹಾದಿಯನ್ನು ಬಿಟ್ಟು ಅವರು ಶಾಂತಿ ನಿಕೇತನಕ್ಕೆ ತೆರಳಿದರು. ಅಲ್ಲಿ ಅನೇಕ ವರ್ಷಗಳ ವರೆಗೆ ಶ್ರೀ. ನಂದಲಾಲ್ ಬೋಸರ ನೇತೃತ್ವದಲ್ಲಿ ಇವರ ಚಿತ್ರಕಲೆಯ ವ್ಯಾಸಂಗವು ನಡೆಯಿತು. ಇವರ ಮೊದಲಿನ ಲೇಖಗಳು ಗುಂಪಿನ 'ಸ್ವಧರ್ಮ' ದಲ್ಲಿ ಪ್ರಕಟವಾದಂತೆ ಮೊದಲಿನ ಚಿತ್ರಗಳು 'ಜಯಕರ್ನಾಟಕ' ದಲ್ಲಿ ಆಗೀಗ ಬೆಳಕಿಗೆ ಬಂದವು. ಹೀಗೆ ಸವ್ಯಸಾಚಿಯಾಗಿ ಕುಂಚವನ್ನೂ ಲೆಕ್ಕಣಿಕೆಯನ್ನೂ ಕೂಡಿಯೇ ಹಿಡಿದ ಕಲೋಪಾಸಕರು ನಮ್ಮ ನಾಡಿನಲ್ಲಿ ವಿರಳರೆಂದೇ ಹೇಳಬೇಕು. ಒಮ್ಮೆ ಸಂಗಮರು ಬಂಗಾಲಿ ಸಾಹಿತ್ಯದಲ್ಲಿಯೇ ಸಮಾವೇಶವಾಗಿ ಹೋಗುವ ಸಂಭವವಿತ್ತು. ಶಾಂತಿನಿಕೇತನದಲ್ಲಿದ್ದು ಬಂಗಾಲಿಯನ್ನು ಕಲಿತು ಆ ಭಾಷೆ ಯಲ್ಲಿಯೇ ಅವರು ಬರೆಯಲು ಪ್ರಾರಂಭಿಸಿದರು. ಅವರ ಕೃತಿಗಳು ವಂಗ ಸಾಹಿತಿಗಳ ಮನಸ್ಸನ್ನು ಹಿಡಿದವು. ಸಂಗಮರು ಬಂಗಾಲದಲ್ಲಿಯೇ ನೆಲಿಸ ಬೇಕೆಂದು ಅವರೆಲ್ಲರ ಇಚ್ಛೆಯಾಗಿತ್ತು. ಆದರೆ ಕನ್ನಡದ ಮೇಲಿನ ಮಮತೆಗೇ ಕೊನೆಗೆ ಮೇಲುಗೈಯ್ಯಾಗಿ ಅದು ಅವರನ್ನು ಇಲ್ಲಿ ತಂದುಬಿಟ್ಟಿತು. ನಮ್ಮ ನಾಡಿನಲ್ಲಿ ಯಾವ ಕಲೆಯ ಸ್ಥಾನ-ಮಾನಗಳೂ ಇನ್ನೂ ಪ್ರಸ್ಥಾಪಿತವಾಗಿಲ್ಲ. ಇದರಿಂದ ಕಲೋಪಾಸಕರಿಗೆ ಒಮ್ಮೊಮ್ಮೆ ಕಲೆಯ ನೆಲೆಯು ತಿಳಿದರೂ ತಮ್ಮ ನೆಲೆಯು ಹತ್ತುವದಿಲ್ಲ. ನಾಡಿನ ಮೇಲಿನ ಪ್ರೇಮವೊಂದೇ ಅವರನ್ನು ಮುಂದುವರಿಸುತ್ತದೆ. ನಾಡಿನ ಪ್ರಗತಿಯಲ್ಲಿ ಈ ಅವಸ್ಥೆಯೂ ಅನಿವಾರ್ಯ ವಾದುದು.

ಕನ್ನಡಕ್ಕೆಂದು ಗೆ. ಸಂಗಮರು ಮೀಸಲಾಗಿರಿಸಿದ ಕಲಾಸಿದ್ಧಿಯು ಕಾವ್ಯದಲ್ಲಿಯೂ ಚಿತ್ರದಲ್ಲಿಯೂ ಇನ್ನೂ ಹೆಚ್ಚಾಗಿ ರೂಪಗೊಂಡು ನಾಡಿನೆದೆ ಯನ್ನು ತಣಿಸಲಿ.

ವಿಲಿಂಗ್ಡನ್ ಕಾಲೇಜು
ಸಾಂಗಲಿ
೧೦—೬—೧೯೪೩

ವಿ. ಕೃ. ಗೋಕಾಕ

# ಅಕ್ಕ-ತಂಗಿ

೧

ಚಳಿಗಾಲದ ಮಧ್ಯಾಹ್ನ. ಅರಣ್ಯದ ಪಕ್ಕದಲ್ಲಿದ್ದ ಊರು ನೀರವ ನಿಸ್ತಬ್ಧ. ಹಾದಿಯು ಬದಿ. ಒಂದು ಬಡವರ ಮನೆಯ ಚಿಕ್ಕ ಅಂಗಳದಲ್ಲಿ ಸಾಕು ನಾಯಿಯು ಬಿಸಿಲಿಗೆ ಮೈಯೊಡ್ಡಿ ಮಲಗಿದೆ. ಜೀರ್ಣ ಚಪ್ಪರದ ತೊಲೆಗೆ ತೂಗುತ್ತಿದ್ದ ಬಿದಿರಿನ ಪಂಜರದಲ್ಲಿ ಗಿಳಿಯೂ ರೆಕ್ಕೆ ಬಿಚ್ಚಿ ಬಿಸಿಲು ಕಾಸುತ್ತಿದೆ.

ಅಡವಿಯ ಒಡಲೊಳಗಿಂದ ಇಬ್ಬರು ಬೇಟೆಗಾರರು ಆ ಊರ ದಾರಿಗೆ ಬಂದು ಕೂಡಿದರು. ಇಬ್ಬರ ಹೆಗಲ ಮೇಲೂ ಬಂದೂಕು; ಕೈಯಲ್ಲಿ ಕೆಲವು ಮೃತ ಪಕ್ಷಿಗಳು. ಒಬ್ಬನು ಇನ್ನೊಬ್ಬನಿಗೆ, 'ಯಾಕೆ ಜಗದೀಶ, ಇನ್ನೂ ಹುಬ್ಬುಗಂಟಿಕ್ಕಿರುವೆ?' ಎಂದ.

ಇನ್ನೊಬ್ಬ ಬೇಸರದ ದನಿಯಲ್ಲಿ 'ಇದೇನು ಕಡಮೆ ಪರಿತಾಪವೇ ಸುರೇಶ! ಅಷ್ಟು ಹಂಸಗಳು! ಅವುಗಳಲ್ಲಿ ಒಂದಕ್ಕೂ ಗುರಿಯಿಡ ಲಾಗಲಿಲ್ಲ?'

'ಯಾಕೆ? ಕೈಯ್ಯಲ್ಲಿದ್ದಷ್ಟು ಬೇಟೆ ಸಾಲದೆ?'

'ಆದರೂ ಒಳ್ಳೇ ಪುಷ್ಟ ಹಂಸಗಳು! ಅವಕ್ಕೇ ಎರವಾದೆವಲ್ಲ! ಆದರೆ ಸುರೇಶ, ಇದು ನಿನ್ನದೇ ತಪ್ಪು. ಬೇಟೆಗೆ ಬಂದೂ ದಯೆಯೆ!'

'ಆಹಾ' ಎಂದು ಏನನ್ನೊ ಹೇಳಬೇಕೆಂದವನು ಅಷ್ಟಕ್ಕೇ ಮಾತು ನಿಲ್ಲಿಸಿ ಸುರೇಶನು ಬದಿಗಿದ್ದ ಅಂಗಳದ ಕಡೆಗೆ ಕುತೂಹಲದಿಂದ ನೋಡ ತೊಡಗಿದನು. ವಿಷಯವೇನೆಂದು ಜಗದೀಶನೂ ಅತ್ತ ನೋಡಿದನು.

ಚಿಕ್ಕ ಅಂಗಣದಲ್ಲಿದ್ದ ಮಾವಿನ ಮರದ ಅಡಿಯಲ್ಲಿ ಹುಡಿಗೆಯೊಬ್ಬಳು ಕುಳಿತು ಆಡುತ್ತಿದ್ದಳು. ವಯಸ್ಸಾದ ಒಬ್ಬ ವಿಧವೆಯು ಹಿಂದೆ ನಿಂತು ಸ್ನೇಹ

ಸ್ವರದಿಂದ ‘ ಛೀ ಮಗು, ಹೀಗೆ ಹುಡಿಯಲ್ಲಿ ಆಡುವದೆ? ಇದೋ ಕೂದಲೆಲ್ಲ ಹುಡಿಯಲ್ಲಿ ತೊಡೆದು ಹೋಗಿವೆ ’ ಎನ್ನುತ್ತ ಹುಡಿಗೆಯ ಬೆನ್ನ ಮೇಲೆ ತೂಗು ಬಿದ್ದ ಕುಂಚಿತ ಕೇಶರಾಶಿಯನ್ನು ಎತ್ತಿ ಹಿಡಿದಳು. ಬಾಲಿಕೆಯು ಆಗ ಕುಲು ಕುಲು ನಗುತ್ತ ತಾಯಿಯ ಕಡೆಗೆ ನೋಡಿದಳು. ಎಷ್ಟು ಸುಂದರ ಸರಳ ಮುಖವದು? ನಗೆಯುಗುವ ಸುಶೀಲ ಕಣ್ಣುಗಳೇನು? ಬಡವರ ಮನೆಯ ಅಂಗಳದಲ್ಲಿ ಅದೊಂದು ಗುಲಾಬಿಯ ಹೂವು ಅರಳಿದ ಹಾಗೆ!

ಜಗದೀಶನು ಸುರೇಶನ ಕಡೆಗೆ ನೋಡಿ ನಕ್ಕು ‘ ಅದೇನು ಅಷ್ಟು ನೋಡುವೆ? ’ ಎಂದನು.

ಸುರೇಶನು ಮುಖ ತಿರುಗಿಸಿ ನಕ್ಕು, ‘ ನೀನು ನೋಡುವದನ್ನೇ ’ ಎಂದನು.

‘ನನಗೇನು ಹೊಸದಲ್ಲ. ಸ್ನೇಹಾ ನನ್ನ ತಂಗಿಯ ಹಾಗೆ! ನಮ್ಮ ಮನೆಗೆ ಬಹಳ ದಿನದಿಂದ ಬರುತ್ತಾಳೆ. ’

‘ ಸ್ನೇಹಾ ಎಂದು ಆ ಹುಡಿಗೆಯ ಹೆಸರೆ? ’

‘ ಹೌದು, ಚನ್ನಾಗಿದ್ದಾಳೆ, ಅಲ್ಲವೆ? ’

‘ ಹೌದು, ಈಗ ಬೇಗ ಮನೆಗೆ ಹೋಗೋಣ ನಡೆ. ಚಹ ಕುಡಿದಲ್ಲದೇ ಯಾವದೂ ತೋಚುವುದಿಲ್ಲ. ’

‘ ಹಾ, ಜಪದ ಮಾತು–ಒಳಿತೇ ಆಯಿತು. ತಿರುಗಿತಿರುಗಿ ಕಾಲು ನೋಯುವವು. ’

ತುಸು ದೂರ ಬರುತ್ತಲೇ ಇಬ್ಬರೂ ಒಂದು ಅಂತಸ್ತಿನ ಮನೆಯಲ್ಲಿ ಹೊಕ್ಕರು. ಜಗದೀಶನು ಬೇಟಿಯನ್ನು ಒಗೆದು, ದಣಿದು ಬೇಸರಗೊಂಡದ್ದರಿಂದ ಹಾಗೂ ಹೀಗೂ ಸ್ಟೋವ ಹೊತ್ತಿಸಿ ಚಹಕ್ಕೆ ಎಸರಿಟ್ಟನು. ಸುರೇಶನು ಅಷ್ಟು ಹೊತ್ತು ಪಲ್ಲಂಗದ ಮೇಲೆ ಮಲಗಿ ಕಾಲು ಚಾಚಿದನು. ಒಮ್ಮೆಗೇ ಸುರೇಶನು ‘ ಜಗದೀಶ, ಇನ್ನು ವಿಲಂಬವು ಬೇಡ ತಿಳಿಯಿತೆ? ನಾನು ನಾಳೆಯೇ ಹೊರಡುವೆ. ತಂದೆ ಬಯ್ಯುವರು.’

ಜಗದೀಶನು ಬೆದರಿಸಿ, ‘ ಬಯ್ಯುವರೇನು? ಇನ್ನೆರಡು ದಿನ ಕಣ್ಣು ಮುಚ್ಚಿ ಸುಮ್ಮನೆ ಇದ್ದು ಬಿಡು. ಇನ್ನು ಬಹುದಿನ ನಾನು ನೀನು ಕೂಡುವದಿಲ್ಲ. ಈ ಮಾತು ಹೇಗೆ ನಿನಗೆ ಹೊಳೆಯದೊ! ಬೇಕೆಂದೇ ಒಬ್ಬರನ್ನೊಬ್ಬರು ಕಾಣಲು ಬರುವದು ಆಗುವದಿಲ್ಲ ನೋಡು. ನಾನಂತೂ ಇನ್ನು ಕಲಕತ್ತೆಯಲ್ಲಿ ಇರುವ ಕಾರಣವಿಲ್ಲ. ’

ಆಮೇಲೆ ಯಥಾರೀತಿ ಇಬ್ಬರೂ ಚಹಾಪಾನಕ್ಕಾರಂಭಿಸಿದರು.

ಮರುದಿನ ಬೈಗಿನ ಕಡೆಗೆ ಜಗದೀಶನು ತನ್ನ ಔಷಧದ ಪೆಟ್ಟಿಗೆಯೊಂದಿಗೆ ಉದ್ವಿಗ್ನನಾಗಿ ಹೊರಬೀಳುವದನ್ನು ಸುರೇಶನು ನೋಡಿ, ‘ ಎಲ್ಲಿಗೆ ’ ಎಂದು ಕೇಳಿದನು.

‘ ನೆರೆಮನೆಗೆ; ಅಲ್ಲಿ ಒಂದು ಹುಡುಗಿಗೆ ಬಹಳ ಜ್ವರವಂತೆ. ಕರೆಯ ಬಂದಿದ್ದರು. ’

‘ ಔಷಧ ಕೊಟ್ಟು ಬರುವೆಯಾ? ’

‘ ಹೌದು, ನಮ್ಮಂಥ ಡಾಕ್ಟರರನ್ನು ಸಹಾಯ ಸಂಪತ್ತಿಹೀನರಲ್ಲದೆ ಇನ್ನಾರು ಕರೆಯುವರು? ಹುಡುಗೆಯ ಜ್ವರ ಸ್ವಲ್ಪ ಅಡ್ಡಡ್ಡ ಹೊರಟಿದೆ. ರೆಮಿಟೆಂಟ್ ಫೀವರಿನ ಲಕ್ಷಣಗಳಿವೆ. ಹಾ, ಸುರೇಶ, ನೀನು ನಿನ್ನೆ ಆ ಹುಡುಗೆಯನ್ನು ನೋಡಲಿಲ್ಲವೆ? ಅವಳೇ. ನಡೆ, ಇಬ್ಬರೂ ಹೋಗಿ ನೋಡಿ ಔಷಧ ಗೊತ್ತು ಮಾಡೋಣ. ಸ್ಥಿತಿ ನೆಟ್ಟಗಿಲ್ಲ. ಎರಡನೇ ಡಾಕ್ಟರರನ್ನು ಕರೆಯುವದು ಅವರಿಗೆ ಸಾಧ್ಯವಿಲ್ಲ. ’

ಸುರೇಶನೂ ಒಪ್ಪಿದನು. ಆಹಾ ಅಷ್ಟು ಚೆಲುವೆ ಹುಡಿಗೆ! ಹೋಗ ಬೇಡವೆ? ಔಷಧದ ಪೆಟ್ಟಿಗೆಯೊಂದಿಗೆ ಇಬ್ಬರೂ ಹೊರಬಿದ್ದರು.

ಬೀಳಲಾದ ಮನೆಯಲ್ಲಿ ಒಂದು ಹೊರಸಿನ ಮೇಲೆ ಮಾಸಿದ ಹಾಸುಗೆಯಲ್ಲಿ ಹುಡುಗಿಯು ಜ್ವರತಪ್ತ ಕೆಂಪು ಮುಖವು ಇನ್ನೂ ಚನ್ನಾಗಿಯೇ ಕಂಡಿತು. ಮಗ್ಗುಲಲ್ಲಿ ಮ್ಲಾನಮುಖದಿಂದ ತಾಯಿ ಕುಳಿತು ಮಗಳ ತಲೆಯ ಮೇಲೆ ಕೈಯಾಡಿಸುತ್ತಿದ್ದಳು. ಇಬ್ಬರೂ ಗೆಳೆಯರು ಚನ್ನಾಗಿ ಪರೀಕ್ಷಿಸಿ ನಿರೀಕ್ಷಿಸಿ ನೋಡತೊಡಗಿದರು. ಜ್ವರದ ಆಯಾಸದಿಂದ ಹುಡುಗಿಗೆ ಎಚ್ಚರದಪ್ಪಿದಂತಾಯಿತು. ಔಷಧ ಕೊಟ್ಟು, ಶುಶ್ರೂಷೆಯ ಬಗ್ಗೆ ತಾಯಿಗೆ ಚನ್ನಾಗಿ ತಿಳಿಸಿ ಹೇಳಿ ಇಬ್ಬರೂ ಮರಳಿ ಮನೆಗೆ ಬಂದರು.

ಮರುದಿನ ಮುಂಜಾನ ಸುರೇಶನಿಗೆ ಕಲಕತ್ತೆಗೆ ಹೊರಡುವದಾಗಲಿಲ್ಲ. ಓರ್ವ ಬಾಲಿಕೆಯ ಪ್ರಾಣವು ಅವರ ಕೈಯಲ್ಲಿ. ಜಗದೀಶನೊಬ್ಬನಿಗೇ ಸಾಹಸವಾಗಲೊಲ್ಲದೆಂದೋ ಅಥವಾ ಹುಡುಗಾಟಿಕೆಯಿಂದಲೋ ಹೋಗಗೊಡಲೊಲ್ಲ. ಅಂತೂ ಇಬ್ಬರ ಪ್ರಯತ್ನದ ಫಲವಾಗಿ ಹುಡುಗೆಯ ಜ್ವರ ಒಂದು ವಾರದಲ್ಲಿ ಇಳಿದುಹೋಯಿತು. ತಾಯಿ ಇಬ್ಬರನ್ನೂ ಹಾಡಿಹರಿಸಿದಳು. ಸುರೇಶನು ಸ್ವಜಾತೀಯನೆಂದು ತಿಳಿದ ಮೇಲಂತೂ ಅವಳಿಗೆ ಇನ್ನೂ ಆನಂದವಾಯಿತು. ಅವನನ್ನು ತೋರಿಸಿ, ‘ ಸ್ನೇಹಾ, ಇವರಿಗೆ ಪ್ರಣಾಮ

ಮಾಡು. ಇವರು ನಿನಗೆ ಅಣ್ಣನಾಗಬೇಕು.' ಮಲಗಿದಲ್ಲಿಂದಲೇ ತಲೆ ಬಾಗಿಸಿ ಬಾಲಿಕೆಯು ಪ್ರಣಾಮ ಮಾಡಿದಳು. ಅವನು ನಗೆಮೊಗದಿಂದ ಅವಳ ತಲೆ ತಟ್ಟಿದನು. ಸ್ನೇಹಳಿಗೆ ಈಗ ಹನ್ನೊಂದು ವರ್ಷಕ್ಕೆ ಮಿಕ್ಕಿರಲಾರದು.

ಸುರೇಶನು ಕಲಕತ್ತೆಗೆ ಹೊರಟು ಹೋದನು. ಮತ್ತೆ ಕಾಲೇಜು, ಲೆಕ್ಚರು, ನಾಟಕ, ಸಿನೇಮಾ ಇತ್ಯಾದಿಗಳಲ್ಲಿ ಎರಡು ದಿನದ ಹಳ್ಳಿಯ ಜೀವ-ನದ ಆಮೋದವು ಇನ್ನುಳಿದ ಘಟನೆಗಳೊಂದಿಗೆ ಕನಸಿನ ಹಾಗೆ ಮನಸ್ಸಿನ ಒಂದು ಮೂಲೆಯಲ್ಲಿ ಸರಿದು ಹೋಯಿತು.

ಸುರೇಶನ ತಂದೆ ಸಂತೋಷಬಾಬುವು ರಾಣೀಗಂಜಿನ ಜಮೀನುದಾರ. ದೊಡ್ಡಮನೆ, ಜೋಡುಕುದುರೆಯ ದೊಡ್ಡ ವಾಹನ, ದೊಡ್ಡ ಹೊಟ್ಟೆ ಇಷ್ಟೆಲ್ಲಕ್ಕೂ ಪ್ರಭುವಾದ ಸಂತೋಷಬಾಬುವಿನ ಹೆಸರು ಕೇಳುತ್ತಲೇ ಎಲ್ಲರೂ ನಯಭಯದಿಂದ ಸಂಕೋಚ ಪಟ್ಟುಕೊಳ್ಳುವರು. ಆದರೆ ತಾಯಿಯನ್ನು ಕಳೆದುಕೊಂಡವನೆಂದು ಮಗ ಸುರೇಶನಿಗೆ ತಾನೇ ತಾಯಿಯೂ ಆಗಿದ್ದನು. ಮಗನು ಏನೇ ಬೇಡಲಿ, ಅಥವಾ ಕಾಡಲಿ ಅದನ್ನು ಸ್ನೇಹಶೀಲ ಮಾತೆಯಂತೆ ಆಗಲೇ ಪೂರೈಸಿ ಮಗನ ಆನಂದ ವಿಕಸಿತ ಮುಖವನ್ನೇ ನೇಹದುಂಬಿದ ಕಣ್ಣುಗಳಿಂದ ನೋಡಿ ನೋಡಿ ನಲಿಯುವನು. ಎಂದೇ ತಾಯಿಯ ಅಭಾವವು ಸುರೇಶನಿಗೆ ಅಷ್ಟು ಅನಿಸಿಲ್ಲ. ಅಲ್ಲದೆ ಸಂತೋಷಬಾಬುವು ಅತಿ ಸದಾಶಯ ಜಮೀನುದಾರನು. ಅವನದು ಅಪರಿಮಿತ ಉದಾರಹಸ್ತ. ಎಂದೇ ನ್ಯಾಯ ಶೀಲ. ಇದನ್ನು ಅವನ ಪ್ರಬಲ ಪ್ರತಿಪಕ್ಷಿಯಾದ ಚೌಧುರಿಯವರೂ ಒಪ್ಪು-ವರು. ಉದಾರತೆಯ ಮೂಲಕ ಮತ್ತು ಪ್ರಜಾಜನರ ಶಾಸನದಲ್ಲಿ ನಿಷ್ಠುರನಲ್ಲದ ಮೂಲಕ ಅವನ ಆಯವು ದಿನದಿನಕ್ಕೆ ಕರಗುತಿತ್ತಲ್ಲದೆ ಹೆಚ್ಚುತ್ತಿರಲಿಲ್ಲ. ಸಂತೊಷಬಾಬುವಿಗೆ ಧನ ಸಂಚಯ ಮಾಡಲು ಆಗಿಲ್ಲವೆಂದು ಯಾರಾದರೂ ಅಂದರೆ ಆ ಮಾತನ್ನು ಮಾತ್ರ ಚೌಧುರಿಯವರು ಒಪ್ಪುತ್ತಿರಲಿಲ್ಲ.

ನವರಾತ್ರಿಯಲ್ಲಿ ದುರ್ಗಾಪೂಜೆಯ ದಿನಗಳು. ಸುರೇಶನು ಊರಿಗೆ ಹೋಗಲು ಅನುವಾಗಿದ್ದಾನೆ. ಅಷ್ಟರಲ್ಲಿ ಗೆಳೆಯ ಜಗದೀಶನು ಒಂದು ದಿನ ಅನಿರೀಕ್ಷಿತನಾಗಿ ಅವನ ಕಲಕತ್ತೆಯ ವಾಸಸ್ಥಾನಕ್ಕೆ ಬಂದುಬಿಟ್ಟನು. ಪೂಜಾ ನಿಮಿತ್ತವಾಗಿ ಕೊಂಡ ವಿಧವಿಧದ ಕಾಣಕೆಗಳೊಡನೆ ಸುರೇಶನನ್ನೂ ಬಲವಂತ ಮಾಡಿ ಊರಿಗೆ ಕರೆದೊಯ್ದುಬಿಟ್ಟನು. ಆ ವರ್ಷ ಅವರ ಮನೆಯಲ್ಲಿ ದುರ್ಗೋತ್ಸವವಂತೆ. ಜಗದೀಶನು ಡಾಕ್ಟರ್‌ಪರೀಕ್ಷೆಯನ್ನು ಪಾಸಾದ ಮೇಲೆ ಅವನ ತಾಯಿ ಬೇಡಿಕೊಂಡಿದ್ದಳಂತೆ. ಜಗದೀಶನು, ಅವಳು ಹೊತ್ತ ಹರಕೆಯನ್ನು ಸಲ್ಲಿಸಲು ಸುರೇಶನಿಗೂ ಸಹಾಯ ಮಾಡಲು ಕೇಳಿದನು. ಅವನಿಗೆ

ತಮ್ಮನಿಲ್ಲ. ಸುರೇಶನೇ ತಮ್ಮನಂತೆ. ತಾಯಿಯ ಈ ಕಾರ್ಯದಲ್ಲಿ ಸುರೇಶನೂ ಓಡಾಡಬೇಕು ಎಂದು ಜಗದೀಶನ ಆಸೆ. ಇಷ್ಟರ ಮೇಲೆ ಸುರೇಶ ಒಲ್ಲೆನೆನ್ನಲಾರ. ತಾಯಿಯಿಲ್ಲದವರು 'ತಾಯಿ' ಎಂದೊಡನೆ ಕರಗಿ ಹೋಗುವರು.

ಪೂಜಾದಿನಗಳು ಒಳ್ಳೇ ಆನಂದದಲ್ಲಿ ಕಳೆದವು. ತನ್ನಂತಹ ಭಾಗ್ಯವಂತರ ಮನೆಯ ಉತ್ಸವಕ್ಕಿಂತ ಬಡವರ ಮನೆಯ ಈ ಪೂಜಾ ಉತ್ಸವದಲ್ಲಿ ಅನೇಕ ಕುಂದುಕೊರತೆಗಳು ಕಂಡಿದ್ದರೂ ಅನಾಡಂಬರವಾದ ಹೃದ್ಯತೆಯ ಮೂಲಕ ಸುರೇಶನಿಗೆ ಎಲ್ಲವೂ ರಂಜಿತವಾಗಿ ಕಂಡವು. ಇನ್ನುಳಿದವರಂತೆ ಆವನೂ ವಿನಯವಾಗಿ ಎಲ್ಲರ ಪರಾಮರಿಕೆಯಲ್ಲಿ ಓಡಾಡುವದನ್ನು ನೋಡಿ ಹಳ್ಳಿಯ ಹೆಂಣುಮಕ್ಕಳಿಗೆ ಅಚ್ಚರಿಯೆನಿಸಿತ್ತು.

ವಿಜಯ ದಶಮಿಯ ರಾತ್ರಿ ಪ್ರತಿಮಾ ವಿಸರ್ಜನೆಯ ನಂತರ ಮನೆಮನೆಯಲ್ಲಿ ಮಂಗಲ ಸಂಭಾಷಣವೂ, ಪ್ರಣಾಮ, ಆಶೀರ್ವಾದ ಆಲಿಂಗನಾದಿಗಳೂ ನಡೆದಿವೆ. ಜಗದೀಶನು ಸುರೇಶನನ್ನು ತೋಳಿನಲ್ಲಿ ಸುತ್ತಿಕೊಂಡು 'ಇಂದು ಹೋಗಲೇಬೇಕೆ?' ಎಂದನು.

'ಹೌದು, ಹೋಗಲೇಬೇಕು ಜಗದೀಶ. ತಂದೆಯವರಿಗೆ ಇದನ್ನೆಲ್ಲ ಬರೆದು ತಿಳಿಸಿರುವೆನಾದ್ದರಿಂದ ಅವರು ಏನೂ ಅನ್ನುವದಿಲ್ಲ; ನಿಜ. ಆದರೆ ನನಗೆ ಗೊತ್ತು, ವಿಜಯದಶಮಿಯ ದಿನ ನನ್ನನ್ನು ನೋಡದಿದ್ದರೆ ಅವರ ಮನಸ್ಸಿಗೆ ಸಮಾಧಾನವಿರುವದಿಲ್ಲ. ಮತ್ತು––'

'ಮತ್ತು ಸ್ವತಃ ನೀನು ಇನ್ನೂ ಹಸುಗೂಸು; ಆದ್ದರಿಂದ ನಿನ್ನದೂ ಮನಸ್ಸು ನಿಲ್ಲದು, ಅಲ್ಲವೆ?'

'ಇಲ್ಲದ ಚೇಷ್ಟೆ ನಿನ್ನದು! ವಾಃ – ಹುಡಿಗೆ ಅತಿ ರೂಪವತಿ! ಯಾರ ಮಗಳೋ?'

ಜಗದೀಶನು ತಿರುಗಿ ನೋಡುತ್ತಾನೆ– ಒಂದು ದಳ ಬಾಲಿಕೆಯರು ಇವರಿದ್ದಲ್ಲಿಗೇ ಬರುತ್ತಾರೆ. ದಲದಲ್ಲಿ ನೀಲಾಂಬರಿಯನ್ನುಟ್ಟ ಬಾಲಿಕೆಯೇ ಗೆಳೆಯನ ನೋಟವನ್ನು ಸೆಳೆದುಕೊಂಡವಳು. ಜಗದೀಶನು ಅದನ್ನರಿತು ನಗುನಗುತ್ತ 'ಹೇಳು ನೋಡೋಣ ಯಾರು?'

'ಎಲ್ಲಿಯೋ ನೋಡಿದ ಹಾಗೆ ಅನಿಸುವದೊ! ಓ– ನೆನಪಾಯಿತು– ಜ್ವರದಿಂದ ಮಲಗಿದವಳು ಇವಳೇ ಅಲ್ಲವೇ ಅಂದು?' ಎಂದು ಸುರೇಶನು ತಟ್ಟನೇ ನಿಂತುಬಿಟ್ಟನು.

ಬಾಲಿಕೆಯರ ದಳವು ಇವರೆಡೆಗೆ ಬಂದು ಒಬ್ಬೊಬ್ಬರೂ ನಮಸ್ಕರಿಸ ತೊಡಗಿದರು. ಜಗದೀಶನು ಎಲ್ಲರನ್ನೂ ಮಾತನಾಡಿಸಿ ನಗಿಸಿ ತಾನೂ ನಕ್ಕು 'ಮನೆಯೊಳಕ್ಕೆ ಹೋಗಿರಿ, ತಾಯಿ ತಿನ್ನಲು ಸಿಹಿ ತಿನಿಸು ಕೊಡುತ್ತಾಳೆ' ಎಂದನು.

ದಲದ ಮುಂದಾಳು ಮುಂದೆ ಬಂದು 'ನಾವು ಮೊದಲು ಎಲ್ಲರ ಮನಗೆ ಹೋಗಿ ನಮಸ್ಕಾರ ಮಾಡಿ ಬರುತ್ತೇವೆ' ಎಂದಳು.

'ಹಾಗಾದರೆ ನೀವು ತಿನಿಸು ತಿಂದ ಹಾಗೆಯೆ! ಆದಾಗದು. ಮೊದಲು ತಿಂದು ಆಮೇಲೆ ಹೋಗಿರಿ.'

ಸ್ನೇಹಾ ತಲೆಬಾಗಿಸಿ ಮೆಲ್ಲಗೆ 'ಜಗದೀಶಣ್ಣಾ, ಅಮ್ಮ ನಿಮ್ಮನ್ನು ಕರೆದಿದ್ದಾಳೆ' ಎಂದಳು. ಜಗದೀಶನು ವಿಚಲಿತನಾಗಿ 'ಅವರನ್ನು ಕಂಡು ಪ್ರಣಾಮ ಮಾಡಿ ಬರಲು ಇಷ್ಟರಲ್ಲಿ ಹೋಗುವವರೇ ಇದ್ದೆವು! ಸುರೇಶ, ನಡೆ ಹೋಗುವಾ.'

ಸುರೇಶನು ಹಿಂದೆ ಮುಂದೆ ನೋಡುತ್ತ 'ಟ್ರೇನಿಗೆ ಸಮಯ ಸಿಕ್ಕಬಹುದಷ್ಟೇ ?'

'ಬೇಕಾದಷ್ಟು, ನಡೆ ಹೋಗಿಬರೋಣ.'

ಇಬ್ಬರೂ ಹೋಗಿ ನೋಡಿದರು– ಅದೇ ಜೀರ್ಣಗೃಹದ ಅಂಗಳದಲ್ಲಿ ಬಿದ್ದ ಸ್ವಚ್ಛ ಬೆಳದಿಂಗಳಲ್ಲಿ ದರಿದ್ರ ವಿಧವೆ ಎರಡು ಆಸನಗಳನ್ನು ಹಾಕಿ ತಕ್ಕಷ್ಟು ತಿನಿಸನ್ನಿರಿಸಿ ಕುಳಿತಿದ್ದಾಳೆ. ಅವರಿಬ್ಬರೂ ಬರುವುದನ್ನು ಕಂಡು ಅವಳ ಆನಂದ ಆಶೆಪಟ್ಟಿಷ್ಟರ ಎಷ್ಟೋ ಪಟ್ಟು ಬಳ್ಳಿವರಿಯಿತು. ಸುರೇಶನು ಅವಳ ಅತಿರಿಕ್ತ ಸತ್ಕಾರದಿಂದ ಕುಂಠಿತನಾಗತೊಡಗಿದನು. ವಿಧವೆಯು ಜಗದೀಶನಿಗೆ, 'ಮಗೂ, ನಿಮ್ಮ ಉಪಕಾರ ನಾನು ಸಲ್ಲಿಸಬಲ್ಲೆನೆ? ನೀನು ನಿನ್ನ ಬಡ ಕಕ್ಕಿಗೆ ಅಷ್ಟಿಷ್ಟು——'

ಅವನು ಅಷ್ಟಕ್ಕೇ ತಡೆದು 'ಇದೆಲ್ಲ ಏನು ಹೇಳುವಿರಿ ಕಕ್ಕಿ? ನೀವು ನನಗೆ ಕಕ್ಕಿಯಾಗಬೇಕೆಂದಷ್ಟೇ ನನಗೆ ಗೊತ್ತು.—ಅದೆಲ್ಲ ಮಾತು ಹಾಗಿರಲಿ, ಸುರೇಶನಿಗೆ ಟ್ರೇನಿನ ಸಮಯವಾಗಿದೆ. ಇನ್ನು ವಿಲಂಬ ಮಾಡುವುದು ಬೇಡ' ಎಂದನು.

ವಿಧವೆ ಏನೋ ಹೇಳಬೇಕೆಂದಿದ್ದಳು. ಜಗದೀಶನ ಅವಸರದಲ್ಲಿ ಹೇಳಬೇಕೆಂದ ಮಾತು ಉಳಿದುಹೋಯಿತು.

ಇಬ್ಬರೂ ನಮಸ್ಕರಿಸಿ ನಿರೋಪ ತೆಗೆದುಕೊಂಡು ಹೊರಟರು. ದಶಮಿಯ ತಿಳಿ ಬೆಳದಿಂಗಳಿನಲ್ಲಿ ಊರ ದಾರಿ ಬೆಳಗುತ್ತಿದೆ. ಊರ ಹುಡುಗರು ಯುವಕರು ಇನ್ನೂ ನಗುತ್ತ ಕೆಲೆಯುತ್ತ ಬೀದಿ ಬೀದಿಗಳಲ್ಲಿ ಅಲೆಯುತ್ತ ನಮಸ್ಕಾರದ ಸಂಭ್ರಮದಲ್ಲಿ ಮನೆಮನೆಗೆ ಹೋಗುತ್ತಾರೆ, ಬರುತ್ತಾರೆ. ಎಲ್ಲಿಯೋ ಒಬ್ಬ ಹಳ್ಳಿಯ ಹುಡುಗನು ಡುಮುಕಿ ಬಾರಿಸುತ್ತ ಹಾಡುತ್ತಾನೆ-

ಹರ ನೀನು ಎನಗಿನ್ನು । ಪರನಲ್ಲವಯ್ಯಾ ।
ಮಗಳನ್ನು ಕೊಟ್ಟು ನಾ । ಮಗನನ್ನು ಪಡೆದಿರುವೆ ।
ಅಳಿಯ ಮೃತ್ಯುಂಜಯಾ । ಹರ ನೀನು ಎನಗಿನ್ನು ಪರನಲ್ಲವಯ್ಯಾ ॥
ಪ್ರಾಣಸಮಾ ಉಮಾ ನನಗೆ । ಇಂದಿನಿಂದ ಸತಿಯು ನಿನಗೆ ।
ನಲ್ಲೆಯೆಂದು ನನ್ನಿಗರೆವೆ । ಬಲ್ಲೆನಾದರೂ ।
ಮಗಳ ಮೋಹದಿಂದ ನುಡಿವೆ । ಮುನಿಸುಗೊಳದಿರು ॥

ಜಗದೀಶನು ಒಮ್ಮೆಗೇ ನಿಸ್ತಬ್ಧತೆಯನ್ನು ಭೇದಿಸಿ ' ತನ್ನವರೆಂದು ಅವರಿಗೆ ಯಾರೂ ಇಲ್ಲವಾದ್ದರಿಂದ ನನ್ನನ್ನು ಮಗನಂತೆ ನೋಡುತ್ತಾರೆ. ಎಲ್ಲ ಭಾರವನ್ನು ನನಗೊಪ್ಪಿಸುತ್ತಾರೆ. ಆದರೆ ನನ್ನಿಂದ ಏನನ್ನೂ ಮಾಡಲಾಗಿಲ್ಲ. ನನ್ನ ಸ್ಥಿತಿಗತಿಯಾದರೂ ನೀನು ಅರಿಯದ್ದಲ್ಲ. ದುಡಿದು ತಿನ್ನುವವರಿಗೆ, ಹಗಲಿರುಳು ತಮ್ಮ ತಮ್ಮ ಸಂಸಾರದ ಚಿಂತೆಯಲ್ಲಿ ಇರಬೇಕಾದವರಿಗೆ, ಅನ್ಯರ ಉಪಕಾರವನ್ನಾಗಲೀ ಇನ್ನಾವ ಒಳ್ಳೆಯ ಕೆಲಸವನ್ನೇ ಆಗಲಿ ಮಾಡುವ ಉಪಾಯವಿಲ್ಲ. ಆದರೆ ಕಕ್ಕಿಯವರು ಬಹಳ ಒಳ್ಳೆಯವರು. ಅವರೊಡನೆ ಪ್ರಸನ್ನ ಮುಖದಿಂದ ಒಂದೆರಡು ಮಾತನಾಡಿದರೂ ಸಾಕು. ಅವರು ಅತ್ಯಂತ ಉಪಕೃತರೆಂದು ತಿಳಿದುಕೊಳ್ಳುತ್ತಾರ.

ಸುರೇಶನು, ' ನಿಜವಾಗಿಯೂ ಬಹಳ ಒಳ್ಳೆಯವರು. ಮುಖದಲ್ಲಿ ಒಂದು ಬಗೆಯ ಮಾತೃಭಾವವು ತೆರೆತೆರೆಯಾಗಿ ತೇಲುತ್ತದೆ. ನೋಡಿ ನನಗೂ ಸುಖವೆನಿಸಿತು. ಅವರ ಸ್ಥಿತಿಯೇನು ಬಹಳೇ--' ಎನ್ನುತ್ತಲೇ ಜಗದೀಶನು ನಡುವೇ ತಡೆದು ' ಅದಕ್ಕಾಗಿ ಅಲ್ಲ. ಮಗಳ ಮದುವೆಗಾಗಿ ಬಹಳ ಚಿಂತಿತರಾಗಿದ್ದಾರೆ. '

' ಈಗಾಗಲೇ ? ಹುಡಿಗೆ ಇನ್ನೂ ಚಿಕ್ಕವಳು ! '

' ಚಿಕ್ಕವಳೇ ? ಹನ್ನೊಂದಕ್ಕೆ ಮಿಕ್ಕಿರಬೇಕು. ಹಿಂದುಗಳ ಮನೆಯ ಹೆಂಣು ಇನ್ನೆಷ್ಟು ದಿನ ಹಾಗೇ ಇರಲಾದೀತು ? ಅಲ್ಲದೇ, ಇನ್ನೂ ಅವಕಾಶ

ವಿರುವಾಗಲೇ ಹುಡುಕದಿದ್ದರೆ ಕೊನೆಗೆ ಅಂಥಿಂಥವರ ಕೊರಳಿಗೆ ಹೆಂಣು ಕಟ್ಟಬೇಕಾಗಿ ಬರುವದು. ಸುಪಾತ್ರ ವರನೊಬ್ಬನು ದೊರೆತರೆ ಕಕ್ಕಿಯುವರು ನಿಶ್ಚಿಂತರಾಗುವರು. ಆದರೆ ಅವರು ದರಿದ್ರರು. ನೀನಷ್ಟು ಉಪಕಾರ ಕಟ್ಟಿ ಕೊಳ್ಳುವಿಯಾ ಸುರೇಶ ?– '

ಸುರೇಶನು ಆ ಮಾತಿಗೆ ಉತ್ತರ ಕೊಡದೆ, ' ಅಷ್ಟು ಚಲುವೆ ಹುಡಿಗೆ, ದರಿದ್ರರಾದರೇನಾಯಿತು ? ನೋಡಿದವರು ನಿಶ್ಚಯವಾಗಿ ಪರಿಗ್ರಹಿಸುವರು.'

' ಇಲ್ಲ. ಸುರೇಶ, ನೀನಿನ್ನೂ ಹಸುಳನೆಂದು ತೋರುತ್ತದೆ ! ದೊಡ್ಡವರ ಮನೆ ನೋಡಿ ಒಳ್ಳೆಯ ವರನಿಗೆ ಕನ್ಯೆಯನ್ನು ಕೊಟ್ಟು ಮದುವೆ ಮಾಡುವದು ಇಷ್ಟು ಸುಲಭವೆಂದು ತಿಳಿದಿರುವಿಯಾ? ರೂಪವಿರಲಿ, ಗುಣವಿರಲಿ. ಎಲ್ಲದರ ಮೂಲದಲ್ಲಿ ಇನ್ನೊಂದು ತತ್ವವಿದೆ. ಅದು ಧನ. ಅದು ಇರದಿದ್ದರೆ ಯಾವ ದಕ್ಕೂ ಬೆಲೆಯಿಲ್ಲ. ಈ ಹುಡಿಗೆಯ ರೂಪಕ್ಕಿಂತ ಗುಣವು ಇನ್ನೂ ಒಳ್ಳೆಯದು. ಎಷ್ಟು ಕೋಮಲ; ಎಷ್ಟು ಸರಲ ಸ್ವಭಾವ ! ಆದರೇನು ಸುರೇಶ –– ಮನೆಯಲ್ಲಿ ಮೂಲ ತತ್ವವೇ ಇಲ್ಲ. '

ಸುರೇಶನು ಸ್ವಲ್ಪ ಉತ್ತೇಜಿತನಾಗಿ, 'ಏನು ಜಗದೀಶ ? ಇಷ್ಟು ದಿನ ಇಷ್ಟೊಂದು ಕಲಿತದ್ದರ ಫಲ ಇದೇಯೆ ? ಜಗತ್ತಿನಲ್ಲೆಲ್ಲ ಇದೊಂದೇ ನೀತಿಯೇ ?' ಎಂದನು.

ಜಗದೀಶನು ವ್ಯಂಗಸೂಚಕವಾಗಿ ಹೇಳಿದನು, ' ವಿಶೇಷವಾಗಿ ದೊಡ್ಡ-ವರ ಮನೆಯಲ್ಲಿ ಇದೇ ನೀತಿಯೆ. '

' ಅನ್ಯಾಯದ ಮಾತು ಹೇಳಿದಿ ಜಗದೀಶ ! ನೀನು ಹೇಳುವಂತೆ ಅಲ್ಲಿ ಇಲ್ಲಿ ಇರಬಹುದು. ಆದರೆ––'

' ಸುರೇಶ, ಆ ನಿನ್ನ ಆದರ್ಶಲೋಕದಿಂದಿಳಿದು ತುಸು ವಾಸ್ತವ ಜಗತ್ತಿಗೆ ಬಂದು ನೋಡು ! ಲೆಕ್ಕ ಹಾಕಿ ಹೇಳು ನೋಡುವಾ, ಎಷ್ಟು ಜನ ಧನವಂತರ ಮಕ್ಕಳು ರೂಪ ಗುಣ ಸ್ವಭಾವಕ್ಕೆ ಮೆಚ್ಚಿ ಮದುವೆಯಾಗಿದ್ದಾರೆ ! ಇದೋ, ನಿನ್ನನ್ನೇ ತೆಗೆದುಕೊಳ್ಳುವಾ. ನಿನಗಾಗಿ ಎಷ್ಟು ಲಕ್ಷಾಧೀಶರು ಸಂಬಂಧ ಕಾತರರಾಗಿ ಕಾದಿರುವರೊ ? ನೀನು ರೂಪ ಗುಣದ ಮಾತನ್ನೆತ್ತಿ ಅಂಥ ಸಂಬಂಧಗಳನ್ನೆಲ್ಲ ಅಲ್ಲಗಳೆಯಬಲ್ಲಿಯಾ? ಆದಾಗದ ಮಾತು ಸುರೇಶ.'

' ಇನ್ನೂ ಅನ್ಯಾಯದ ಮಾತು ಜಗದೀಶ ! ತಂದೆ–ತಾಯಿಯ ಇಚ್ಛೆ, ಆಪ್ತೇಷ್ಟರ ಅನುರೋಧ, ಇವನ್ನೆಲ್ಲ ಮರೆತು ಕೇವಲ ಧನದ ಮಾತನ್ನೊಂದೇ ಭಾವಿಸುತ್ತಿರುವಿ. '

' ಅದೇನೇ ಅಂದುಕೊ. ಅರ್ಥ ಒಂದೇ. '

' ಆಃ—– ಇದೆಲ್ಲದರಲ್ಲಿ ನನ್ನನ್ನೇಕೆ ತೊಡಕಿಸುವೆ ಜಗದೀಶ! ಹಾಗೆ ನಾನೇನು ಮಾಡಿದೆ ? '

' ಯಾಕೆಂದರೆ ಎಲ್ಲರ ಬಳಿ ಕಳವಳ ಹೊರಪಡಿಸಲಾರೆ. ನಿನ್ನ ಬಳಿ ಆದಾಗಬಹುದು. '

' ನೆಟ್ಟಗಿದೆ ! ನಾನೇನು ಇನ್ನೂ ಲಕ್ಷಾಧೀಶನ ಮಗಳನ್ನು ಮದುವೆ ಯಾಗಲಿಲ್ಲ. ಆದಾಗ ಬೇಕಾದಷ್ಟು ಅನ್ನು ! ಹೋಗಲಿ, ನನಗದೇನೋ ಮಾಡಲು ಹೇಳುತ್ತಿದ್ದೆಯಲ್ಲ ?'

' ಬಡವರ ಉಪಕಾರ ! ಹುಡಿಗೆಯನ್ನಂತೂ ನೋಡಿದೆ ! ಒಂದು ಒಳ್ಳೆಯ ಪಾತ್ರವನ್ನು ಹುಡುಕಿ ಕೊಡುವಿಯಾದರೆ. '

ಎದುರಿಗೆ ನೂಪುರದ ರುನುಝುನು ಹಾಗೂ ಕಲಕಲ ಶಬ್ದವನ್ನು ಕೇಳಿದರು. ಬಾಲಿಕೆಯರ ದಲವು ಇನ್ನೂ ಮನೆ ಮನೆಗೆ ನಮಸ್ಕಾರ ಮಾಡಿಕೊಂಡು ತಿರುಗುತ್ತಲಿದೆ. ಜಗದೀಶನು ಕರೆದು ಹೇಳಿದನು, ' ಸ್ನೇಹಾ ! ನಾವು ನಿಮ್ಮ ಮನೆಗೆ ಹೋಗಿ ತಿನಿಸನ್ನೂ ತಿಂದು ಬಂದೆವು. '

ಸ್ನೇಹಾ ಅವರನ್ನು ಕೃತಜ್ಞತೆಯಿಂದ ನೋಡಿ ತಲೆಬಾಗಿಸಿದಳು. ಅದೆಂಥ ಸರಲ ಸುಂದರ ದೃಷ್ಟಿಯೋ !

ಸುರೇಶನು ಮಾತನಾಡದ ಹೋಗಿ ಚಕ್ಕಡಿಯಲ್ಲಿ ಕುಳಿತನು. ಚಕ್ಕಡಿ ಮುಂದರಿದೊಡನೆ ಒಮ್ಮೆಗೇ ಮುಖ ಚಾಚಿ ಜಗದೀಶನಿಗೆ ಕೂಗಿ ಹೇಳಿದನು– ' ನೀನು ಹೇಳಿದ್ದು ಮರೆಯುವದಿಲ್ಲ. ವರಸಂಧಾನದ ಪ್ರಯತ್ನ ಮಾಡುವೆ–' ಉಳಿದ ಮಾತುಗಳು ಗಾಲಿಯ ಗರಗರ ಶಬ್ದದಲ್ಲಿ ಮುಳುಗಿ ಹೋದವು. ಜಗದೀಶನು ತನ್ನಲ್ಲಿ ತಾನೇ ನಕ್ಕು, 'ನಾ ಬಲ್ಲೆ ' ಎಂದನು.

೨

ಸುರೇಶನಿಗೆ ಒಂದುದಿನ ತನ್ನ ಮದುವೆ ಗೊತ್ತಾದ ಸಂಗತಿಯು ತಿಳಿದು ಬಂದಿತು. ಕನ್ಯೆ, ನಾರಾಯಣಗಂಜಿನ ಜಮೀನುದಾರನಾದ ಶ್ರೀ. ಉಮಾಕಾಂತ ದತ್ತನ ಏಕಮಾತ್ರ ಪುತ್ರಿ ಶ್ರೀಮತಿ ಸುಧಾದಾಸಿ. ಹುಡಿಗೆ ಒಳ್ಳೆ ರೂಪವತಿ. ಬೆಳೆದವಳು. ನುರಿತ ಮುದುಕ ದಿವಾಣನು ಇದನ್ನೆಲ್ಲ ಸುರೇಶನಿಗೆ ತಿಳಿಸಿ ಕೊನೆಗೆ ತನ್ನ ಪರಾಮರ್ಶವನ್ನೂ ಹೇಳಿದನು, 'ಹುಡಿಗೆ ಬಹು ಬುದ್ಧಿಮತಿಯು. ಒಳ್ಳೆಯವಳು– ಸಾಕ್ಷಾತ್ ಲಕ್ಷ್ಮಿಯ ಹಾಗೆ.'

ಕೇಳಿ ಸುರೇಶನಿಗೆ ನಗು ಬಂತು. 'ಜಮೀನುದಾರಿಯ ಆಡಳಿತಗಾರಿಕೆಯ ಕೆಲಸವನ್ನೂ ಬಲ್ಲವಳೇನು ?' ಎಂದು ಅನ್ನಬೇಕೆಂದವನು ಪಿತೃಸಮನಾದ ಪ್ರವೀಣ ದಿವಾಣನಿಗೆ ಈ ಬಗೆಯ ಪರಿಹಾಸವು ಅಯುಕ್ತವೆಂದು ನಾಲಿಗೆಗೆ ತಡೆಹಾಕಿದನು. ಈ ವರ್ತಮಾನದಿಂದ ಅವನ ಮನಸ್ಸು ಅದೇಕೋ ಸ್ವಲ್ಪ ಅಸ್ಥಿರವಾಯಿತು. ತಂದೆ ಎಲ್ಲವನ್ನೂ ವಿಚಾರಿಸಿ ಮನಸ್ಸಿಗೆ ಸಮರ್ಪಕವೆಂದು ತೋರಿದ ಮೇಲೆ ವಿವಾಹವನ್ನು ನಿಶ್ಚಯಿಸಿದ್ದಾರೆ. ಇದರಲ್ಲಿ ಸುರೇಶನ ಮನಸ್ಸಿಗೆ ಒಪ್ಪಿಗೆಯಾಗದಂಥದೇನೂ ಇರಲಿಲ್ಲ. ಆದರೂ ಮನಸ್ಸಿನಲ್ಲಿ ಏನೋ ಕುಟುಕಿದಂತಾಗುತ್ತಿದೆ. ಇದಕ್ಕೆ ಸುಸಂಗತವಾದ ಕಾರಣವೂ ಸಿಕ್ಕಲೊಲ್ಲದು. ಒಂದೆರಡು ಸಲ ತನ್ನಲ್ಲಿಯೇ ತಾನು 'ಇಷ್ಟು ಬೇಗನೆ ಯಾಕೆ' ಎಂದು ಅಂದುಕೊಂಡನು. ಆದರೆ ಇಂಥ ಸಣ್ಣ ಕಾರಣ ತೋರಿಸಿ ತಂದೆಗೆ ಏನಾದರೂ ಹೇಳಬೇಕೆಂದರೆ ಮನಸ್ಸೊಪ್ಪದು. ಧನಿಕರ ಮಗಳೊಂದಿಗೆ ಮದುವೆ ಬೇಡವೆನ್ನಲು ಅಂಥ ಯಾವ ಪ್ರಬಲವಾದ ಹಾಗೂ ಸುಸಂಬದ್ಧವಾದ ಪ್ರಸಂಗವೂ ಅವನನ್ನು ಎದುರಿಸಿಲ್ಲವೆಂದ ಮೇಲೆ ಈ ಕಾರಣ ಹೇಳಿ ತಂದೆಗೆ ತನ್ನ ಅಸಮ್ಮತಿಯನ್ನು ಸೂಚಿಸಲು ಬರುವಂತಿಲ್ಲ. ಕೊಡಬಂದ ಯಾವ ಬಡವರ ಹುಡಿಗೆಯನ್ನೂ ನಿರಾಕರಿಸಿ, ತಂದೆ ಧನಿಕರ ಕನ್ಯೆಯನ್ನು ವಧುವಾಗಿ ತಂದಿರಲಿಲ್ಲ. ಕಲ್ಪಿತ ದರಿದ್ರರ ಬೆನ್ನು ಕಟ್ಟಿ ಬಡಿದಾಡಿದರೆ ಈ ಹೊಸ ಬಗೆಯ ವಕೀಲಿಗೆ ಜನರು ಏನೆಂದಾರು ? ಕೇಳಿದವರೆಲ್ಲ 'ಇವನ ತಲೆ ಸರಿಯಾಗಿಲ್ಲ. ಸ್ನಿಗ್ಧಕರವಾದ ತೈಲಮರ್ದನ ಮಾಡುವದು ಅಗತ್ಯ' ಎಂದು

ಹೇಳಿಹೋಗಬಹುದಲ್ಲ! ಈ ವರೆಗೂ ನೆಟ್ಟಗಿದ್ದ ಮಗನು ಹೀಗೇಕೆ ಮಾಡು ತ್ತಾನೆ ಎಂದು ತಂದೆಯೂ ಚಕಿತರಾಗಿ ನನ್ನ ಮುಖವನ್ನೇ ದಿಟ್ಟಿಸಿ ದಿಟ್ಟಿಸಿ ನೋಡಬಹುದಲ್ಲ! ಊಂಹೂ. ಮಂಕು ತಗಲದ ಮೆದುಳನ್ನು ತಲೆಯಲ್ಲಿಟ್ಟು ಕೊಂಡು ಹೀಗೆ ಆಚರಿಸುವದು ಸರಿಯಲ್ಲ. ಹೀಗೆ ಭಾವಿಸಿ ಸುರೇಶನು ಈ ವಿವಾಹಕ್ಕೆ ತನ್ನ ಅಸಮ್ಮತಿಯನ್ನು ವ್ಯಕ್ತಗೊಳಿಸಲಾರದೆ ಹೋದ. ಕಾರ್ತಿಕದ ಕೆಲ ದಿನ ಕಳೆಯುತ್ತಲೇ ಮುಂದೆ ಮಾರ್ಗಶೀರ್ಷದಲ್ಲಿ ಮಹಾ ಸಮಾರೋಹ ದೊಂದಿಗೆ ಮದುವೆ ಆಗಿಹೋಯಿತು. ಒಂದು ಪಕ್ಷಕ್ಕೆ ಏಕಮಾತ್ರ ಪುತ್ರ ನಾದರೆ ಇನ್ನೊಂದು ಪಕ್ಷಕ್ಕೆ ಏಕಮಾತ್ರ ಕನ್ಯೆ. ಆದ್ದರಿಂದ ಸಮಾರಂಭಕ್ಕೆ ಇನ್ನೂ ಕಳೆಯೇರಿತ್ತು. ಸಂತೋಷ ಬಾಬುವು ಹುಡುಕಿ ಹುಡುಕಿ ಈ ಸಂಬಂಧವನ್ನು ಮಾಡಿದ್ದನು. ಚೌಧುರಿಯವರು, 'ಏನೇ ಆಗಲಿ. ಮುದುಕನು ಒಳ್ಳೇ ಸಂಧಿಯನ್ನು ಸಾಧಿಸಿಕೊಂಡ' ಎಂದರು. ಸುರೇಶನು ಜಗದೀಶನಿಗೆ ಮಾತ್ರ ಈ ವಿವಾಹ ವಾರ್ತೆಯನ್ನು ಮುಟ್ಟಿಸಲಿಲ್ಲ. ಅಂಥ ಕಾರಣವೇನೂ ಇರಲಿಲ್ಲವಾದರೂ ಜಗದೀಶನಿಗೆ ಈ ವಿಷಯ ತಿಳಿಸಲು ಯಾಕೋ ಸ್ವಲ್ಪ ನಾಚಿಕೆಯೆನಿಸಿತು. ಆದೇಕೋ ತಾನು ಜಗದೀಶನೆದುರು ವಚನಭಂಗದ ಅಪರಾಧಿಯೆಂದು ತಿಳಿದುಕೊಂಡನು.

ಶೋಭನ ಪ್ರಸ್ತದ ವರೆಗೆ ಎಲ್ಲ ಕಾರ್ಯಗಳೂ ಯಥಾರೀತಿಯಾಗಿ ಸಾಂಗ ವಾಗಿ ಹೋದವು. ಸುರೇಶನು ಶೋಭನದ ದಿನ ಅತಿ ಸಂಕುಚಿತನಾಗಿ ಪಲ್ಲಂಗದ ಒಂದು ಮಗ್ಗಲಿಗೆ ಮಲಗಿಕೊಂಡು ಹಾಗೂ ಹೀಗೂ ಇರುಳು ಕಳೆ ದನು. ವಧುವು ಅಷ್ಟು ಚಿಕ್ಕವಳೇನಲ್ಲ. ೧೪-೧೫ ವರ್ಷಗಳಿರಬಹುದು. ಇದಾದ ಮೇಲೆ ವಧುವು ಮನೆಯಲ್ಲಿದ್ದಷ್ಟು ದಿನ ಸುರೇಶನು ದೂರ ದೂರವೇ ಇದ್ದುಕೊಂಡುಬಿಟ್ಟನು.

ಆ ಮೇಲೆ ವಧುವು ತವರಿಗೆ ಹೋದಳು. ಸುರೇಶನೂ ಕಲಕತ್ತೆಗೆ ಹೋದನು. ನಡುವೆ ಗೆಳೆಯ ಜಗದೀಶನು ಇವನಿಗೆ ಪತ್ರ ಬರೆದು ತಮ್ಮೂರಿಗೆ ಬರುವದೆಂದು ಮತ್ತೆ ಮತ್ತೆ ಆಗ್ರಹ ಮಾಡಿದ್ದನು. ಸುರೇಶನು ಪತ್ರಕ್ಕೆ ಉತ್ತರವನ್ನೇ ಬರೆದಿರಲಿಲ್ಲ. ಪೂಜಾ ಬಿಡುವಿನಲ್ಲಿ ಸುರೇಶನು ಮನೆಗೆ ಹೋಗು ತ್ತಲೇ ಮಡದಿಯ ಮಾತೃವಿಯೋಗದ ಸುದ್ದಿ ಕಿವಿಗೆ ಬಿತ್ತು. ಈ ಮೂಲಕ ಅವಳನ್ನು ಆಗ ಕರೆತರಲು ಆಗಲಿಲ್ಲ. ಅವನ ತಂದೆ ಬಹಳ ದುಃಖಪಟ್ಟರು. ಅವಳಿಗೆ ಒಂದು ಪತ್ರ ಬರೆಯುವದು ಅಗತ್ಯವೆಂದು ಸುರೇಶನಿಗೆ ಅನಿಸತೊಡ ಗಿತು. ಆದರೆ ಅವಳೊಡನೆ ಒಂದು ದಿನ ಒಂದು ಮಾತನ್ನೂ ಆಡಿಲ್ಲ. ಅವಳಿಗೆ

ಒಮ್ಮಿಗೇ ಏನೆಂದು ಬರೆಯುವದು ? ಅವನು ಪತ್ರ ಬರೆಯುವದನ್ನು ನಿಲ್ಲಿಸಿದನು.

ಮದುವೆಯ ನಂತರ ಒಂದುವರೆ ವರ್ಷ ಕಳೆದುಹೋದವು. ಸುರೇಶನು ಮತ್ತೆ ಬಿಡುವಿನಲ್ಲಿ ಮನೆಗೆ ಹೋಗಲು ಅಣಿಯಾಗಿದ್ದಾಗ ಗೆಳೆಯ ಜಗದೀಶ ನಿಂದ ಒಂದು ಸಾನುನಯ ಪತ್ರ ಬಂತು. 'ಈ ಸಲ ಬಾರದಿದ್ದರೆ ಚಿರದಿನವೂ ಅನುತಾಪಕ್ಕೊಳಗಾಗಬೇಕಾದೀತು. ತಪ್ಪದೇ ಹೊರಟು ಬಾ.' ಇದಕ್ಕೆ ತಪ್ಪಿಸುವದು ಸರಿಯಲ್ಲೆಂದು ಸುರೇಶನು ಜಗದೀಶನ ಊರಿಗೆ ಹೊರಟೇ ಬಿಟ್ಟನು. ಮನೆಯ ಬಾಗಿಲಲ್ಲಿಯೇ ಜಗದೀಶನನ್ನು ಕಂಡು ಗಾಬರಿಯಾಗಿ 'ಏನಾಗಿದೆ' ಎಂದು ಕೇಳಿದನು. ಜಗದೀಶನು ತುಸು ನಕ್ಕು, 'ಆಗುವ ದಿನ್ನೇನು ? ಏನು ಮಾಡಿದರೂ ನೀನು ಬರಲಿಲ್ಲ. ಕೊನೆಗೆ ಹೀಗೆ ಮಾಡಿ ಬರ ಮಾಡಿಕೊಂಡೆ' ಎಂದನು.

ಸುರೇಶನು ಉಸುರಾಡಿಸಿ ತಲೆಕೊಡವಿ, 'ನೆಟ್ಟಗಿದೆ ಹುಡುಗಾಟಿಕೆ' ಎಂದನು.

'ಇದರಲ್ಲೇನು ಅನ್ಯಾಯ ? ನೀನಿನ್ನಾರ ಇದಿರೂ ಕೈಕಟ್ಟಿಕೊಂಡು ಕೈಫಿಯತ್ತು ಕೊಡಬೇಕಾಗಿಲ್ಲವಷ್ಟೆ ? ಎಂದ ಮೇಲೆ ಹೆದರುವದೇಕೆ ?'

ಸುರೇಶನ ಮುಖವು ನಾಚಿಕೆಯಿಂದ ಕೆಂಪಾಗಿ ಹೋಯಿತು. ಜಗದೀಶನ ಈ ಮಾತಿಗೆ ಉತ್ತರ ಕೊಡಲಿಲ್ಲ. ಸುಮ್ಮನಿದ್ದ.

ಸಂಜೆಯ ಮುಂದೆ ಜಗದೀಶನು, 'ಸುರೇಶ, ಆ ಹುಡಿಗೆಯ ನೆನಪಿದೆಯೆ? ಅದೇ ಆ ಸ್ನೇಹಾ ?' ಎಂದ.

ಸುರೇಶನ ಎದೆ ಮತ್ತೆ ಡಡ ಡಡ ಬಡಿದುಕೊಂಡಿತು. ಕೆಳದನಿಯಲ್ಲಿ, 'ಯಾಕೆ? ಏನಾಯಿತು ? ಹುಡುಗಿ ತೀರಿಹೋದಳೆ ?' ಎಂದು ಕೇಳುತ್ತಲೇ ಬಹಳ ದಿನಗಳ ಹಿಂದೆ ಕಂಡ ಬೇನೆಯಿಂದ ಬೆಳ್ಳಗಾದ ಮೊಗದಲ್ಲಿ ತೇಲುತ್ತಿದ್ದ ದೊಡ್ಡ ದೊಡ್ಡ ನಗೆದುಂಬಿದ ಕಂಣುಗಳೆರಡು ನೆನಪಿಗೆ ಬಂದವು.

ಸುರೇಶನು ಅನ್ಯ ಮನಸ್ಕನಾದದ್ದು ಕಂಡು ಜಗದೀಶನು ನಸುನಗುತ್ತ– 'ಅಲ್ಲ, ಅಲ್ಲ. ಹುಡುಗೆಯಲ್ಲ, ಅವಳ ತಾಯಿ ಈಗ ಆಗ ಅನ್ನುವಹಾಗಾಗಿ ದ್ದಾರೆ. ನಾನೇ ಚಿಕಿತ್ಸೆ ಮಾಡುತ್ತಿದ್ದೇನೆ. ನಡೆ ನೋಡಿ ಬರೋಣ.'

'ಆಗಲಿ ನಡೆ. ಆಹಾ, ಹುಡುಗೆಯ ಮದುವೆಯಾಯಿತಷ್ಟೆ ?'

'ಮದುವೆಯೆ ? ಅದು ಹೇಗಾಗಬೇಕು ? ಅವರು ಬಡವರು. ನಿಮ್ಮ ಜಾತಿಯಲ್ಲಿ ವಿಪುಲ ಧನ ಬೇಕು. ನೀನು ವರಸಂಧಾನ ಮಾಡುವದಾಗಿ ಹೇಳಿರಲಿಲ್ಲವೆ ? ಎಂದೇ ನಾವು ನಿಶ್ಚಿಂತರಾಗಿದ್ದೇವೆ.'

ಸುರೇಶನು ಲಜ್ಜಿತನಾಗಿ ಅನುತಪ್ತನಾಗಿ ತಲೆ ಕೆಳಗೆ ಹಾಕಿದನು. ಈ ಮಾತನ್ನು ಅವನು ಮರೆತೇ ಬಿಟ್ಟಿದ್ದ.

ಇಬ್ಬರೂ ಬಹು ದಿನದ ಹಿಂದೆ ನೋಡಿದ ಆ ಬೀಳುಮನೆಯಲ್ಲಿ ಹೊಕ್ಕರು. ಮುದುಕಿ ಬಹಳ ಸೊರಗಿದ್ದಾಳೆ; ಮುಖ ಮಲಿನವಾಗಿದೆ. ಬಳಿಗೆ ಅದೇ ಆ ಬಾಲಿಕೆ, ಸ್ನೇಹಾ, ಕುಳಿತಿದ್ದಾಳೆ. ಅವಳ ನಗೆದುಂಬಿದ ಕಂಗಳುಗಳು ಇಂದು ದುಃಖದ ಆಳವನ್ನು ಹೇಳುತ್ತಿವೆ. ಅದೇ ಅರಳಿದ ಗುಲಾಬಿಯಂತಿದ್ದ ಮೊಗವು ಬಾಡಿ ಬತ್ತಿ ಹೋಗಿದೆ. ನೋಡಿ ಸುರೇಶನಿಗೆ ಕಷ್ಟವಾಯಿತು. ಹುಡಿಗೆ ಅವನನ್ನು ನೋಡಿ ನಾಚಿ ಮುದುಡಿ ಕುಳಿತುಕೊಂಡಳು. ಕೆನ್ನೆ ಕೆಂಪಾದವು. ನಾಚುವ ಹೊತ್ತೇ ಇದು ! ಹುಡಿಗಿ, ತಿಳಿಯದು.

ಸ್ವಲ್ಪ ಹೊತ್ತಿನ ಮೇಲೆ ಎಚ್ಚರ ಬರಲು ಜಗದೀಶನು ಅವರೆದುರು ಕುಳಿತು ಕೂಗಿ ಹೇಳಿದನು– ‘ ಕಕ್ಕೀ, ಸುರೇಶನು ಬಂದಿದ್ದಾನೆ. ’

ಕ್ಷೀಣಸ್ವರದಲ್ಲಿ ಅವರು ‘ ಎಲ್ಲಿ ?’ ಎಂದರು.

‘ ಇದೋ ’ ಎಂದು ಜಗದೀಶನು ಸುರೇಶನನ್ನು ಎದುರಿಗೆ ತುಸು ನೂಕಿದನು. ಮೃತ್ಯುಮುಖದಲ್ಲಿಯೂ ಅವರ ಕಂಗಳುಗಳಲ್ಲಿ ಹರ್ಷೋಚ್ಛ್ವಾಸದ ಅಲೆಗಳನ್ನು ಕಂಡು ಸುರೇಶನು ವಿಸ್ಮಯಗೊಂಡನು.

ಅವರು ಅತಿ ಕ್ಷೀಣವಾಗಿ ‘ಸ್ನೇಹಾ’ ಎಂದು ಕರೆದರು.

ಕೆಂಪೇರಿದ ಮಾಸಿದ ಮುಖವನ್ನು ತಗ್ಗಿಸಿ ಸ್ನೇಹಾ ತಾಯಿಯ ಎದುರಿಗೆ ಬಂದು ಕುಳಿತಳು. ಅವರು ಕಂಪಿತ ಹಸ್ತದಿಂದ ಮಗಳ ಕೈಹಿಡಿದು ಸುರೇಶನ ಕೈಯಲ್ಲಿಟ್ಟು ಕಿರುದನಿಯಲ್ಲಿ ಹೇಳಿದರು, ‘ನಿನಗೆ ಒಪ್ಪಿಸಿದೆ. ನನ್ನ ಸ್ನೇಹಲತೆಯು ನಿನ್ನವಳಾದಳು. ದೇವರು ನಿಮ್ಮನ್ನು ಸುಖದಿಂದಿಡಲಿ.’

ಸುರೇಶನು ವಿಸ್ಮಿತನು, ಸ್ತಂಭಿತನು, ಭೀತನು. ಅವನ ಅವಶವಾದ ಹಸ್ತದಲ್ಲಿ ಇನ್ನೊಂದು ದೀನ ಹಸ್ತವು ಗದಗದ ನಡುಗುತ್ತಿತ್ತು. ಶೋಕವ್ಯಾಕುಲ ಕಂಗಳುಗಳಿಂದ ನೀರು ಧಾರೆಯಾಗಿ ಹರಿದು ಅವನ ಕೈಯನ್ನು ತೋಯಿಸುತ್ತಿತ್ತು.

ಸುರೇಶನು ಹಾಗೂ ಹೀಗೂ ತಿರುಗಿ ವಾಕ್‌ಶಕ್ತಿಯನ್ನು ತಂದುಕೊಂಡು ‘ ನೀವು ಇದನ್ನೇನು ಹೇಳಿದಿರಿ – ಗೊತ್ತಿಲ್ಲವೇ ನಾನು– ’

ಜಗದೀಶನು ತಡೆದು, ‘ ಸುಮ್ಮನಿರು, ಈಗ ಸುಮ್ಮನಿರು. ನಿದ್ದೆ ಬಂದಂತಿದೆ. ಎಚ್ಚರಿಸಬೇಡ ’ ಎಂದನು.

ಸುರೇಶನು ಉತ್ತೇಜಿತ ಸ್ವರದಲ್ಲಿ ಕಿರಿಚಿಕೊಂಡನು, 'ತಿಳಿಸಿ ಹೇಳ ಬೇಕಾದ್ದು ಬಹಳಿದೆ ಜಗದೀಶ. ನಾನು ಆಗಲೆ–'

ಜಗದೀಶನು ಮತ್ತೆ ತಡೆದು, 'ಆ ಮೇಲೆ– ಆ ಮೇಲೆ. ಸುರೇಶ, ನೀನು ಅತಿ ಹೃದಯಹೀನ!' ಎಂದನು.

ರಾತ್ರಿ ಶ್ವಾಸ ಕೂಡಿತು. ಇನ್ನು ಸಮಯವಿಲ್ಲವೆಂದು ತಿಳಿದು ಸುರೇಶನು, ಅವರ ಎದೆಯ ಮೇಲೆ ಉರುಳಾಡಿ ಅಳುತ್ತಿರುವ ಬಾಲಿಕೆಯನ್ನು ಬದಿಗೆ ಸರಿಸಿ ಅವರ ಕಿವಿಯ ಹತ್ತರ ಹೋಗಿ ಚೀರಿ ಚೀರಿ ಹೇಳಿದನು, 'ನಾನು ವಿವಾಹಿತನು! ತಾವು ಕೇಳಿಲ್ಲವೆ? ನಾನು ವಿವಾಹಿತ!'

ಅವರ ಶ್ರವಣಶಕ್ತಿ ಅಷ್ಟುಹೊತ್ತಿಗೆ ಸರ್ವನಿಯಂತಾರನ ಚರಣದಲ್ಲಿ ಅರ್ಪಿತವಾಗಿ ಹೋಗಿತ್ತು. ದೇಹಪಂಜರದಲ್ಲಿ ಪ್ರಾಣವು ಅದೇ ಧ್ಯಾನ-ಲೀನವಾಗಿತ್ತು.

ಜಗದೀಶನು ಅಚ್ಚರಿಯಿಂದ 'ಇದೇನು ಹೇಳಿದೆ ಸುರೇಶ! ನೀನು ವಿವಾಹಿತನೇ? ಇದೇನು? ನನಗೇನೂ ಗೊತ್ತಿಲ್ಲವಲ್ಲ!'

'ನೀನರಿಯೆ! ನಾನು ನಿನಗೆ ತಿಳಿಸಲಿಲ್ಲ. ಆದರೆ ಇದೇನು ಗೊಂದಲ ದಲ್ಲಿ ನೂಕಿದೆ ನನ್ನನ್ನು! ಅವರಿಗೆ ಸ್ಮೃತಿಯಿದ್ದಾಗ ಹೇಳಗೊಡಲಿಲ್ಲ. ಪ್ರಕಾ-ರಾಂತರದಿಂದ ಅವರ ಮೃತ್ಯುಶಯ್ಯೆಯ ಬದಿಗೆ ಪ್ರಮಾಣ ಮಾಡಿದಂತಾಯಿ-ತಲ್ಲ! ಜಗದೀಶ! ಇದೇನು ವಿಪರೀತಕ್ಕಿಡಿಸಿದೆ?'

'ಈಶ್ವರನೇ ಸಾಕ್ಷಿ, ನಾನು ನಿರ್ದೋಷಿ! ನೀನು ಅವಿವಾಹಿತನೆಂದು ತಿಳಿದೇ ಅವರಿಗೆ ಲೋಭ ತೋರಿಸಿದ್ದೆ. ನೀನು ನಿನ್ನ ತಂದೆಯ ಅಸಮ್ಮತಿಯ ಮಾತನ್ನೆತ್ತುವಿಯೆಂದು ನನ್ನ ಗ್ರಹಿಕೆಯಾಗಿತ್ತು.'

ಬೆಳಗಾಗುತ್ತಲೇ ಅವರ ಪ್ರಾಣ ಮಹಾಪ್ರಸ್ಥಾನಕ್ಕೆ ಹೊರಟು ಹೋಗಿತ್ತು. ಜಗದೀಶನು ಅವರಿವರನ್ನು ಕರೆದು ಶವಸಂಸ್ಕಾರಕ್ಕೆ ಸ್ಮಶಾನಕ್ಕೆ ಹೋದನು. ಇತ್ತ ಸುರೇಶನು, ಅಳುವಿನ ಕಡಲಲ್ಲಿ ಬಿದ್ದು ಹೌಹಾರಿಹೋದ ಹುಡಿಗೆಯನ್ನು ಏನೆಂದು ಸಂತೈಸುವದೆಂದು ತಿಳಿಯದೆ ಅವಳ ಬದಿಯಲ್ಲಿ ತಾನೂ ದಿಕ್ಕುತಪ್ಪಿ ಸುಮ್ಮನೆ ಕುಳಿತುಕೊಂಡನು. ಅಸಹಾಯಳಾದ ಆಶ್ರಯ ಹೀನಳಾದ ಬಾಲೆಯು ನೆಲದ ಮೇಲೆ ಉರುಳಾಡುತ್ತಿದ್ದಳು. ಈ ಮೊದಲು ಅವಳಿಗೆ ತಾನು ಇಷ್ಟು ನಿರಾಧಾರಳೆಂದು ತೋರಿರಲಿಲ್ಲ.

ಕೆಲದಿನ ಕಳೆದುಹೋದವು. ಸುರೇಶನು, 'ಜಗದೀಶ, ಇನ್ನು ಉಪಾಯ?' ಎಂದನು.

‘ ನಾನರಿಯೆ ’ ಎಂದು ಜಗದೀಶನು ಸುಮ್ಮನಾದನು.

‘ ನೀವು ಇವಳನ್ನು ಇಲ್ಲಿಯೇ ಇರಿಸಿಕೊಂಡು ಮದುವೆ ಮಾಡಲಾರಿರಾ?’

‘ ಪಾತ್ರವೆಲ್ಲಿ ? ಹಣವಿಲ್ಲದೇ ಮದುವೆಯಾಗಬಲ್ಲದೆ ? ’

‘ ಬೇಕಾದಷ್ಟು ಹಣ ನಾನು ಕೊಡುತ್ತೇನೆ ’ ಎಂದನು ಸುರೇಶ.

‘ ನನ್ನ ತಾಯಿಯ ಒಪ್ಪಿಗೆಯಿಲ್ಲದೇ ಹೇಗೆ ಮನೆಯಲ್ಲಿರಿಸಿಕೊಳ್ಳುವದು? ಅವರೆನ್ನುತ್ತಾರೆ– ಸ್ವಜಾತಿಯ ಹುಡುಗೆಯಲ್ಲ, ಪಾತ್ರವೆಲ್ಲಿ ದೊರಕಬೇಕು ಇತ್ಯಾದಿ. ನೀನಲ್ಲದೆ ಇವಳಿಗಿನ್ನಾರೂ ಗತಿ ಇಲ್ಲ. ನೀನೇ ಸಂಗಡ ಕರೆದೊಯ್ದು ಒಳ್ಳೆಯ ವರನನ್ನು ನೋಡಿ ಮದುವೆ ಮಾಡಿಕೊಡಬೇಕು. ಇದೊಂದೇ ಉಪಾಯವೆಂದು ನನಗೆನಿಸುತ್ತದೆ. ಅವಳನ್ನು ಇಲ್ಲಿಯೇ ಬಿಟ್ಟು ಹೋದರೆ ಅವಳ ವಿಷಯಕ್ಕಿರುವ ನಿನ್ನ ಕರ್ತವ್ಯಬುದ್ಧಿಯು ಅವಿಕಲವಾಗಿ ನಿನ್ನ ಮನಸ್ಸಿನಲ್ಲಿ ಉಳಿದೀತು ಎಂದು ಹೇಗೆ ಭರವಸೆ ಇಟ್ಟುಕೊಂಡಿರಲಿ ?’

ಜಗದೀಶನ ಈ ವ್ಯಂಗಸೂಚಕ ಇಂಗಿತದಿಂದ ವ್ಯಗ್ರನಾಗಿ, ಇನ್ನು ಬೇರೆ ಗತ್ಯಂತರವಿಲ್ಲವೆಂದುಕೊಂಡು, ಕೃತಕರ್ಮದ ಫಲವೆಂದು ಸುರೇಶನು ಸ್ನೇಹಲತೆಯನ್ನು ಸಂಗಡ ಕರೆದುಕೊಂಡು ಕಲಕತ್ತೆಗೆ ಹೊರಟು ಹೋದನು.

೩

ಸುರೇಶನು ಮೊದಲು ಯೋಚಿಸಿದ್ದು ಸ್ನೇಹಲತೆಯನ್ನು ಒಬ್ಬ ಗೆಳೆಯನ ಮನೆಯಲ್ಲಿ ಕೆಲದಿನ ಇರಿಸಬೇಕೆಂದು. ಆದರೆ ಜಗದೀಶನು ಅವಳ ಭಾರವನ್ನು ವಹಿಸಲು ಹಿಂದೆಗೆದದ್ದರಿಂದ ಇನ್ನಾವ ಗೆಳೆಯನ ಸಹಾಯವನ್ನೂ ಕೋರುವ ಪ್ರವೃತ್ತಿ ಅವನಿಗಾಗಲಿಲ್ಲ. ಗೆಳೆಯರ ಅಲ್ಲಸಲ್ಲದ ಮಾತಿಗೆಲ್ಲ ಸಮಾಧಾನ ಹೇಳುತ್ತ ಇಲ್ಲದ ಪ್ರಶ್ನೆಗಳಿಗೆಲ್ಲ ಉತ್ತರ ಕೊಡುತ್ತ ಕೂಡ್ರುವದಕ್ಕಿಂತ ತನ್ನ ಹತ್ತಿರವೇ ಅವಳಿರಲಿ ಎಂದುಕೊಂಡನು.

ಆ ಪ್ರಕಾರ ಸುರೇಶನು ಸ್ನೇಹಲತೆಯನ್ನು ತನ್ನ ಕಲಕತ್ತೆಯ ವಾಸಸ್ಥಳಕ್ಕೆ ಕರೆದೊಯ್ದನು. ಆ ಸಲದ ಬಿಡುವೆಲ್ಲ ಇದೇ ಗೊಂದಲದಲ್ಲಿ ಕಳೆದು

ಹೋಯಿತಾಗಿ ಊರಿಗೆ ಹೋಗುವದಾಗಲಿಲ್ಲ. ಸಂತೋಷಬಾಬುವು ಇದಕ್ಕೆ ಕೈಫಿಯತ್ತು ಕೇಳಲು ಹಾಗೂ ಹೀಗೂ ಹೇಳಿ ಪಾರಾದನು.

ಸುರೇಶನ ವಾಸಸ್ಥಳವು ಸಾಕಷ್ಟು ದೊಡ್ಡದು. ಸ್ನೇಹಳಿಗಾಗಿ ಹೊಸ ಆಯೋಜನದ ಪ್ರಯೋಜನವಿರಲಿಲ್ಲ. ಅವಳಿಗಾಗಿ ಓರ್ವ ವಯಸ್ಕ ಪರಿ-ಚಾರಿಕೆಯನ್ನು ಮಾತ್ರ ನಿಯಮಿಸಬೇಕಾಗಿ ಬಂತು. ಸ್ನೇಹಳಿಗೆ ಸಮಾಧಾನ ಹೇಳಿ, ಸ್ನೇಹವಾಕ್ಯಗಳಿಂದ ಬಗೆಬಗೆಯಾಗಿ ಸಂತೈಸಿ ತಾನು ಮೊದಲಿನಂತೆ ಕಾಲೇಜಿಗೆ ಹೋಗತೊಡಗಿದನು; ಮತ್ತು ಅವಳಿಗಾಗಿ ಸ್ಥಲಸಂಧಾನದ ಬಗ್ಗೆ ಬಹಳ ಜಾಗರೂಕನಾದನು. ಬೇಗನೇ ಸುಪಾತ್ರ ಸಂಧಾನವೊಂದು ಆಗಿಬಿಡುವದು, ಆಗುತ್ತಲೇ ಸ್ನೇಹಳ ಮದುವೆಗಿನ್ನೇನೂ ತಡವಿಲ್ಲ ಎಂದು ಅವನ ಎಣಿಕೆ. ಅದ್ದರಿಂದ ಸ್ನೇಹಳ ಬಗ್ಗೆ ತಂದೆಗೆ ಕೈಫಿಯತ್ತು ಕೊಡುತ್ತಾ ಕೂಡುವದು ಅನಾವಶ್ಯಕವೆಂದು ಇದಾವ ಸಂಗತಿಯನ್ನೂ ಅವರಿಗೆ ತಿಳಿಸಲಿಲ್ಲ. ಅಲ್ಲದೇ ಅಸಹಾಯಳಾದ ಹುಡುಗೆಯನ್ನು ತಿರುಕಿಯಂತೆ ಎಲ್ಲರ ಕೃಪೆಗೂ ಕುತೂಹಲಕ್ಕೂ ಈಡುಮಾಡಲು ಅವನ ಮನಸ್ಸೊಪ್ಪಲಿಲ್ಲ. ಆ ಸಾಯಲಾದ-ವಳ ಬಳಿ ಪ್ರಕಾರಾಂತರವಾಗಿ ಅಂಗೀಕರಿಸಿದ ವಚನವೂ ನಡುನಡುವೆ ಅವನ ಮನದಲ್ಲಿ ಮೊಳಗಿ ಅವನನ್ನು ಇನ್ನೂ ಕಿಂಕರ್ತವ್ಯ ವಿಮೂಢನನ್ನಾಗಿ ಮಾಡುತ್ತಿತ್ತು. ಏನು ಮಾಡುವದೋ ತಿಳಿಯದಾಗಿ ಕೊನೆಗೆ ವರಶೋಧವನ್ನೇ ಮಾಡತೊಡಗಿದನು. ಸ್ನೇಹಲತೆಯ ವ್ಯವಸ್ಥೆಯನ್ನು ಹೇಗೆ ಮಾಡಿರುವೆ, ಏನು ಮಾಡಿರುವೆ ಎಂದು ಕೇಳಿ ಜಗದೀಶನು ಈ ಮಧ್ಯದಲ್ಲಿ ಒಂದು ಪತ್ರ ಬರೆದಿದ್ದನು. ಅದಕ್ಕೆ ಸುರೇಶನು ಕೆರಳಿ ಕೆಂಡವಾಗಿ ಉತ್ತರ ಕೊಡಲಿಲ್ಲ.

ಮಳೆಗಾಲದ ಆಗಮನ ದುಂದುಭಿಯು ಮೊಳಗುತ್ತಿದೆ. ಮಹಾನಗ-ರಿಯು ಈಗ ಹೊಸದೊಂದು ಪಾಂಗಿನಲ್ಲಿ ಶೋಭಿಸುತ್ತಿದೆ. ನಿರರ್ಗಲಧಾರಾ ಸಂಪಾತದ ಸಂಗೀತದಲ್ಲಿ ತಲ್ಲೀನಳಾಗಿ ಸ್ನೇಹಲತೆಯು ಅಷ್ಟಾಲಿಕೆಯ ಕಿಡಿಕಿಯ ಬಾಗಿಲಿಗೆ ಆತು ನಿಂತಿದ್ದಾಳೆ. ಹೊರಗೆ ಎದುರಿಗೆ ಶಿರೀಷ ಕದಂಬ ಮುಂತಾದ ತರುಗಳು ಹೂವು ಹಂಣುಗಳನ್ನು ಹೊತ್ತು ಕೈಚಾಚಿ ನಿಂತಿವೆ. ಎಡಕ್ಕೆ ಬಲಕ್ಕೆ ಸ್ನೇಹಳಿಗೆ ಗುರುತಿಲ್ಲದ ಇನ್ನೂ ಅವೆಷ್ಟೋ ಹೂವುಗಳಿಂದ ಮೃದುಗಂಧವು ತೇಲಿಬರುತ್ತಿದೆ. ಕಿಡಿಕೆಯಿಂದ ಹಾರು ಹಸಿಗಳು ಬಂದು ಸ್ನೇಹಲತೆಯ ಕುಂಚಿತ ಕೇಶದಲ್ಲಿ ಸಂಚಿತವಾಗಿ ಮಿಣುಕು ಮುತ್ತಿನ ಹಾಗೆ ತೊಳಗುತ್ತಿವೆ.

ಸ್ನೇಹಲತೆಗೆ ಆಗ ತನ್ನೂರು ನೆನಪಾಗಿತ್ತು. ಮಳೆಬರುವಾಗ ತಮ್ಮ ಮನೆಯೆದುರು ಚಪ್ಪರದ ಚಾಟಿಗೆ ಕುಳಿತು ಹೀಗೆಯೇ ನೋಡುತ್ತಿದ್ದಳು.

ಮಳೆಯ ರಪರಪ ಸಪ್ಪಳದೊಡನೆ ಜೀರುಂಡಿಯ ಸೂರು ಸವಿಯಾಗಿ ಕೇಳಿ-ಸುತ್ತಲೇ ನಡುನಡುವೆ ಕಪ್ಪೆಯ ಕರ್ಕಶ ಸ್ವರ. ನಾಲ್ಕೂ ಸಿಟ್ಟಿನಿಂದ ಆಡವಿಯ ಹೂಗಳ ಕಂಪು ಸೂಸಿಸೂಸಿ ಬರುತ್ತಿತ್ತು. ಒಮ್ಮೊಮ್ಮೆ ಗುಡುಗು ಗದ್ದರಿಸಿ ಹೊರಗಣಿಂದ ಹುಡುಗರನ್ನು ಚದರಿಸುತ್ತಿತ್ತು. ಆಗ ಅವಳ ತಾಯಿಯೂ ಒಳಗಿಂದ 'ಸ್ನೇಹಾ, ಏ ಸ್ನೇಹಾ, ಬಾರಮ್ಮಾ ಒಳಗೆ' ಎಂದು ಕೂಗಿ ಕರೆಯುತ್ತಿದ್ದಳು.

ಹಿಂದಿನಿಂದ ಸುರೇಶನು 'ಇದೇನು ಸ್ನೇಹಾ, ತೋಯಿಸಿಕೊಳ್ಳುವಿಯಲ್ಲ ?' ಎಂದನು.

ಸ್ನೇಹಳು ಮೊಗ ತಿರುಗಿಸಿ ಬದಿಗೆ ಸರಿದು ನಿಂತಳು. ಸುರೇಶನೂ ತಿರುಗಿ ಎದುರಿಗೆ ಬಂದು ಅವಳನ್ನೇ ನೋಡತೊಡಗಿದನು.

'ಸ್ನೇಹಾ ಅಳುತ್ತೀಯಾ ?'

ಸ್ನೇಹಳು ಸುಮ್ಮನಿದ್ದಳು.

'ಯಾಕೆ ಅಳುವಿ ? ಇಲ್ಲಿ ನಿನಗೆ ಕಷ್ಟವಾಗುವದೇ ?'

ಸ್ನೇಹಳು ಕ್ಷೀಣಕಂಠದಿಂದ 'ಇಲ್ಲ' ಎಂದಳು.

'ಹಾಗಾದರೆ ಅಳುವುದೇಕೆ ? ಹೇಳುವದಿಲ್ಲವೆ ? ತಾಯಿಯ ನೆನಪಾ-ಗಿದೆಯೆ ?'

'ಹೌದು.'

ಸುರೇಶನು ಕಿಡಿಕಿಯ ಬಾಗಿಲುಹಾಕಿ ಅಲ್ಲಿದ್ದ ಒಂದು ಕುರ್ಚಿಯ ಮೇಲೆ ಕುಳಿತು ಇನ್ನೊಂದನ್ನು ತೋರಿಸಿ 'ಕುಳಿತುಕೊ' ಎಂದು ಹೇಳಿದನು.

ಸ್ನೇಹಳು ಸಂಕೋಚಗೊಂಡು ಹೇಳಿದಲ್ಲಿ ಕುಳಿತಳು.

'ಸ್ನೇಹಾ, ತಾಯಿಯನ್ನು ನೆನೆನೆನೆದು ಇನ್ನೂ ಮುಚ್ಚಿಮುಚ್ಚಿ ಅಳುವಿಯಾ ?'

'ಇಲ್ಲ.'

'ಮತ್ತೆ ಅಳುತ್ತಿದ್ದೆಯಲ್ಲ ?'

'ಇಂದು ಅದೇಕೋ ಮನಸ್ಸಿಗೆ ಬಹಳ ಕಳವಳವೆನಿಸಿತು.'

'ಯಾಕೆ ಕಳವಳವಾಯಿತು ಸ್ನೇಹಾ ?'

'ಯಾಕೋ ಕಾಣೆ ! ಮಳೆ ನೋಡಿ ಅಳುವಹಾಗಾಯಿತು.'

' ಅದೇಕೆ ?'

' ಮಳೆಬರುವಾಗ ನಾನು ಹೊರಗಿದ್ದರೆ ತಾಯಿ ಒಳಗೆ ಕರೆಯುತ್ತಿದ್ದಳು. ಆದರೆ- ' ಎಂದು ಹೇಳುತ್ತಾ ಹೇಳುತ್ತಾ ಮತ್ತೆ ಕಂಣೀರು ಬಿಡಿದು ಮುಖ ತಗ್ಗಿಸಿದಳು.

ಸುರೇಶನು ನೇಹದಿಂದ ನೋಡುತ್ತ ' ಇನ್ನಾರೂ ಹಾಗೆ ನಿನ್ನನ್ನು ಪ್ರೀತಿ ಸುತ್ತಿಲ್ಲವೆ ಸ್ನೇಹಾ ?' ಎಂದನು.

ಸ್ನೇಹಳು ಮಾತಿಲ್ಲದೆ ಮತ್ತೆ ಕಂಣೊರಸತೊಡಗಿದಳು.

' ಇನ್ನಾರೂ ಹಾಗೆ ನಿನಗಾಗಿ ತಳಮಳಿಸುವದಿಲ್ಲವೇ ಸ್ನೇಹಾ ?'

ಸ್ನೇಹಳು ಅರ್ಧರುದ್ಧ ಸ್ವರದಲ್ಲಿ ಹೇಳಿದಳು, ' ನನ್ನವರು ಇನ್ನಾರು- ನಿಮ್ಮನ್ನು ಬಿಟ್ಟು !'

ಸುರೇಶನು ಸ್ನೇಹಳ ಮನವನ್ನು ತುಸು ಅರಳಿಸಲೆಂದು ನಸುನಗುತ್ತ- '' ನಿಮ್ಮನ್ನು ಬಿಟ್ಟು ' ಎಂಬ ಮಾತನ್ನು ಈಗ ನೆನೆದುಕೊಂಡೆಯೇನು ? ಅದು ಅಳುವಾಗ ನೆನಪಿರಲಿಲ್ಲ-ಅಲ್ಲವೆ ?' ಎಂದನು.

ಸ್ನೇಹಳು ಮೊಗವೆತ್ತಿ ನೋಡಿದಳು; ಇನಿಸು ಆನಂದದಿಂದ ನಸು ಲಜ್ಜೆ ಯಿಂದ ಅವಳ ಗೌರಮುಖವು ಆರಕ್ತವಾಗಿತ್ತು. ಅವಳು ' ಅಲ್ಲ ' ಎಂದು ಮೆಲ್ಲನೆ ಉಸುರಿದಳು.

ಸುರೇಶನು ಮತ್ತೆ ನಕ್ಕು ಕೇಳಿದನು, ' ಆ ಮಾತು ಈಗಲೇ ನೆನೆದು ಹೇಳಿದ್ದಲ್ಲ ಎಂದೊ, ಇಲ್ಲವೇ ನೆನಪಿರಲಿಲ್ಲ ಎಂದೊ ?'

ಅವಳು ಇನ್ನೂ ಹಿಗ್ಗಿ ನತಮುಖಳಾಗಿ ಹೇಳಿದಳು, ' ನನ್ನ ಬಗ್ಗೆ ವಿಚಾರಿಸುವಿರಿ - ನನ್ನನ್ನು ಪ್ರೀತಿಸುವಿರಿ - ಆ ಮಾತು ಯಾವಾಗಲೂ ನನ್ನ ಮನಸ್ಸಿನಲ್ಲಿರುತ್ತದೆ. ಆವಾಗಿ ತಾಯಿ ನನ್ನನ್ನು ನಿಮಗೇ ಕೊಟ್ಟು ಹೋಗಿ ರುವಳಲ್ಲ ?'

ಯಾವ ಮಾತಿನಿಂದ ಯಾವ ಮಾತು ಬಂದಿತಲ್ಲಾ ! ಎಂದು ಸುರೇಶನ ಹೃದಯಕ್ಕೆ ಮತ್ತೊಮ್ಮೆ ಆಘಾತವಾಯಿತು. ಅಚ್ಚ ಮನಸಿನ ಬಾಲೆ; ಕುಣಿಸಿ ಮಣಿಸಿ ಮಾತನಾಡಲು ಬರುವದಿಲ್ಲವೆಂದೇ ಹೀಗೆ ಸರಳವಾಗಿ ಹೇಳಿಬಿಟ್ಟಳು. ಸುರೇಶನು ಆ ವಿಷಯವನ್ನು ಮನಸ್ಸಿನಿಂದ ದೂರಕ್ಕೆ ಸರಿಸಬೇಕೆಂಬ ಹೆಣ- ಗಾಟದಲ್ಲಿ ತಾನು ಕುಳಿತ ಕುರ್ಚಿಯನ್ನು ಸ್ನೇಹಳಿಂದ ದೂರಕ್ಕೆ ಸರಿಸಿ ಕೊಂಡು ಕೆಲಹೊತ್ತು ತೆಪ್ಪಗೆ ಕುಳಿತುಕೊಂಡನು.

ಸ್ನೇಹಳು ಕೂಡ ನತಮುಖಳಾಗಿ ಕುಳಿತವಳು ಮಿಸುಕಲಿಲ್ಲ. ಒಂದೆರಡು ನಿಮಿಷದ ನಂತರ ಸುರೇಶನು ಕಂಠವನ್ನು ಸರಿಪಡಿಸಿಕೊಂಡು ಮೆಲ್ಲಮೆಲ್ಲಗೆ ಹೇಳತೊಡಗಿದನು— 'ಹಾಗೆಂದೇ ನಾನು ಅವರಿವರ ಕೈಯಲ್ಲಿ ನಿನ್ನನ್ನು ಒಪ್ಪಿಸಲು ಹಿಂದೆ ಮುಂದೆ ನೋಡುತ್ತೇನೆ. ಇಷ್ಟು ದಿನ ಹುಡುಕಿ ಹುಡುಕಿ ಈಗ ಒಂದು ಒಳ್ಳೆಯ ಪಾತ್ರವನ್ನು ದೊರಕಿಸಿದ್ದೇನೆ. ಉಪಯುಕ್ತ ವರನಿಗೆ ನಿನ್ನನ್ನು ಒಪ್ಪಿಸಿ ನೀನು ಸುಖಿಯಾಗಿರುವುದನ್ನು ನೋಡಿದೆನೆಂದರೆ ನಾನು ಋಣಮುಕ್ತನಾದಂತೆ. ಸ್ನೇಹಾ, ಹಾಗೆ ನಾಚಿಕೊಳ್ಳಬೇಡ- ನೀನೀಗ ದೊಡ್ಡವ ಳಾಗಿರುವೆ. ಎಲ್ಲವನ್ನು ತಿಳಿದುಕೊಳ್ಳಬಲ್ಲೆಯಷ್ಟೆ? ತಿಳಿದು ನೋಡು- ಈ ಎಲ್ಲ ಮಾತು ನಿನಗಲ್ಲದಿನ್ನಾರಿಗೆ ಹೇಳಲಾದೀತು ? ಹೇಗೆ ಸ್ನೇಹಾ, ನಿನ್ನ ಅಸಮ್ಮತಿ ಇರಲಾರದಷ್ಟೆ ?'

ತನ್ನ ಮಾತು ಸ್ನೇಹಳ ಮೇಲೆ ನಾಟುತ್ತಿಲ್ಲವೆಂದು ಸುರೇಶನಿಗೆ ಗೊತ್ತು. ಈ ಮೊದಲು ಈ ಬಗೆಯ ಮಾತಿಗೆ ಸ್ನೇಹಳು ಉತ್ತರವನ್ನೇ ಕೊಡುತ್ತಿರಲಿಲ್ಲ. ಮದುವೆಯ ಮಾತೆತ್ತುತ್ತಲೇ ಸ್ನೇಹಳು ಮೂಕಳಂತೆ ಕುಳಿತುಬಿಡುತ್ತಿದ್ದಳು. ಇದೇನು ಬಾಲಸುಲಭ ಲಜ್ಜೆಯೋ ಅಥವಾ ಇನ್ನೇ ನಾದರೊ ಎಂದು ಸುರೇಶನಿಗೆ ಕೌತುಕವಾಗುತ್ತಿತ್ತು.

'ಸ್ನೇಹಲತಾ ! ನಾನು ಹೇಳಿದ್ದು ತಿಳಿಯಿತಲ್ಲವೆ ? ನಿನ್ನ ಅಸಮ್ಮತಿ ಇರಲಾರದು ಅಲ್ಲವೆ ?'

ಸ್ನೇಹಳು ಮತ್ತಷ್ಟು ನಿಸ್ಪಂದಳಾದಳು. ಅವನ ಪ್ರಶ್ನೆಗೆ ಯಾವ ಉತ್ತರ ವನ್ನೂ ಕೊಡಲಿಲ್ಲ. ಅವಳ ಈ ರೀತಿ ಅವನಲ್ಲಿ ಇಲ್ಲದ ಭೀತಿಯನ್ನುಂಟು ಮಾಡತೊಡಗಿತು. ವಿವಾಹದ ವಿಷಯದಲ್ಲಿ ಸ್ನೇಹಳ ಈ ಮೌನವು ಏನೋ ಒಂದು ವಿಧವಾಗಿ ತೋರಿತು. ಇದು ಸಂಕೋಚವೂ ಅಲ್ಲ; ಲಜ್ಜೆಯೂ ಅಲ್ಲ. ಏನೋ ಒಂದು ಬಗೆ. ಅವಳ ಈ ಕಾಷ್ಠಸಮ ನಿಶ್ಚೇಷ್ಟತೆಯಿಂದ ಸುರೇಶನು ಅತ್ಯಂತ ಉತ್ಕಂಠಿತನಾದನು. ಸ್ನೇಹಳು ಸ್ನೇಹಸಂಬಂಧವಾದ ಮಾತುಕಥೆಗಳಿಗೆ ಚನ್ನಾಗಿ ಅರಳಿಕೊಂಡು ಉತ್ತರ ಕೊಡುತ್ತಾಳೆ ಎಂಬುದು ಅವನಿಗೆ ತಟ್ಟನೆ ಹೊಳೆದು, ಆ ಹಾದಿಯಲ್ಲಿಯೇ ವಿಷಯದ ಓಟವು ಹೋದರೆ ಈ ಸಮಸ್ಯೆಯ ಮೀಮಾಂಸೆ ಆದರೂ ಆಗಬಹುದು ಎಂದುಕೊಂಡನು. ಹಾಗೆ ಹರಟೆಗೆ ಮೊದಲು ಮಾಡಿದನು.

'ಒಳ್ಳೇದು ಸ್ನೇಹಾ ! ನಿಮ್ಮೊರಲ್ಲಿ ನೀನು ಯಾರು ಯಾರನ್ನು ಹೆಚ್ಚಾಗಿ ಪ್ರೀತಿಸುತ್ತಿದ್ದೆ ?'

ಸ್ನೇಹಳು ಮೊದಲು ಉತ್ತರ ಕೊಡಲಿಲ್ಲ. ಸುರೇಶನು ಮತ್ತೆ ಮತ್ತೆ ರಮಿಸಿ ರಮಿಸಿ ಕೇಳಲಾಗಿ ಕೊನೆಗೆ ಅವಳು, ಮೆಲ್ಲಮೆಲ್ಲಗೆ ನಿಂತು ನಿಂತು ಹೇಳಿದಳು—'ಯಾರು ಯಾರನ್ನೆ ? ತಾಯಿಯನ್ನು, ನಾಕುನಾಯಿಯನ್ನು, ಪಂಜರದ ಗಿಳಿಯನ್ನು, ಜಗದೀಶಣ್ಣನನ್ನು, ಅವನ ತಂಗಿ ಸುಕುಮಿಯನ್ನು, ನಿಮ್ಮನ್ನು—'

'ನನ್ನನ್ನು ? ಅದೇನು ಸ್ನೇಹಾ ? ನಿಮ್ಮೊರಲ್ಲಿ ನಾನು ಹೇಗೆ ?'

'ಯಾಕೆ ? ನೀವು ಎರಡು ಸಲ ಬಂದಿದ್ದಿರಲ್ಲ ? ಆ ದಿನ ನನಗೆ ಜ್ವರ ಬಂದಾಗ ನೆಟ್ಟಗೆ ಮಾಡಿದ್ದಿರಿ. ತಾಯಿಯೂ ನಿಮ್ಮನ್ನು ಅದೆಷ್ಟೋ ಪ್ರೀತಿ ಸುತ್ತಿದ್ದಳು. ನಿಮ್ಮ ಹೆಸರೆತ್ತಿ ಅದೆಷ್ಟೋ ಕೊಂಡಾಡುತ್ತಿದ್ದಳು. ಜಗದೀಶ-ಣ್ಣನೂ ನಿಮ್ಮ ಬಗ್ಗೆ, ನಿಮ್ಮ ಮನೆಯ ಬಗ್ಗೆ ಅದೆಷ್ಟೋ ಕಥೆ ಮಾಡಿ ಆ ಸುದ್ದಿ ಈ ಸುದ್ದಿ ಹೇಳುತ್ತಿದ್ದನು.'

ಸುರೇಶನು ತಪ್ಪಿಸಬೇಕೆಂದ ಮಾತೇ ಮತ್ತೆ ತಲೆಯೆತ್ತಿತು. ಮನಸ್ಸಿನಲ್ಲಿ ಜಗದೀಶನ ಅಪಿಪೇಕಕ್ಕೆ ಹೂಂಕರಿಸುತ್ತ ಮಾತೆಲ್ಲ ಹುರುಳಿಲ್ಲದ ಹರಟೆಯೇ ಎಂದು ತೋರುವ ಹಾಗೆ ಮತ್ತೆ ಸಹಜವಾಗಿ ಕೇಳಿದನು—

'ಒಳ್ಳೇದು ಸ್ನೇಹಾ ! ನನ್ನ ಹಾಗೆ ಅಥವಾ ನನಗೂ ಮಿಗಿಲಾಗಿರುವವನೊಡನೆ ನಾನು ನಿನ್ನ ಮದುವೆ ಮಾಡಿಕೊಟ್ಟರೆ ? ಅವನನ್ನೂ ನೀನು ತುಂಬ ಪ್ರೀತಿಸುವಿಯಲ್ಲವೇ?'

'ಇಲ್ಲ.'

ಸುರೇಶನು ಪುಲಕಿತನಾದನು. 'ಅದೇಕೆ ಸ್ನೇಹಾ ?'

'ನೀವು ನನ್ನನ್ನು ಪ್ರೀತಿಸುತ್ತಿರುವಿರಿ, ಅದಕ್ಕಾಗಿ.'

'ಅವನೂ ನಿನ್ನನ್ನು ನನಗಿಂತ ಹೆಚ್ಚು ಪ್ರೀತಿಸುವನು.'

ಸ್ನೇಹಳು ಮತ್ತೆ ಬಿಮ್ಮನೆ ಬಿಗಿದುಕೊಂಡಳು. ಸುರೇಶನೂ ಮಾತನಾಡದೆ ಸುಮ್ಮನಿರಬೇಕೆಂದರೆ ಆಗಲಿಲ್ಲ. ವಿಚಲಿತನಾಗಿ ಮತ್ತೆ ಹೇಳತೊಡಗಿದನು—'ಹೌದು ಲತಾ, ಅವನು ನಿಶ್ಚಯವಾಗಿಯೂ ನಿನ್ನನ್ನು ಬಹಳ ಪ್ರೀತಿಸುವನು. ಅವನು ಬಹು ದೊಡ್ಡ ಮನುಷ್ಯರ ಮಗ. ದೊಡ್ಡ ಮನೆ. ನಿಂತಲ್ಲಿ ಕುಳಿತಲ್ಲಿ ಸೇವಕ ಸೇವಕಿಯರು. ಮದುವೆಯಾಗುತ್ತಲೇ ನಿನ್ನನ್ನು ಅವನು ಅಲ್ಲಿಗೆ ಕರೆದೊಯ್ಯುವನು ತಿಳಿಯಿತೆ ? ಕೇಳಿ ಆಹ್ಲಾದವಾಗುವದಲ್ಲವೇ ಸ್ನೇಹಾ ? ಅವನು ನೋಡಲೂ ಸುಂದರನಾಗಿದ್ದಾನೆ— ಸ್ವಭಾವವೂ ಒಳ್ಳೆಯದು.' ಸುರೇಶನು ನೋಡುತ್ತಾನೆ— ಎರಡೂ ಕೈಗಳಿಂದ

ಮುಖ ಮುಚ್ಚಿಕೊಂಡು ಸ್ನೇಹಳು ಅಸ್ಪುಟವಾಗಿ ಅಳುತ್ತಿದ್ದಾಳೆ. ಸುರೇಶನು ವ್ಯಗ್ರನಾಗಿ ಎದ್ದು ಅವಳ ತಲೆಯ ಮೇಲೆ ಕೈಯಿಟ್ಟು ಸ್ನೇಹ ವಾಗಿ ಗದ್ದರಿಸುವ ದನಿಯಲ್ಲಿ,—'ಇದೇನು, ಸ್ನೇಹಾ ಇದೇನಿದೇನು ?' ಎಂದನು.

ಸ್ನೇಹಳು ಉಚ್ಛ್ವಸಿತ ಕಂಠದಿಂದ ಒದರಿ ಹೇಳಿದಳು,—'ನಾನು ಹೋಗುವದಿಲ್ಲ, ನಾನು ಹೋಗುವದಿಲ್ಲ.'

'ಅದೇನು ? ಯಾಕೆ ? ಸ್ನೇಹಾ…'

'ಹಾಗಾದರೆ ನಾನು ಬದುಕುವದಿಲ್ಲ.'

ಸುರೇಶನು ಸ್ತಂಭಿತನಾದನು. ಯಾವ ಭಾವವನ್ನು ತನ್ನ ಮನದಿಂದ ತಳ್ಳಬೇಕೆಂದು ಪ್ರಬಲವಾಗಿ ಹೋರಾಡುತ್ತಿದ್ದನೋ ಅದು ಇನ್ನಷ್ಟು ಸ್ಫುಟ ವಾಗಿ ನಿಂತಿತು. ಅದನ್ನು ಇನ್ನುಮೇಲೆ ಅಮೂಲಕ ಸಂದೇಹವೆಂದು ಬದಿಗೆ ಸರಿಸಲು ಬರುವಂತಿಲ್ಲ. ಇದೋ ! ನೊಂದ ಜೆಂದ ಕ್ರಂದನಕಂಪಿತಳಾಗಿ ನಿಂದ ಬಾಲೆ ಅದನ್ನೇ ಹೇಳುತ್ತಾಳೆ—'ನಾನು ನಿನ್ನವಳು. ನಾನು ಇನ್ನಾರ ವಳೂ ಆಗಲೊಲ್ಲೆ.'

ಸ್ವಲ್ಪ ಅಪ್ರತಿಭನಾದರೂ ಸುರೇಶನು ಇದರಿಂದ ದುಃಖಿತನಾಗಲಿಲ್ಲ. ದುಃಖವೆ ? ದುಃಖವೆಲ್ಲಿಂದ ಬಂತು ? ಆದೇ ಅರಳುತ್ತಿರುವ ಹೃದಯದ ದೇವಭೋಗ್ಯವಾದ ಅಮಲ ಪ್ರಣಯವನ್ನು ಸುರೇಶನು ನಿರಾಕರಿಸಬಲ್ಲನೆ ? ಈ ಮೊದಲು ಈ ಬಗೆಯ ಪ್ರೇಮನಿವೇದನವನ್ನು ತನಗಾರು ಮಾಡಿದರೆಂದು ಇಲ್ಲವೇ ತಾನಾರಿಗೆ ನೀಡಿದನೆಂದು ಈ ಬಾಲಿಕೆಯ ಅಮೃತಸಮ ಪ್ರೇಮ ವನ್ನು ಕಡೆಗಣ್ಣುವದು ? ಅಲ್ಲದೆ ಅವಳ ಬಗ್ಗೆ ಈ ವರೆಗೆ ತನ್ನ ಕರ್ತವ್ಯ ವನ್ನು ಸ್ಥಿರಗೊಳಿಸಿದ್ದೆಲ್ಲಿ ? ತನ್ನ ಮದುವೆಯ ಮಾತನ್ನು ನೆನೆದು, ತಂದೆ ಕೇಳಿ ಕೆರಳಬಹುದಲ್ಲ ಎಂದು ಹೆದರಿ, ಬೇರೆ ವರಸಂಧಾನದಲ್ಲಿ ಇದ್ದುದೇನೋ ನಿಜ. ಆದರೆ ತಿಳಿನೀಲಿಯ ಹೊಳೆಗಣ್ಣುಗಳೆರಡು ಆಗಾಗ ತನ್ನನ್ನು ನೋಡಿ ಎಲ್ಲವನ್ನೂ ದಲ್ಲಟಗೊಳಿಸುತ್ತಿರಲಿಲ್ಲವೆ ? ಹೀಗೆಲ್ಲ ಇದ್ದರೂ ಸುರೇಶನು ತನ್ನ ಕರ್ತವ್ಯವನ್ನು ಈಡೇರಿಸಬಹುದಾಗಿತ್ತು. ಆದರೆ ಈಗ ? ಈಗ ಇನ್ನೂ ಸಂಕಟಕ್ಕಿಟ್ಟಿತು. ಸಂಕಟ ನಿಜ. ಆದರೂ ಈ ಸಂಕಟದಲ್ಲಿಯೇ ಅವನ ಹೃದಯವು ಸುಖದ ತೆರೆಗಳಲ್ಲಿ ಮಿಂದು ಮೈಮರೆಯುತ್ತಿರಲಿಲ್ಲವೆ ? ಸ್ನೇಹಾ— ಸ್ನೇಹಲತಾ— ತನ್ನವಳೇ ! ಸ್ನೇಹಳು ತನ್ನನ್ನು ಪ್ರೀತಿಸುವಳು ! ಇದನ್ನು ಅವನು ಕಿವಿಯಾರೆ ಕೇಳಿ ಕಣ್ಣಾರೆ ಕಂಡು ಅವಳ ಒಲವನ್ನು ಅಲ್ಲಗಳೆಯ ಬಹುದೆ ?

ಸುರೇಶನಿಗೆ ಅವಳ ಒಲವು ಎಲ್ಲಿ ಎಂಬುದು ಮನದಟ್ಟಾಗಿ ಹೋಯಿತು. ಅದು ಅಸಂಭವವೇನಲ್ಲ. ಯಾಕೆಂದರೆ ತಾಯಿಯ ಬಳಿ ಯಾವಾಗಲೂ, ಸುರೇಶನೊಡನೆ ತನ್ನ ಮದುವೆ ಎಂದು ಕೇಳುತ್ತ ಬಂದಿದ್ದಾಳೆ. ಸುರೇಶನು ಅವಳಿಗಾಗಿ ಬೇರೆ ವರನನ್ನು ಹುಡುಕುತ್ತಿದ್ದರೂ ಕೊನೆಗೆ ಅವನೇ ತನ್ನನ್ನು ಮದುವೆಯಾಗುವನೆಂದು ಅದೇಕೊ ದೃಢವಾಗಿ ನಂಬಿ ಕುಳಿತಿದ್ದಾಳೆ.

ಈ ಬಗೆಯ ಚಿಂತಾಸೂತ್ರಕ್ಕೆ ಫಕ್ಕನೆ ಇನ್ನೊಂದು ಮಾತೂ ತೊಡಕಿಕೊಂಡಿತು. ಅದು ಅಂದಿನ ಪ್ರತಿಜ್ಞೆ-- ಗತಪ್ರಾಣ ಸ್ತ್ರೀಯೋರ್ವಳು ತನ್ನ ಮೇಲೆ ಹಾಕಿದ ಹೊಣೆ. ಪ್ರತಿಜ್ಞೆಯೆ ? ಪ್ರತಿಜ್ಞೆಯೇ ಸರಿ ! ಇದು ಆಗದ ಮಾತು ಎಂದು ಹೇಳಿದ್ದು ಅವಳ ಕಿವಿ ಸೇರಿತೆಲ್ಲಿ? ಅವಳು ಸುರೇಶನ ವಿಸ್ಮಿತ ಭಾವಕ್ಕೆ ಸಮ್ಮತಿಯ ಸೂಚನೆಯೆಂದು ತಿಳಿದುಕೊಂಡು ಅಂತಿಮಶಯ್ಯೆಯಲ್ಲಿ ಅದೆಷ್ಟು ಸಮಾಧಾನ ಪಟ್ಟಳು ! ಇದನ್ನೆಲ್ಲ ನೆನೆದು ಸುರೇಶನು ಅದೇ ನಿಮಿಷ ತನ್ನ ಕರ್ತವ್ಯವನ್ನು ಸ್ಥಿರಪಡಿಸಿಕೊಂಡು ಬಿಟ್ಟನು. ಬಹು ವಿವಾಹ! ಒಂದೂ ಸಮಾಜದಲ್ಲಿ ಇದೇನು ಹೊಸದಲ್ಲ. ಇಂದಿನ ಸಮಾಜವು ದೋಷವೆಂದು ಗಣಿಸಬಹುದು. ಸುರೇಶನು ಅದನ್ನೆಲ್ಲ ಗಮನಿಸಬೇಕಾಗಿಲ್ಲ. ಭಯ ಒಂದೇ-ತಂದೆ ಮತ್ತು ಹೆಂಡತಿ ಸ್ವಭಿತರಾಗುವರು. ಆದರೇನು ? ಮೊದಲು ಕರ್ತವ್ಯ, ಆಮೇಲೆ ಇನ್ನುಳಿದದ್ದು ! ತಂದೆ ಹಾಗೂ ಹೆಂಡತಿ ವಸ್ತು ಸ್ಥಿತಿಯನ್ನು ತಿಳಿದು ಕ್ಷಮಿಸಲೂ ಬಹುದು. ತಾನಾಗಿಯೇ ಹುಡುಕಿಕೊಂಡು ಹೋಗಿ ಯಾವ ಅಪಕರ್ಮವನ್ನೂ ಮಾಡುತ್ತಿಲ್ಲವಲ್ಲ ? ಕರ್ತವ್ಯದ ಕಠಿಣ ಅನುರೋಧಕ್ಕೆ ಸಿಲುಕಿ ಅವನು ಧರ್ಮರಕ್ಷಣೆಗೆ ಉದ್ಯುಕ್ತನಾಗಿದ್ದಾನೆ. ಇದಕ್ಕಾಗಿ ಯಾರೇಕೆ ಸಿಟ್ಟಾಗಬೇಕು ? ಸಿಟ್ಟಾದರೆ ಸುರೇಶನು ನಿರುಪಾಯನು ! ಆಗ ಸುರೇಶನು ಎರಡೂ ಕೈಗಳಿಂದ ಸ್ನೇಹಳ ಮುಖವನ್ನೆತ್ತಿ ಹಿಡಿದು ಸ್ನೇಹ ಗದ್ಗದ ಕಂಠದಿಂದ ' ಸ್ನೇಹಾ ' ಎಂದು ಕರೆದನು.

ಸ್ನೇಹಳು ನೀರುದುಂಬಿದ ಕಂಣುಗಳಿಂದ ಅವನೆಡೆಗೆ ನೋಡಿದಳು.

' ಸ್ನೇಹಾ, ನೀನು ನನ್ನನ್ನು ಬಹಳ ಪ್ರೀತಿಸುವಿ, ಅಲ್ಲವೆ ?'

ಸ್ನೇಹಳು ಸಮ್ಮತಿ ಸೂಚಕವಾಗಿ ತಲೆ ಅಲ್ಲಾಡಿಸಿ ಅಸ್ಫುಟಸ್ವರದಲ್ಲಿ ' ಹೌದು ' ಎಂದಳು.

' ನನ್ನನ್ನು ಬಿಟ್ಟು ಇನ್ನೆಲ್ಲಿಗೂ ಹೋಗಲಾರೆ, ಅಲ್ಲವೆ ? '

' ಹೌದು. '

' ಹಾಗಾದರೆ ನನ್ನನ್ನು ಮದುವೆಯಾಗುವಿಯಾ?-ಅಂದರೆ ಇನ್ನೆಲ್ಲಿಯೂ ಹೋಗಬೇಕಾಗಿಲ್ಲ. '

ಸ್ನೇಹಳು ಮೌನವಾಗಿ ಗೋಣು ಹಾಕಿದಳು. ಮದುವೆಯಾಗುವಳಂತೆ.

ಸುರೇಶನು ಗಂಭೀರನಾಗಿ ಹೇಳಿದನು, ' ಗೊತ್ತೇ ಸ್ನೇಹಾ, ಮೊದಲು ಇನ್ನೊಬ್ಬಳ ಸಂಗಡ ನನ್ನ ಮದುವೆಯಾಗಿದೆ,– ನನ್ನ ಹೆಂಡತಿ ಇದ್ದಾಳೆ? '

' ಗೊತ್ತು ! ನೀವು ಜಗದೀಶಣ್ಣನಿಗೆ ಹೇಳುತ್ತಿದ್ದಿರಿ. '

' ಆದರೂ ನನ್ನ ಮೇಲೆ ನಿನ್ನ ಪ್ರೇಮವೇ ? ಆದರೂ ಮದುವೆಯಾಗ ಬಯಸುವಿಯಾ ? '

' ನೀವು ನನ್ನನ್ನು ಪ್ರೀತಿಸುವಿರಲ್ಲ ?'

' ನಿಜ. ಆದರೂ ನೋಡು, ಇನ್ನೊಬ್ಬನೊಡನೆ ನಿನ್ನ ಮದುವೆಯನ್ನು ಗೊತ್ತುಮಾಡುತ್ತೇನೆ. ಅಲ್ಲಿ ನೀನು ಇನ್ನೂ ಸುಖಿಯಾಗಿರುವಿ. ನನ್ನ ಮೊದಲಿನ ಹೆಂಡತಿಯೊಡನೆ ಕೂಡಿ ನಡೆಯದಿದ್ದರೆ ನಿನಗೆ ಕಷ್ಟವಾದೀತು. ಅನುತಾಪವೂ ಆದೀತು. ಇದರಿಂದ ನನಗೂ ಸುಖವಿಲ್ಲ. ಆದ್ದರಿಂದ ನೀನು ಒಬ್ಬಳೇ ಒಬ್ಬನ ಮನೆಯ ಲಕ್ಷ್ಮಿಯಾಗಿ ಹೋಗುವದು ಒಳ್ಳೇದಲ್ಲವೆ ? ಅವನ ಪ್ರೀತಿಯನ್ನುಪಡೆದು ಸಹಜವಾಗಿಯೇ ನನ್ನನ್ನು ನೀನು ಮರೆಯಬಲ್ಲೆ.'

ಸ್ನೇಹಳು ಮತ್ತೆ ಕೈಯಲ್ಲಿ ಮುಖವಡಗಿಸಿಕೊಂಡು ಮೆಲುದನಿಯಲ್ಲಿ ಹೇಳಿದಳು,– 'ನಾನು ನಿಮ್ಮನ್ನು ಬಿಟ್ಟು ಎಲ್ಲಿಯೂ ಹೋಗಲಾರೆ, –ಆದಾದರೆ ನಾನು ಬದುಕುವದಿಲ್ಲ. '

' ಮದುವೆ ಇಲ್ಲದೆ ಚಿರದಿನ ಹೀಗೆ ಇರಬಹುದೇ ಹುಚ್ಚಿ ? '

' ಹಾಗಾದರೆ ಮದುವೆಯೇ ಆಗಲಿ– ತಾಯಿಯಂತೂ ನನ್ನನ್ನು ನಿಮಗೇ ಕೊಟ್ಟು ಹೋಗಿದ್ದಾಳೆ. '

' ಹೇಳಿದೆನಲ್ಲವೇ ನನ್ನ ಮದುವೆ ಈಗೊಮ್ಮೆ ಆಗಿದೆ ಎಂದು ? ಅವಳೂ ಇದ್ದಾಳೆ. ಆದರೂ ನನ್ನನ್ನು ಪ್ರೀತಿಸಿ ಮದುವೆಯಾಗಬಲ್ಲೆಯಾ ? '

ಸ್ನೇಹಳು ಸಮ್ಮತಿ ಸೂಚಿಸಿದಳು.

' ಹಾಗಾದರೆ ಅದೇ ಆಗಲಿ ! ಚಿರದಿನವೂ ನನ್ನನ್ನು ಹೀಗೆಯೇ ಪ್ರೀತಿ ಸುವಿಯಲ್ಲವೇ ಸ್ನೇಹಾ? ಸಂಸಾರದ ನಾನಾ ದುಃಖ ಕಷ್ಟಗಳ ಮಧ್ಯದಲ್ಲಿಯೂ ಹೀಗೆಯೇ ಪ್ರಸನ್ನ ಮುಖಳಾಗಿ ಪ್ರೀತಿಯನ್ನು ಸಲ್ಲಿಸಬಲ್ಲೆಯಾ ಸ್ನೇಹಾ ? ' ಎಂದು ಹೇಳುತ್ತ ಹೇಳುತ್ತ ಅವಳ ಪುಷ್ಪಸಮ ಮುಖವನ್ನು ಇನ್ನಷ್ಟು ಎತ್ತಿ ಹಿಡಿದು ಮತ್ತೆ ಬಿಟ್ಟು ಪ್ರೇಮಸಂಚಿತ ದೃಷ್ಟಿಯಿಂದ ಅವಳ ಸುಧಾಸಿಂಚಿತ ಮುಖವನ್ನೇ ನೋಡುತ್ತ ಉತ್ತರ ನಿರೀಕ್ಷಿಸಿದನು.

ಸ್ನೇಹಳು ಮತ್ತೆ ಮುಖ ತಗ್ಗಿಸಿ ' ಹುಂ ' ಎಂದಳು.

ಸುಸಜ್ಜಿತ ಶಯ್ಯಾಗೃಹ; ಉಜ್ವಲ ದೀಪಗಳಿಂದ ತೊಳಗುತ್ತಿವೆ. ತೆರೆದ ಕಿಡಿಕಿಗಳೊಳಗಿಂದ ಉದ್ಯಾನದೊಳಗಿನ ಸಂಧ್ಯಾ ಪಾರಿಜಾತದ ಗಂಧದ ಗಾಳಿಯು ಮೃದುವಾಗಿ ಮೈತಟ್ಟಿ ಮನಮುಟ್ಟಿ ಸುಖಕೊಡುತ್ತಿದೆ. ದೇವ ಮಂದಿರದ ಬೋಧನ ನವಮೀ*ಯ ಸನಾಯಿಯ ಮಧುರ ಸ್ವರವು ತಂದ್ರಾ-ಜಡಿತ ಮನಸ್ಸನ್ನು ಮೆಲ್ಲಗೆ ಜಾಗರಿಸುತ್ತಿವೆ. ಒಂದು ಕೋಚಿನ ಮೇಲೆ ಸುರೇಶನು ಆರೆಯೊರಗಿ ಕುಳಿತಿದ್ದಾನೆ.

ಸುರೇಶನು ಅಂದೇ ತನ್ನೂರಿಗೆ ಬಂದಿದ್ದಾನೆ. ಸ್ನೇಹಳಿಗೆ ತಿಳಿಹೇಳಿ ಅವಳನ್ನು ಕಲಕತ್ತೆಯಲ್ಲಿಯೇ ಬಿಟ್ಟು ಬಂದಿದ್ದಾನೆ. ಈಗ ತಂದೆಗೂ ಹೆಂಡತಿಗೂ ತನ್ನ ಶಪಥದ ಗುರುತ್ವವನ್ನು ತಿಳಿಸಿ ಸಮ್ಮತಿ ಪಡೆದುಬಿಟ್ಟರೆ ಗೆದ್ದನು. ಈ ವಿಷಯದಲ್ಲಿ ಹೆಂಡತಿಯ ಅನುಮತಿಯ ಪ್ರಯೋಜನವೇ ಹೆಚ್ಚು. ಎಂದೇ ಇನ್ನೂ ತಂದೆಗೆ ಏನನ್ನೂ ತಿಳಿಸಿಲ್ಲ. ಮೊದಲು ಹೆಂಡತಿಯ ಇದಿರು ಮಾತೆತ್ತಬೇಕೆಂದು ಅವಳಿಗಾಗಿ ಕಾದಿದ್ದಾನೆ.

ಮೆತ್ತಗೆ ಬಾಗಿಲು ತೆರೆದು ಅರ್ಧ ಅವಗುಂಠಿತ ತರುಣಿಯೋರ್ವಳು ಒಳಗೆ ಬಂದು ರತ್ನಗಂಬಳಿಯಿಂದ ಹಾಸಿದ ನೆಲದ ಮೇಲೆ ಮೆಲ್ಲಡಿಯಿಡುತ್ತ ಪಲ್ಲಂಗದ ಬಳಿ ಹೋಗಿ ತುಸು ಚಮಕಿತಳಾಗಿ ನಿಂತಳು. ಆಮೇಲೆ ತಂದ್ರಾಜಡಿತನಾಗಿ ಆತು ಕುಳಿತ ಸುರೇಶನ ಬಳಿಸಾರಿ ನಿಂತಳು. ಸುರೇಶನು ಎಚ್ಚೆತ್ತು ನೋಡುತ್ತಾನೆ-- ಓರ್ವ ಅಪರಿಚಿತ ತರುಣಿಯು ತನ್ನ ಉಜ್ವಲವಾದ ಕಪ್ಪು ಕಂಣುಗಳಿಂದ ತನ್ನನ್ನೇ ನೋಡುತ್ತಾಳೆ. ಸುರೇಶನು ತ್ರಸ್ತನಾಗಿ ಎದ್ದು ಕುಳಿತನು. ಅವನಿಗೆ ಗೊತ್ತಿಲ್ಲದೆ ಅವನ ಬಾಯಿಂದ 'ಯಾರು?' ಎಂಬ ಮಾತು ಜಾರಿಬಿಟ್ಟಿತು. ತರುಣಿಯು ಕಂಣು ತಗ್ಗಿಸಿ, ಸುರೇಶನ ವಿಮೂಢ ಭಾವವನ್ನು ಅರಿತುಕೊಂಡು ಅವಗುಂಠನವನ್ನು ಇನ್ನಷ್ಟು ಜಗ್ಗಿ ಮುಖ ಮರೆಮಾಡಿಕೊಂಡು ಜಡಿತ ಕಂಠದಿಂದ 'ನಾನು' ಎಂದಳು. ಸ್ವಲ್ಪ

ಆಶ್ವಿನ ಶುಕ್ಲ ದಶಮಿಯ ರಾತ್ರಿ ಪ್ರತಿಮಾ ವಿಸರ್ಜನೆ. ಆ ಮುನ್ನ ನವಮಿಯು ಪ್ರತಿಮಾ ಜಾಗರಣ ರಾತ್ರಿ. ಇದಕ್ಕೆ ಬೋಧನ ನವಮಿ ಎಂದು ಕರೆಯುತ್ತಾರೆ.

ತಡೆದು ಮತ್ತೆ ಸುರೇಶನ ಕಡೆಗೆ ನಿಟ್ಟಿಸಿ ಮೊದಲಿಗಿಂತ ಸ್ಪಷ್ಟ ಸ್ವರದಲ್ಲಿ 'ನಾನು, ಸುಧಾ' ಎಂದಳು.

ಸುಧಾ ! ಅದಂತೂ ಅವನ ಹೆಂಡತಿಯ ಹೆಸರು ! ಆ ದಿನ ಶೋಭನದ ರಾತ್ರಿ ಕಂಡ ಸುಧಾ ಈಗ ಇಷ್ಟು ದೊಡ್ಡವಳಾಗಿದ್ದಾಳೆ ! ಸುರೇಶನು ತುಸು ಅತ್ತಿತ್ತ ಸರಿದು ಭದ್ರವಾಗಿ ಕುಳಿತನಾದರೂ ಮನಸ್ಸಿನಲ್ಲಿ ಚಂಚಲನಾದನು. ಈ ವರೆಗೆ ಅವನು ತಂದ್ರಾಜಡಿತ ನಯನಗಳಿಂದ ನೋಡಿದ ನೋಟವೇ ಬೇರೆ ! ಈ ಸುಸಜ್ಜಿತವಾದ ಶಯ್ಯಾಗೃಹದಲ್ಲಿ ಪಾರಿಜಾತದ ಗಂಧ ಹಾಗೂ ಸನಾಯಿಯ ಸ್ವನದೊಂದಿಗೆ ಓರ್ವ ಮುಗ್ಧ ಕಿಶೋರಿಯು ಲಜ್ಜಾಕುಂಠಿತ ಪದದಿಂದ ಮೆಲ್ಲಮೆಲ್ಲಗೆ ಹೆಜ್ಜೆ ಇಕ್ಕುತ್ತ ತನ್ನ ಸುನೀಲ ನೇತ್ರಗಳಿಂದ ಸುರೇಶ ನನ್ನು ನೋಡುತ್ತ ಅವನ ಬಳಿ ಸಾರುತ್ತಿದ್ದಾಳೆ ! ಎಚ್ಚತ್ತು ನೋಡುತ್ತಾನೆ– ಅದಲ್ಲ; ಅದರ ಬದಲು ಓರ್ವ ಸಂಕೋಚಹೀನ ಯುವತಿಯು ತನ್ನ ಅಚಂಚಲ ಅಸಹನೀಯ ಕಾಂತಿಯುಕ್ತ ಕಪ್ಪು ಕಂಣುಗಳಿಂದ ಅವನ ಮೇಲೆ ಸ್ಥಿರ ದೃಷ್ಟಿಯನ್ನಿಟ್ಟು ನಿಂತಿದ್ದಾಳೆ; ಇಲ್ಲಿ ಅವಳೇ ಅಬಾಧಿತ ಅಧಿಕಾರಿಣಿ. ಆ ಲಜ್ಜಾನಮ್ರ ಬಾಲಿಕೆಯು ಇಲ್ಲಿ ಓರ್ವ ಅಪರಾಧಿನಿ, ಅಭಿಸಾರಿಕೆ ಮಾತ್ರ.

ಸುರೇಶನು ಗಂಭೀರನಾಗಿ ಕುಳಿತುಕೊಂಡನು.

ತುಸು ತಡೆದು ಸುಧಾ ಕೆಲಸವಿದ್ದವರ ಹಾಗೆ ಟೀಬಲ್ಲಿನ ಹತ್ತಿರ ಹೋದಳು. ಅಲ್ಲಿ ಅದನ್ನು ಇದನ್ನು ಸರಿಸಿ, ಇಟ್ಟು, ಮತ್ತೆ ಎತ್ತಿ ಸಾಮಾನು ಗಳನ್ನು ಸರಿಪಡಿಸುತ್ತ ಈಗ ತಾನು ಏನು ಮಾಡುವದು ಎಂಬುದನ್ನು ಸ್ಥಿರ ಮಾಡಿಕೊಂಡಳು. ಆ ಮೇಲೆ ಅವಳು ಬಾಗಿಲಕಡೆಗೆ ಹೋಗುತ್ತಿರುವದನ್ನು ನೋಡಿ ಸುರೇಶನು 'ಕೇಳಿದಿಯಾ ?' ಎಂದನು.

ಸುಧಾ ಹತ್ತಿರ ಬಂದು ನಿಂತಳು.

'ಕುಳಿತುಕೊ.'

ಅತ್ತ ಇತ್ತ ನೋಡಿ ಕೊನೆಗೆ ಸುರೇಶನು ಕುಳಿತ ಆಸನದ್ದೇ ಒಂದು ಬದಿಗೆ ಸಸಂಕೋಚವಾಗಿ ಕುಳಿತುಕೊಂಡಳು. ಪತಿಯು ಬಹಳ ಹೊತ್ತು ಸುಮ್ಮನಿದ್ದದ್ದು ನೋಡಿ ತನ್ನ ಆ ಅಚಂಚಲ ಚಕ್ಷುಗಳಿಂದ ಮತ್ತೆ ಸುರೇಶ ನನ್ನು ನಿರುಕಿಸಿ, 'ನನ್ನನ್ನು ನೀನು ಕರೆದಿದ್ದೆಯಾ?'* ಎಂದು ಕೇಳಿದಳು.

ಆದರೂ ಸುರೇಶನು ನೀರವ.

* ಪತಿಪತ್ನಿಯರು ತಮ್ಮತಮ್ಮಲ್ಲಿ ಏಕವಚನದಿಂದ ಕರೆಯುವದು ಬಂಗಾಲದ ರೂಢಿ.

ಸ್ವಲ್ಪ ಹೊತ್ತು ಬಿಟ್ಟು ಸುಧಾ ಮತ್ತೆ ತಾನೇ ‘ ನನಗೆ ನೀನು ಏನಾದರೂ ಹೇಳುವದಿದೆಯೆ ?’

‘ ಹುಂ. ’

‘ ಏನು ? ’

ಸುರೇಶನು ಮತ್ತೆ ನೀರವ.

ಸುಧಾ ತುಸು ಹಾದಿ ಕಾದು, ‘ ಏನಾದರೂ ಸಂಕೋಚದ ಮಾತೆ ? ’ ಎಂದಳು. ಈ ಸಲ ಸುರೇಶನಿಗೆ ಬಾಯಿ ಬಂತು. ‘ ನನಗೇನೂ ಅಷ್ಟು ಸಂಕೋಚವೆನಿಸುತ್ತಿಲ್ಲ. ’

‘ ಹಾಗಾದರೆ ನಾನೇ ಸಂಕೋಚಗೊಳ್ಳಬೇಕಾದ ಯಾವದಾದರೂ ಮಾತೆ ? ’

‘ ಅಲ್ಲ; ಹಾಗೇನಲ್ಲ. ನನ್ನದೇ ಮಾತು ನಿಜ; ಆದರೆ ಸಂಕೋಚದ್ದಲ್ಲ– ಕರ್ತವ್ಯದ್ದು. ನೀನು ಸ್ವಲ್ಪ ಮನಸ್ಸುಗೊಟ್ಟು ಕೇಳಬೇಕಾದ್ದು, ಚನ್ನಾಗಿ ತಿಳಿದುಕೊಳ್ಳಬೇಕಾದ್ದು. ’

‘ ಹೇಳು. ’

ಆಗ ಸುರೇಶನು ಮೆಲ್ಲಮೆಲ್ಲಗೆ ಹೇಳತೊಡಗಿದನು–– ಅರ್ಥಾತ್ ಹೇಳಬಹುದಾದಷ್ಟನ್ನು. ಮೊಟ್ಟಮೊದಲು ಆ ಊರಿಗೆ ಹೋಗಿ ಸ್ನೇಹಳಿಗೆ ನೆಮ್ಮದಿ ಇಲ್ಲದಾಗ ಚಿಕಿತ್ಸೆಯಿಂದ ಆರೋಗ್ಯ ಮಾಡಿದ್ದು; ಆ ಮೇಲೆ ಮತ್ತೊಮ್ಮೆ ಜಗದೀಶನ ಒತ್ತಾಯಕ್ಕೆ ಪೂಜಾ ಬಿಡುವಿನಲ್ಲಿ ಹೋದದ್ದು; ಆಗಾದ ಮಾತುಕಥೆ; ಆ ಮೇಲೆ ಊರಿಗೆ ಬರುತ್ತಲೇ ಸುಧೆಯೊಂದಿಗಾದ ವಿವಾಹ; ಅತ್ತ ಅವರ ಭ್ರಾಂತ ಆಶಾಪೋಷಣೆ ಮತ್ತು ಕೊನೆಗೆ ಸ್ನೇಹಳ ತಾಯಿಯು ಮೃತ್ಯುಶಯ್ಯೆಯಲ್ಲಿ ಪ್ರಕಾರಾಂತರವಾಗಿ ತನ್ನಿಂದ ತೆಗೆದುಕೊಂಡ ಪ್ರಮಾಣವಚನ; ಇದನ್ನೆಲ್ಲ ಹೆಂಡತಿಯ ಇದಿರು ಒಂದೊಂದಾಗಿ ಸುರೇಶನು ವಿವರಿಸುತ್ತ ಹೋದನು.

ಸುಧಾ ಸುಮ್ಮನೆ ಕೇಳಿಕೊಂಡಳು. ಸುರೇಶನು ಹೇಳಿ ಮುಗಿಸಿದ ಮೇಲೆ ಸುಧಾ ಕೇಳಿದಳು–– ‘ ಆ ಹುಡಿಗೆ ಈಗೆಲ್ಲಿ ? ’

‘ ಹುಡಿಗೆಯೆ ? ಸ್ನೇಹಾ ? ಅವಳು ನನ್ನ ಕಲಕತ್ತೆಯ ನಿವಾಸದಲ್ಲಿ. ’

‘ ಕಲಕತ್ತೆಯ ನಿವಾಸದಲ್ಲಿಯೆ ? ಹಾಗಾದರೆ ಜ್ಯೇಷ್ಠ ಆಷಾಢಮಾಸ ದಿಂದಲೇ ಅವಳು ಅಲ್ಲಿ ಇದ್ದಾಳೆ ! ಎಲ್ಲಿ– ಈ ವರೆಗಂತೂ ನಾವು ಈ ಬಗ್ಗೆ ಏನನ್ನೂ ಅರಿಯಲಿಲ್ಲ ? ’

ಸುರೇಶನ ರಕ್ತ ಸ್ವಲ್ಪ ಬಿಸಿಯಾಯಿತು. ಸುಧೆಯ ಮಾತಿನಲ್ಲಿ ತುಸು ಕರ್ತೃತ್ವವೂ ತಿರಸ್ಕಾರವೂ ಬೆರೆತಂತೆ ಸುರೇಶನಿಗೆ ಭಾಸವಾಯಿತು.

' ತಿಳಿಸಲಿಲ್ಲವೆಂದು ಅನ್ಯಾಯವೇನೂ ಆಗಲಿಲ್ಲ. ಆಗ ತಿಳಿಸಿದ್ದರೇನೋ ಈಗಲೂ ಅದೇ. '

' ಅದು ಹಾಗಲ್ಲ. ಸ್ನೇಹಾ ಎಂದು ತೋರುತ್ತದೆ ಆ ಹುಡುಗಿಯ ಹೆಸರು ?—– ಅವಳನ್ನು ಇಲ್ಲಿಯೇ ತಂದು ಇರಿಸಲೂ ಬಹುದಾಗಿತ್ತು. '

ಸುರೇಶನು ಇನ್ನಷ್ಟು ಉತ್ತೇಜಿತನಾಗಿ ಹೇಳಿದನು, ' ಅಲ್ಲಿ ಇರಿಸಿದ ರೇನೋ ಇಲ್ಲಿ ಇರಿಸಿದರೂ ಅದೇ. ಅರ್ಥ ಒಂದೇ. '

'ಅರ್ಥ ಒಂದೇ ಅಲ್ಲ. ಇಲ್ಲಿ ನಿನ್ನ ತಂದೆ ಇದ್ದಾರೆ, ಹೆಂಡತಿ ಇದ್ದಾಳೆ!'

' ನಾನು ಮದುವೆಯಾಗಲಿರುವವಳನ್ನು ಆ ಮನ್ನ ಹತ್ತಿರ ಇರಿಸಿ ಕೊಂಡರೆ ಏನೂ ತಪ್ಪಾಗಲಾರದು. '

' ಸ್ವಲ್ಪ ತಪ್ಪಾಗುವದು. ಹೋಗಲಿ ಆ ಮಾತು. ಈಗ, ನೀನು ಅವಳನ್ನು ಮದುವೆಯಾಗುವದು ಸ್ಥಿರವೇನು ? '

'ಈಗ ಸ್ಥಿರಮಾಡಲಿಲ್ಲ; ಇದು ಆಗಲೇ ಸ್ಥಿರವಾಗಿತ್ತು. ಇಂಥ ಸಂದರ್ಭ ದಲ್ಲಿ ಮದುವೆಯಲ್ಲದೇ ಇನ್ನಾವ ಕರ್ತವ್ಯ ? '

' ಈಗ ಮದುವೆಯೇ ಕರ್ತವ್ಯ ! ಆದರೆ ಆಗ ನೀನು ಅನ್ಯ ಸುಪಾತ್ರ ದಲ್ಲಿ ಅವಳ ಮದುವೆ ಮಾಡಬಹುದಾಗಿತ್ತು. '

' ಈ ನಿನ್ನ ' ಆಗ-ಈಗ ' ಗಳಲ್ಲಿ ಏನು ಭೇದ ? '

ಯುವತಿಯು ದೀಪ್ತನಯನಗಳಿಂದ ಅವನನ್ನು ನಿಟ್ಟಿಸಿ ನೋಡಿ, ' ಈಗ ನೀನು ಅವಳನ್ನು ಪ್ರೀತಿಸುತ್ತಿರುವೆ. ಅಲ್ಲದೇ ಇಷ್ಟು ದಿನ ಹತ್ತಿರಿಟ್ಟು ಕೊಂಡಿರುವೆ. '

ಸುರೇಶನು ರೇಗಿಹೋಗಿ ಎದ್ದುನಿಂತು, ಉಚ್ಚ ಕಂಠದಲ್ಲಿ ಹೇಳಿದನು– ' ಅತಿ ಸ್ವಾರ್ಥಪರ ಮಾತು ! ನಾನು—– ನಾನು ಅವಳನ್ನು ಪ್ರೀತಿಸುವೆನೆಂದೇ ಇಟ್ಟುಕೊಳ್ಳುವಾ; ಆದರೆ ಅವಳನ್ನು ಮದುವೆಯಾಗುವದು ಆಗಲೂ ನನ್ನ ಕರ್ತವ್ಯವಿತ್ತು. ಈಗಲೂ ಇದೆ. '

'ಒಳ್ಳೆಯದೇ. ಅದಕ್ಕಾಗಿ ನನ್ನ ಸಮ್ಮತಿ ಬೇಡಲು ಬಂದಿರುವಿಯೇನು ? ಇದೂ ನಿನ್ನ ಕರ್ತವ್ಯದ ಅಂಗವೇ ? '

' ನಾನು ಅಷ್ಟು ಮೂರ್ಖನಲ್ಲ. ಆದರೆ ನಿನಗೆ ತಿಳಿಸುವದು ನನ್ನ ಕರ್ತವ್ಯ. '

‘ ಒಳ್ಳೇದು. ತಂದೆಗೆ ಇನ್ನೂ ತಿಳಿಸಿಲ್ಲವೆಂದು ಕಾಣುತ್ತದೆ ! ಅದೂ ಒಂದು ಕರ್ತವ್ಯ. ’

‘ ಅದನ್ನು ನೀನು ನೆನಪುಮಾಡಿಕೊಡುವ ಅವಶ್ಯಕತೆಯಿಲ್ಲ. ’

‘ ಅವರು ಸಮ್ಮತರಾಗುವರೆಂದು ನಿನ್ನ ಗ್ರಹಿಕೆಯೇನು ? ’

‘ ಆಗದಿದ್ದರೂ ನನ್ನ ಕರ್ತವ್ಯವನ್ನು ನಾನು ಪಾಲಿಸುವವನು. ’

‘ ಅವರು ಅನುಮತಿ ಕೊಡದಿದ್ದರೂ ನಿನ್ನ ಮೂಲ ಕರ್ತವ್ಯವು ಹಾಗಾದರೆ ಸ್ಥಿರವೇ !’

‘ ನಿಃಸಂಶಯವಾಗಿ. ’

‘ ಒಳ್ಳೇದು; ಇನ್ನು ನಾನೀಗ ಹೋಗಬಹುದಲ್ಲ ? ’

‘ ನಿನ್ನ ಇಚ್ಛೆ ’ ಎಂದು ಹೇಳಿ ಪರಿತ್ಯಕ್ತ ಕೋಚಿನ ಮೇಲೆ ಸುರೇಶನು ಮಲಗಿಕೊಂಡನು. ಸುಧಾ ನಿಂತಲ್ಲಿಯೇ ನಿಂತು ನಿಂತು ಏನನ್ನೋ ಎಣಿಕೆ ಹಾಕಿಕೊಂಡಳು. ಆ ಮೇಲೆ ಮೆಲ್ಲಮೆಲ್ಲಗೆ ಹೊರಟುಹೋದಳು.

೫

ಮಧ್ಯಾಹ್ನ. ಯಜಮಾನ ಸಂತೋಷಬಾಬುವು ಊಟಕ್ಕೆ ಕುಳಿತಿದ್ದಾನೆ. ಹತ್ತಿರ ಅರ್ಧಾವಗುಂಠಿತ ಸೊಸೆ ಸುಧಾ ಕುಳಿತು ಬೀಸಣಿಕೆಯಿಂದ ಗಾಳಿ ಹಾಕುತ್ತಿದ್ದಾಳೆ. ಸಂತೋಷಬಾಬುವು ಅತಿಶಯ ಉದ್ವಿಗ್ನನಾಗಿ ಊಟ ಮಾಡುತ್ತಿದ್ದಾನೆ ! ಸ್ವಲ್ಪ ಹೊತ್ತಿನ ಮೇಲೆ ಸೊಸೆಯನ್ನು ಕುರಿತು ‘ತಾಯಿ’ ಎಂದನು.

ವಧುವು ಮೊಗವೆತ್ತಿ ಮಾವನ ಕಡೆ ನೋಡಿದಳು.

ಸಂತೋಷಬಾಬು ತುಸು ತಡೆದು, ‘ ಸುರೇಶನು ಮನೆಗೆ ಬಂದಿದ್ದಾನೆ, ಗೊತ್ತೆ ತಾಯಿ ? ’

ಸೊಸೆ ಮೊಗತಗ್ಗಿಸಿದ್ದು ನೋಡಿ ಅವಳಿಗೆ ಈ ಸುದ್ದಿ ಗೊತ್ತು ಎಂದು ತಿಳಿದನು.

' ನಿನ್ನನ್ನು ನಿನ್ನೆ ಅವನು ಕಂಡಿದ್ದನೇನು ? '

ಸುಧಾ ಮೊಗ ತಗ್ಗಿಸಿದವಳು ಸುಮ್ಮನೇ ಇದ್ದಳು.

ಸಂತೋಷಬಾಬುವು ಮತ್ತೆ ಪ್ರಶ್ನೆ ಮಾಡಲಾಗಿ ' ಹುಂ ' ಎಂದಳು.

' ಏನಾದರೂ ಹೇಳಿದನೆ ? '

ವಧುವು ಮಾತನಾಡದೆ ಸುಮ್ಮನೆ ಗೋಣು ಹಾಕಿದಳು. ಸಂತೋಷ ಬಾಬುವು ಮತ್ತೆ ತುಸು ತಡೆದು ಮೆಲುದನಿಯಲ್ಲಿ ಉಸುರಿದನು, 'ಹಾಗಾದರೆ ನೀನೆಲ್ಲ ಕೇಳಿರುವಿ ? '

ಸುಧಾ ಮೃದುವಾಗಿ ತಲೆ ತಗ್ಗಿಸಿಯೇ ' ಕೇಳಿರುವೆ ' ಎಂದಳು.

ಸಂತೋಷಬಾಬುವು ಒಮ್ಮಿಂದೊಮ್ಮೆ ಗಟ್ಟಿಯಾಗಿ ಒದರಿ ಹೇಳ ತೊಡಗಿದನು ' ಆ ಹತಭಾಗಿನಿಗೆ ನಾಚಿಗೆ ಬರಲಿಲ್ಲವೆ? ಬುದ್ಧಿಶುದ್ಧಿ ಒಮ್ಮಿಂ ದೊಮ್ಮೆ ಲೋಪವಾಗಿ ಹೋಯಿತೆ ? ತನ್ನ ವಿನಾಶವನ್ನು ತಂದುಕೊಂಡು ಒೀಗೆ ಪ್ರತಿಜ್ಞಾಪಾಲನೆ ಮಾಡುವದೇ ? ಮಗ ಒಮ್ಮಿಂದೊಮ್ಮೆ ಭೀಷ್ಮ ದೇವನಾಗಿ ಬಿಟ್ಟಿದ್ದಾನೆ. ಅದೆಲ್ಲ ಕಲಕತ್ತೆಯಲ್ಲಿ ಇದ್ದದ್ದರ ಫಲ! ಅವನೊಬ್ಬ-ನನ್ನೇ ಓದಲು ಬಿಟ್ಟಿದ್ದೇ ನನ್ನದು ಅನ್ಯಾಯವಾಯಿತು ! ಹೋಗಲಿ ! ನಾನು ಚನ್ನಾಗಿ ಛೀ ಹಾಕಿ ತಿಳಿಹೇಳಿದ್ದೇನೆ. ಅವನು ಆ ಕೆಲಸ ಮಾಡಿದರೆ ಅವನನ್ನು ನಿಃಸಂದೇಹವಾಗಿ ತ್ಯಾಜ್ಯಪುತ್ರನನ್ನಾಗಿ ಮಾಡುವೆನು -- ಅವನ ಮುಖವನ್ನೂ ಎಂದೂ ನೋಡುವದಿಲ್ಲ. ಮತ್ತೆ ಒಂದು ನಿಮಿಷವಾದರೂ ಆ ವಿಚಾರಕ್ಕೆ ಅವನು ಆಸ್ಪದ ಕೊಟ್ಟಿದ್ದಾದರೆ ಈಗಲೇ ನನ್ನ ಮನೆ ಬಿಟ್ಟು ಬೀದಿಯಲ್ಲಿ ನಿಲ್ಲಬೇಕು. ಮತ್ತು ಒಡನೆಯೇ ನನ್ನ ಅವನ ಸಂಬಂಧವು ಆಜನ್ಮವೂ ಕಡಿದುಹೋದಂತೆ ಎಂದು ಸೆರಗಿಗೆ ಗಂಟು ಹಾಕಿಕೊಳ್ಳಬೇಕು.

ವಧುವು ಪಿಟ್ಟೆನ್ನದೆ ಗಾಳಿ ಬೀಸತೊಡಗಿದಳು. ಮತ್ತೆ ಸಂತೋಷಬಾಬುವು ಸೊಸೆಗೆ ಸಮಾಧಾನ ಹೇಳುವ ದನಿಯಲ್ಲಿ ಹೇಳತೊಡಗಿದನು, --' ಇಷ್ಟು ಉದ್ದ ನೀರಿಗೆ ಅವನು ಹೋಗಲಾರ. ನಾನು ಅವನಿಗೆ ಇಂದೇ ಕಲಕತ್ತೆಗೆ ಹೋಗಿ ಹುಡಿಗೆಯನ್ನು ಇಲ್ಲಿ ಕರೆತರಲು ಹೇಳಿದ್ದೇನೆ. ಒಂದು ಒಳ್ಳೇ ವರ ನೋಡಿ ಹುಡಿಗೆಯನ್ನು ಮದುವೆಮಾಡಿ ಕೊಟ್ಟುಬಿಟ್ಟರೆ ಅನಿಷ್ಟ ದೂರಾ ದಂತಾಗುವದು. '

ಸುಧಾ ಕೇಳಿ ತುಸು ಸುಮ್ಮನಿದ್ದು ಆ ಮೇಲೆ ಕಿರುದನಿಯಲ್ಲಿ ಹೇಳಿ ದಳು --' ಅದು ಈಗ ಆಗುವ ಹಾಗಿಲ್ಲ ತಂದೆ; ನೀವು ಅವರಿಗೆ ತ್ಯಾಜ್ಯ

ಪುತ್ರನನ್ನು ಮಾಡುವ ಇಲ್ಲವೇ ಪ್ರಾಪ್ಯ ವಿಷಯಸಂಪತ್ತಿನಿಂದ ವಂಚಿತನನ್ನಾಗಿ ಮಾಡುವ ಹೆದರಿಕೆ ಹಾಕದಿದ್ದರೇ ಚನ್ನಾಗಿತ್ತು. '

' ಅದೇನು ? ಏನು ಹೇಳುವೆ ತಾಯಿ ? '

' ನಿಮ್ಮ ನಿಷೇಧಕ್ಕಿಂತ ವಿಷಯಸಂಪತ್ತಿಯ ಬೆಲೆ ಹೆಚ್ಚೆ ? ಆ ಹೆದರಿಕೆ ಹಾಕದಿದ್ದರೇ ನೆಟ್ಟಗಿತ್ತು. '

ಯಜಮಾನನು ಕೆಲ ನಿಮಿಷ ಸುಮ್ಮನಿದ್ದು ಕೊನೆಗೆ ಹೇಳಿದನು — ' ಅದು ಸನ್ಮಾನರಕ್ಷಣೆ ಮಾಡುವವನಿಗೆ ಒಪ್ಪುವ ಮಾತು ತಾಯಿ ! '

' ಆ ಸನ್ಮಾನರಕ್ಷಣೆ ಮಾಡದವನು ತನ್ನ ಮನಬಲ್ಲಂತೆ ನಡೆದುಕೊಳ್ಳಲೊಲ್ಲನೇಕೆ ! ಅಲ್ಲವೆ ?'

' ಅಲ್ಲ ತಾಯಿ, ಈ ಮಾತು ಈಗ ನೀನು ಹೇಳುವಿಯೋನೋ ನಿಜ. ಆದರೆ ನನ್ನಷ್ಟು ಅನುಭವ ಬಂದಂದು ನಿನಗೆ ತಿಳಿಯುವದು; ಅಜನ್ಮದ ಸ್ನೇಹಪುತ್ತಳಿಗೆ, ಮಾನ ಅಪಮಾನದ ವಿಷಯದಲ್ಲಿ ಇಂಥ ಒಂದು ದೊಡ್ಡ ಅಪರಾಧ ಮಾಡಲು ಅನುವುಗೊಡಲಿಕ್ಕಾದೀತೇ ತಾಯಿ ? ಅವನು ಒಂದು ವೇಳೆ ಕಡಲನ್ನು ಕಂಡು ಹಿಗ್ಗಿ ಮಗುವಿನ ಹಾಗೆ ಅದರಲ್ಲಿ ಹಾರಿಕೊಳ್ಳಲು ಹೋದರೆ, ನಾನು ಅವನನ್ನು ಎದೆಗವಚಿಕೊಂಡು ಆ ಸಂಕಟ ನಿವಾರಣೆ ಮಾಡದೇ ಇರಬಲ್ಲೆನೇ ? ಹಾಗೆ ಹಿಚುಕಿ ಹಿಡಿದಾಗ ಅವನಿಗೆ ದುಃಖವಾಗಬಹುದು; ಅನುತಾಪವಾಗಬಹುದು. ಆದರೂ ನಾನು ಅವನನ್ನು ಬಿಟ್ಟುಕೊಡುವದಿಲ್ಲ. ಪ್ರೀತಿಯಿಂದಾಗದಿದ್ದರೆ, ಅಳಿಸಿ ಹೆದರಿಸಿಯಾದರೂ ಅವನನ್ನು ಹಿಡಿದು ಕೂಡಿಸಲು ಪ್ರಯತ್ನಿಸುವೆ. '

ಸುಧಾ ಕಟ್ಟಿದ ಕಂಠದಿಂದ ಹೇಳಿದಳು, ' ತಂದೇ, ನನ್ನ ಮೇಲೆಯೂ ನಿಮ್ಮ ಸ್ನೇಹವಿತ್ತು. '

' ಇತ್ತು ಎಂದೇಕೆ ! ಈಗಲೂ ಇಲ್ಲವೇ ? ನೀನು ಈಗ ಅವನಿಗಿಂತಲೂ ನನಗೆ ಹೆಚ್ಚಿನವಳು; ನೀನು ಅಸುಖಿಯಾಗುವಿಯೆಂದೇ ಇನ್ನೂ-?'

' ನಾನೂ ಅದಕ್ಕಾಗಿಯೇ ಹೇಳುತ್ತೇನೆ— *ತಾಯಿ ಇಲ್ಲ ಎಂದೇ ಈ ಎಲ್ಲ ಮಾತು ನಿಮಗೇ ಹೇಳಬೇಕಾಗಿದೆ—ನಿಮ್ಮ ಮಾತಿನ ಮೇಲಿಂದ ನಾನೇ ಪ್ರಧಾನ ಬಾಧೆ ಎಂದು ಸ್ಪಷ್ಟವಾಗುತ್ತದೆ. ನಾನೇನು ನಿಜವಾಗಿಯೂ ಅಷ್ಟು ಸ್ವಾರ್ಥಪರಳೆ ? '

* ಅತ್ತೆಗೆ ತಾಯಿಯೆಂದೇ ಸಂಬೋಧಿಸುವ ವಾಡಿಕೆ.

' ನಿನಗೆ ಹಾಗೆ ಯಾರಾದರೂ ಹೇಳಿದರೆ ಇಲ್ಲವೇ ಭಾವಿಸಿದರೆ ಅವರೇ ಜಗತ್ತಿನಲ್ಲಿ ಎಲ್ಲರಿಕ್ಕೂ ಹೆಚ್ಚಿನ ಸ್ವಾರ್ಥಪರರೆಂದು ತಿಳಿದುಕೊಳ್ಳುವೆ. ಬಹು ಕಷ್ಟವಾಗುವದು ತಾಯಿ, ನಾನು ನಿನ್ನನ್ನು ತಂದು ಸುಖ ಕೊಡಲಿಲ್ಲ. ಹೀಗಿರಲು—'

' ಎಲ್ಲಿ ? ನೀವೇನೂ ಉಣ್ಣಲಿಲ್ಲವಲ್ಲ ? ಪಲ್ಯ ನೆಟ್ಟಗಾಗಿಲ್ಲವೆ ? ಅದನ್ನು ನಾನೇ ಮಾಡಿದ್ದೇನೆ. ಸ್ವಲ್ಪೂ ತಿನ್ನಲಿಲ್ಲ—ಒಡೆಯೂ ರುಚಿಸಲಿಲ್ಲ ವೇನು ?'

' ಇದೇನು ತಿನ್ನುವೆನಲ್ಲ ತಾಯಿ ! ಒಳ್ಳೇ ರುಚಿಯಾಗಿದೆ. ಆದರೆ ಕೇಳು–'

'ಹಾಲು ತಂದಿಲ್ಲ ಇನ್ನೂ—ಅದು ಬಹಳ ಕಾದು ಹೋಗಿರಬೇಕು. '

ಸುಧಾ ಎದ್ದು ಇನ್ನೊಂದು ಕೋಣೆಗೆ ಹೋದಳು. ಕೂಡಲೇ ಹಾಲು ತಂದು ಹಾಸ್ಯಮುಖದಿಂದ ಹೇಳಿದಳು, 'ಇಲ್ಲ, ಹಾಲು ಸರಿಯಾಗಿದೆ. ಇಂದು ಹಾಲು ಕುಡಿದುನೋಡಿ ನೀವೇ ಹೇಳಬೇಕು, ಸಕ್ಕರೆ ಬೆರಸಿರುವೆನೋ ಇಲ್ಲವೋ. '

ಸೊಸೆಯ ಹಾಸ್ಯವಿಕಸಿತ ಮುಖವನ್ನು ಮತ್ತೆ ಮತ್ತೆ ಮಲಿನವಾಗಿಸುವದು ಸಂತೋಷಬಾಬುವಿನ ಮನಸ್ಸಿಗೆ ಬರಲಿಲ್ಲ. ಈ ಅಪ್ರೀತಿಕರ ಪ್ರಸಂಗವನ್ನು ಹತ್ತಿಕ್ಕಲು ಸುಧಾ ಪ್ರಯತ್ನಿಸುವದಾಗಿ ಅವನಿಗೆ ತಿಳಿಯಿತು. ಅವನೂ ಆ ಮಾತು ಹತ್ತಿಕ್ಕಿ ಹಾಲಿನ ಬಟ್ಟಲಿಗೆ ತುಟಿ ಹಚ್ಚಿ ಹೇಳಿದನು, ' ನಿಜವಾಗಿಯೂ ಇಂದು ಹೆಚ್ಚು ಸಕ್ಕರೆ ಹಾಕಿರುವಿ ಮಗೂ ! ಕಾಸಿದ್ದೂ ಹೆಚ್ಚು. '

' ಇಲ್ಲ, ಎಂದಿಗೂ ಇಲ್ಲ, ಹೆಚ್ಚಾಗಿಯೂ ಕಾಸಲಿಲ್ಲ. '

' ಹಾಗಾದರೆ ಹಾಲು ಇಷ್ಟು ಗಟ್ಟಿ ಮತ್ತು ಸಿಹಿ ಹೇಗೆ ? '

' ಹೊಸದಾಗಿ ಕೊಂಡ ಆಕಳ ಹಾಲನ್ನೇ ನಿಮಗೆಂದು ಕಾಸಲು ತೆಗೆದುಕೊಂಡೆ. '

ಸಂತೋಷಬಾಬುವು ಒಮ್ಮೆಂದೊಮ್ಮೆ ಕೇಳಿದನು, ' ಅವನು–ಅವನು ಹಾಗಾದರೆ ಉಣ್ಣದೇ ತಿನ್ನದೇ ಹೊರಟುಹೋದನೇ ? '

ಸೊಸೆ ಮಾತನಾಡಲಿಲ್ಲ. ಯಜಮಾನನು ಕೋಪಭಾವವನ್ನು ಹೊರ ಪಡಿಸಿ ಅಂದನು, ' ವಿಧಿ, ಮತ್ತಿನ್ನೇನು ? '

ಯಜಮಾನನು ಊಟ ಮಾಡಿ ಹೊರಮನೆಗೆ ಹೋದನು. ಸುಧಾ ಸಾವಕಾಶವಾಗಿ ತನ್ನೆಲ್ಲ ಕೆಲಸ ಮುಗಿಸಿಕೊಂಡು ತನ್ನ ಕೋಣೆಗೆ ಹೋದಳು. ಆ ಸ್ಥಳ ಅವಳಿಗೆ ಸರಿ`ೋಗಲಿಲ್ಲವೇನೊ---ಮತ್ತೊಂದು ಕೊಠಡಿಗೆ ಹೋಗಿ ರೇಶಿಮೆ, ಸೂಜಿ, ಮಖಮಲ್ಲು ಇತ್ಯಾದಿ ತೆಗೆದುಕೊಂಡು ಕಿಡಿಕಿಯ ಹತ್ತಿರ ಕುಳಿತು ಒಮ್ಮನಸ್ಸಿನಿಂದ ಹೊಲಿಯತೊಡಗಿದಳು.

ಕೆಲ ದಿನಗಳಾದ ಮೇಲೆ---ಅಂದು ನವರಾತ್ರಿಯ ಷಷ್ಠೀ ತಿಥಿ; ಸುಧಾ ಪ್ರಕಾಂಡ ದೇವಮಂದಿರದ ಒಂದು ಬದಿ ಪೂಜಾ ತಬಕವನ್ನು ಸಿದ್ಧಗೊಳಿಸುತ್ತಿದ್ದಾಳೆ. ಸುತ್ತೂ ಅನೇಕ ಆತ್ಮೀಯರು ಕುಟುಂಬದ ಇನ್ನಿತರ ಸ್ತ್ರೀಯರು ಬಗೆಬಗೆಯ ಕೆಲಸಗಳಲ್ಲಿ ನಿರತರಾಗಿದ್ದಾರೆ. ಎಲ್ಲರೂ ಸುಧೆಯ ಸೂಚನೆ ಸಂಕೇತಗಳಂತೆ ನಡೆದುಕೊಳ್ಳುತ್ತಿದ್ದಾರೆ. ಪಲ್ಲವ ಪತಾಕೆಗಳಿಂದ ತಳಿರು ತೋರಣಗಳಿಂದ ಮೆರಗುವೆತ್ತ ಸಿಂಹದ್ವಾರದ ಮಂಟಪಗಳಲ್ಲಿ ನಗಾರಿ, ನಹಬತ್ತು, ಕಹಳೆ, ಸನಾಯಿಗಳ ಶುಭ ವಾದ್ಯಗಳಲ್ಲಿ ಆಗಮನೀ* ಸಂಗೀತವು ಮೊಳಗುತ್ತಿದೆ. ನಾಲ್ಕೂ ಸೆಟ್ಟಿಗೆ ಮಹಾ ಉತ್ಸವದ ಉತ್ಸಾಹವು ತುಂಬಿ ತುಳುಕುತ್ತದೆ. ಪರಿಜನ ಪರಿಚಾರಕರ ಅಪ್ರತಿಸ್ಪರ ಕಲರವ ಕೋಲಾಹಲದಲ್ಲಿ, ಮಾತುಕಥೆಗಳಲ್ಲಿ, ಹಾಸ್ಯಲಹರಿಯಲ್ಲಿ, ವಿವಾದ ವಿಶ್ಲೇಷಣದಲ್ಲಿ, ಆಯೋಜನ ನಿಯೋಜನದಲ್ಲಿ ಪೂಜಾ ಮಂಟಪವು ಮುಖರಿತವಾಗಿದೆ. ಪ್ರಾಂಗಣದಲ್ಲಿ ಮಿಷ್ಟಾನ್ನಲೋಭಿಗಳಾದ ಬಾಲಕ ಬಾಲಿಕೆಯರ ತಂಡವು ತಾಂಡವವಾಡುತ್ತಿದೆ. ಪುರೋಹಿತರು ಬ್ರಾಹ್ಮಣರು ಚಂಡಿಕೆಯ ಗಂಟನ್ನು ಕುಣಿಸುತ್ತ ಓಡಾಡುತ್ತಿದ್ದಾರೆ. ಕೆಲ ಸದ್ಗೃಹಸ್ಥರು ಚೌಧುರಿಯವರ ಮನೆಯ ಆಯೋಜನವನ್ನು ಸಾಲಂಕಾರವಾಗಿ ವರ್ಣನೆ ಮಾಡುತ್ತಿದ್ದಾರೆ. ಈ ಮಧ್ಯೆ ಯಾರೊ, 'ಹೌದು ಎಲ್ಲಾ ಸರಿ, ಸುರೇಶನು ಕಾಣುವದಿಲ್ಲ? ಅವನು ಬಂದಿಲ್ಲವೆ?' ಎಂದು ಕೇಳಿದನು. ದಿವಾನನು ಜಡಿತ ಸ್ವರದಲ್ಲಿ 'ಅಭ್ಯಾಸಕ್ಕೆ ಅಡ್ಡಿಯಾಗುವ ಹಾಗಿದೆ. ಯಜಮಾನರಿಗೆ ಪತ್ರ ಬರೆದಿದ್ದಾರೆ'---ಎಂದು ಹೇಳಿದನು.

ಈ ಹೊತ್ತಿಗೆ ಓರ್ವ ತೊತ್ತು ಬಂದು ಸುಧೆಗೆ 'ತಾಯಿ, ಯಜಮಾನರು ತಮ್ಮನ್ನು ಕರೆದಿದ್ದಾರೆ' ಎಂದು ಹೇಳಿದಳು.

ಸುಧಾ ಎದ್ದು ದಾಸಿಗೆ ಕೇಳಿದಳು, 'ಯಾಕೆ ಹೇಳಬಲ್ಲೆಯಾ?'

* ನವರಾತ್ರಿಯಲ್ಲಿ ಉಮಾ ತನ್ನ ತವರಿಗೆ ಬರುವಳಂತೆ. ಆಗಿನ ಅವಳ ಸ್ವಾಗತ ಗೀತಕ್ಕೆ 'ಆಗಮನೀ' ಎಂದು ಹೇಳುವರು.

‘ ಇಲ್ಲ. ’

ಸುಧಾ ಬಂಕವನ್ನು ದಾಟಿ ಸೋಪಾನದ ಸನಿಯಕ್ಕೆ ಬರುತ್ತಲೇ ನೋಡಿದಳು—ಇದಿರು ಮಾವನವರು. ಅವರ ಮುಖವು ಕಪ್ಪಿಟ್ಟದೆ; ಕೈಯಲ್ಲಿ ಒಂದು ಪತ್ರ. ಸುಧಾ ಚಕಿತಳಾಗಿ ‘ ತಂದೆ ’ ಎಂದಳು.

‘ ಈ ಪತ್ರ ಓದಿ ನೋಡು, ತಾನೇ ತಿಳಿಯುವದು. ’

‘ ಪತ್ರ ಓದುವದಿನ್ನೇನು ! ನೀವೇ ಹೇಳಿರಿ. ’

‘ ಇಲ್ಲ–ಇಲ್ಲ. ಓದಿ ನೋಡು ಆ ಕುಲಾಂಗಾರನು ಏನು ಬರೆದಿದ್ದಾನೆ. ’ ಮಾವನ ಕ್ರೋಧಕಂಪಿತ ಹಸ್ತದಿಂದ ಪತ್ರ ತೆಗೆದುಕೊಂಡು ಸುಧಾ ಓದಿದಳು,—

‘ ಶ್ರೀ ಚರಣೇಷು. ವಿವಾಹವಲ್ಲದೇ ಇನ್ನಾವ ಉಪಾಯವೂ ಇಲ್ಲ. ನಿಮ್ಮ ಆದೇಶವನ್ನು ಮನ್ನಿಸುವದಾಗಲಿಲ್ಲ. ನಾನು ಅಷ್ಟು ಅಧಮನು. ಇತಿ–

ಹತಭಾಗ್ಯ, ಸುರೇಶ ’

ಪತ್ರವನ್ನು ಓದಿ ಮುಗಿಸಿ ಸುಧಾ ಮಾವನವರಿಗೆ ಅದನ್ನು ತಿರುಗಿ ಕೊಟ್ಟು ತಲೆ ತಗ್ಗಿಸಿ ನಿಂತುಕೊಂಡಳು.

‘ ಆದರೆ ಆ ಹತಭಾಗ್ಯನು ತಿಳಿದಿರಲಿ–ನಾನೆಂದೂ ಅವನನ್ನು ಕ್ಷಮಿಸಲಾರೆ. ಈ ಆಗಮನೀ ಉತ್ಸವದಲ್ಲಿ ವಿಸರ್ಜನೆ ! ’ ಪತ್ರವನ್ನು ನೂರು ಚೂರು ಮಾಡಿ ಸಂತೋಷಬಾಬುವು ಸವೇಗವಾಗಿ ಅಲ್ಲಿಂದ ಹೊರಟು ಹೋದನು.

ಸುಧಾ ಧೀರಗತಿಯಿಂದ ತಿರುಗಿ ಹೋಗಿ ಮತ್ತೆ ತನ್ನ ಹಿಡಿದ ಕೆಲಸದಲ್ಲಿ ತೊಡಗಿಕೊಂಡಳು.

## ೬

ಸುರೇಶನು ಉದ್ಭ್ರಾಂತ ಚಿತ್ತನಾಗಿ ಕಲಕತ್ತೆಗೆ ಬಂದು ತಲ್ಪಿದನು. ಅನಿದ್ರಾ, ಅನಾಹಾರ, ಚಿಂತೆ ಎಲ್ಲವೂ ಕೂಡಿ ಅವನ ತಲೆಯಲ್ಲಿ ಕಲಕಲ ವೆಬ್ಬಿಸಿದ್ದವು.

ಅಲ್ಲಿಯೂ ಪೂಜಾ ಆಯೋಜನವು ವಿಪುಲ ವೈಭವದಿಂದ ನಡೆದಿದೆ. ನೋಡಿ ಸುರೇಶನಿಗೆ ತನ್ನ ಮನೆಯ ಉತ್ಸವದ ನೆನಪಾಯಿತು. ಅವರ ಆ ಪ್ರಕಾಂಡ ಪೂಜಾ ಮಂಟಪದಲ್ಲಿ ಈ ದಿನಗಳಲ್ಲಿ ಅದೆಷ್ಟು ಆನಂದ ಕಲ್ಲೋ-ಲವು ! ಪ್ರವಾಸದಿಂದ ಪ್ರತ್ಯಾಗತ ಪುತ್ರನನ್ನು ಪಿತನು ಅತ್ಯಂತ ಸ್ನೇಹದಿಂದ ಬರಮಾಡಿಕೊಳ್ಳುತ್ತಿದ್ದನು. ಆಗ ಎಲ್ಲರೂ ಅವನನ್ನು ಪ್ರಶಂಸಾಪೂರ್ಣ ದೃಷ್ಟಿಯಿಂದಲೇ ನೋಡುವವರು. ಇಂದು ? ಮನೆಯಲ್ಲಿ ಕಲ್ಯಾಣಮಯ ಕಾರ್ಯಕಲಾಪಗಳು ಎಂದಿನಂತೆ ನಡೆದಿರಬಹುದು. ಆದರೆ ಅವುಗಳ ಮಧ್ಯದಲ್ಲಿ ಇಂದು ಸುರೇಶನಿಲ್ಲ !

ಪಿತನು ಅಸಂತುಷ್ಟನಾಗಬಹುದಾದ ಒಂದು ಕೆಲಸವನ್ನೂ ಸುರೇಶನು ಮಾಡಿದವನಲ್ಲ. ಇಂದು ಅದನ್ನು ನೆನೆದು ಅವನಿಗೆ ಖೇದವಾಯಿತು. ತನ್ನ ವರ್ತನದ ಬಗ್ಗೆ ತಂದೆ ಹೊರಹೊರಗೆ ಸಿಟ್ಟು ತೋರಿಸಿದ್ದರೂ ಒಳಒಳಗೆ ಅವರ ಹೃದಯ ಅದೆಷ್ಟು ವ್ಯಥಿತವೋ ಅವನಿಗೇ ಗೊತ್ತು. ಆದರೂ ಸುರೇಶನು ಹರೆಯದ ಹುಮ್ಮಸ್ಸಿನಲ್ಲಿ ಅದೆಲ್ಲವನ್ನೂ ಕಡೆಗಣ್ಣಿ ವಿದ್ರೋಹ ಪತಾಕೆಯನ್ನು ಎತ್ತಿ ಹಿಡಿದಿದ್ದಾನೆ !

ಸುರೇಶನು ತನ್ನ ನಿವಾಸಕ್ಕೆ ಹೋಗಿ, ಸೋಪಾನವೇರಿ ಮೇಲಕ್ಕೆ ಹೋಗುತ್ತಲೇ ವಯಸ್ಕ ಪರಿಚಾರಿಕೆ ನೋಡಿ, ' ಆಃ ! ಬದುಕಿದೆವು. ಎಷ್ಟು ಕಷ್ಟಕ್ಕಿಟ್ಟಿತ್ತು ! ದೇವರೇ ಬಲ್ಲ. '

' ಯಾಕೆ ? ಸ್ನೇಹಾ ಎಲ್ಲಿ ? ಅವಳು ನೆಟ್ಟಗಿರುವಳಷ್ಟೆ ? '

' ಅದನ್ನೇ ಹೇಳಿದ್ದು. ನೆಟ್ಟಗೇ ಇದ್ದರೆ ಕಷ್ಟವೇನು ಬಂತು ? '

' ಯಾಕೆ, ಏನಾಗಿದೆ ? '

' ಜ್ವರ ಬಂದಿದೆ ಮತ್ತೇನು ! ಇಂಥ ಹೆಂಣನ್ನು ನನ್ನ ತಂದೆತಾತರೂ ಕಾಣಲಿಲ್ಲ. ಇದೆಂಥ ಹುಡುಗಾಟಿಕೆಯದು ? ತಲೆಯ ಬದಿಯ ಕಿಡಿಕಿ ತೆರೆದಿದ್ದರೂ ಅರಿವಿಲ್ಲ; ರಾತ್ರಿ ಮುಚ್ಚಿಕೊಳ್ಳಲು ಹೆದರಿಕೆಯಾಯಿತು ಎಂದು ಅಂದುಕೊಂಡರೂ ಹಗಲಾದರೂ ಮುಚ್ಚುವುದು, ಇಲ್ಲ ನನಗಾದರೂ ಹೇಳುವುದು—ಅದೊಂದೂ ಇಲ್ಲ. ಎರಡು ರಾತ್ರಿ ಚಳಿ ತಾಕಿಸಿಕೊಂಡು ಜ್ವರ ಬಂದಿದೆ; ಚಿಂತಿಸಿ ಚಿಂತಿಸಿ ಸಾಯುತ್ತೇನೆ. ಹರಿಗೆ ಹೇಳಿ ಜೋಗೇನ ಡಾಕ್ಟರರನ್ನು ಕರೆಸಿದೆನು; ಔಷಧ ಕೊಡಿಸಿದೆನು; ಇನ್ನೇನು ಮಾಡಲಿ ? '

' ಸಾಕು ಸಾಕು. ಜ್ವರ ಈಗ ಇಳಿದಿದೆಯಷ್ಟೆ? ಎಂದು ಜ್ವರ ಬಂತು ? '

' ನಿನ್ನೆ. ಡಾಕ್ಟರರು ಇಳಿದಿಲ್ಲಾ ಎಂದರು. '

ಸುರೇಶನು ತುದಿಗಾಲ ಮೇಲೆ ಮೆಲ್ಲಗೆ ಸ್ನೇಹಳು ಮಲಗಿದಲ್ಲಿಗೆ ಹೋದನು. ಅವಳು ಕಂಣು ಮುಚ್ಚಿಕೊಂಡು ಮಲಗಿದ್ದಾಳೆ. ಮುಖವು ಆರಕ್ತವಾಗಿದೆ. ನಿದ್ದೆ ಹತ್ತಿರಬೇಕು. ಸುರೇಶನು ನಿಂತು ನಿಂತು ನೋಡಿದನು. ಅವನಿಗೆ ಎರಡು ವರ್ಷಗಳ ಹಿಂದಿನ ಸಂಗತಿ ನೆನಪಿಗೆ ಬಂತು. ಹೀಗೆಯೇ ಆರಕ್ತಮುಖಿಯಾಗಿ ಜ್ವರದ ತಾಪಕ್ಕೆ ಎಚ್ಚರವಿಲ್ಲದೆ ಅದೇ ಆ ಜೀರ್ಣ ಗೃಹದಲ್ಲಿ ಮಾಸಿದ ಹಾಸಿಗೆಯ ಮೇಲೆ ಮಲಗಿದ್ದಳು. ಈಗ ನೋಡಲು ವಯಸ್ಸಿನಿಂದ ತುಸು ದೊಡ್ಡವಳಾಗಿದ್ದರೂ ಅದೇ ಸ್ನೇಹಳೇ ಇಂದೂ ಸಹ ಬಳುಕುವ ಬಳ್ಳಿಯಂತೆ ಇರುವ ಸ್ನೇಹಲತೆ! ಆದರೆ ಇಂದು ಈ ಮನೆ ಜೀರ್ಣವಲ್ಲ; ಈ ಹಾಸಿಗೆ ಮಾಸಿದ್ದಲ್ಲ. ಅಂದಿನ ದೀನ ಬಾಲಿಕೆಯು ಇಂದು ಇನ್ನೂ ಸಹಾಯಹೀನಳಲ್ಲವೆ? ಅವಳು ಇಂದು ಒಬ್ಬನ ಕೃಪಾಪೋಷಿತಳು. ಅವನು ಇಚ್ಛಿಸಿದರೆ ಅವಳನ್ನು ಪಾದದಿಂದ ಬದಿಗೆ ಸರಿಸಬಹುದು. ಸುರೇಶನ ಕಣ್ಣಲ್ಲಿ ನೀರು ಕದಡಿತು. ಆ ಕ್ಷುದ್ರ ವನಪುಷ್ಪವು ವನದಲ್ಲಿ ಅರಳಿ ನಕ್ಕು ಕೆಲೆದು ಇರಬಹುದಾಗಿತ್ತು. ಅದನ್ನು ಹರಿದು ತಂದು ಇಂದು ಲೋಕದ ಇದಿರು ಉಪಹಾಸಕ್ಕೆ ಗುರಿ ಮಾಡಿದವನು ಸ್ವಯಂ ತಾನು. ಅವನು ಅವರಲ್ಲಿಗೆ ಹೋಗದಿದ್ದರೆ, ಹೋದ ಮೇಲೂ ಹೆಚ್ಚಿನ ಹೃದ್ಯತೆಯಿಂದಿದ್ದು ಅವರೆದೆಯಲ್ಲಿ ಇಲ್ಲದ ಆಶೆ ಆಕಾಂಕ್ಷೆಗಳಿಗೆ ಅನುವುಗೊಡದಿದ್ದರೆ ಹೀಗೆಲ್ಲ ಆಗುತ್ತಿರಲಿಲ್ಲ. ತಕ್ಕ ವರನೊಡನೆ ಅವಳ ಮದುವೆಯಾಗಿಹೋಗುತ್ತಿತ್ತು. ಹೀಗೆ ಯೋಚಿಸುತ್ತ ಸುರೇಶನು, ಜ್ವರವಿರುವದನ್ನು ನೋಡಲೆಂದು ಸ್ನೇಹಳ ಹಣೆಯ ಮೇಲೆ ಕೈಯಿಟ್ಟನು. ಕೂಡಲೇ ಸ್ನೇಹಳು ಚಮಕಿತಳಾಗಿ ಕಂಣು ತೆರೆದಳು. ಅವನನ್ನು ನೋಡಿ ಕಷ್ಟದಿಂದ ಮುಗ್ಗಲಾಗಿ, 'ನೀವು! ಯಾವಾಗ ಬಂದಿರಿ?' ಎಂದು ಕೇಳಿದಳು.

ಸುರೇಶನು ಗಂಭೀರ ಮುಖದಿಂದ 'ಈಗಲೇ' ಎಂದು ಹೇಳಿದನು.

'ಈಗಲೇ! ಹಾಗಾದರೆ ಗಾಡಿಯ ಶಬ್ದ ಕೇಳಿಸಲಿಲ್ಲವಲ್ಲಾ? ನನಗೆ ನಿದ್ದೆ ಹತ್ತಿರಬೇಕು.'

'ನಿನಗೆ ಜ್ವರವೆಂದು ಕೇಳಿದೆ. ಎಲ್ಲಿ, ಜ್ವರ ಇನ್ನೂ ಇಳಿದಿಲ್ಲ?'

'ನೀವು ಪೂಜಾದ ನಂತರ ಬರುವೆನೆಂದು ಹೇಳಿದ್ದಿರಿ. ಈಗಲೇ ಬಂದಿರಾ? ಮತ್ತೆ ಹೋಗುವದಿಲ್ಲವಷ್ಟೆ?'

'ಹೋಗುವೆ!'

'ಮತ್ತೆ? ಹಾಗಾದರೆ ಎಂದು ಬರುವಿರಿ?'

' ನನ್ನೊಡನೆ ನಮ್ಮ ಮನೆಗೆ ಬರುವಿಯಾ ಸ್ನೇಹಾ ? '

' ನಿಮ್ಮ ಮನೆಗೆ ? ನನ್ನನ್ನು ಕರೆದೊಯ್ಯುವಿರಾ ? '

' ನಿನ್ನನ್ನು ಕರೆದೊಯ್ಯಲೆಂದೇ ತಂದೆ ನನ್ನನ್ನಟ್ಟಿದ್ದಾರೆ. '

ಹರ್ಷನಿರ್ಭರಳಾಗಿ ಸ್ನೇಹಳು ಹಾಸಿಗೆಯ ಮೇಲೆ ಎದ್ದು ಕುಳಿತಳು.

' ಏಳಬೇಡ, ಏಳಬೇಡ. ಇನ್ನೂ ಜ್ವರ ಬಹಳುಂಟು. '

' ಡಾಕ್ಟರ್ ಹೇಳಿದ್ದಾರೆ--ಬೇಗ ನೆಟ್ಟಗಾಗುವದೆಂದು. ಯಾವಾಗ ಹೋಗುವದು ನಾವಲ್ಲಿಗೆ ? '

' ನಾಳೆ ಹೋದರೂ ಆಗುವದು. ನಿನಗಲ್ಲಿಗೆ ಹೋಗಲು ಬಹಳ ಆಲ್ಹಾದವಾಗುವದೇ ಸ್ನೇಹಾ ? '

' ಹುಂ '

' ಯಾಕೆ ? '

' ನಿಮ್ಮ ಮನೆಯಲ್ಲವೇ ಅದು ? '

' ನಮ್ಮ ಮನೆಯಾದರೇನಾಯಿತು ? ಅದು ಅಷ್ಟು ನಿರಾಪದವೇ ನಿನಗೆ ? ನಮ್ಮ ಮನೆಯೆಂದೇ ಇನ್ನೂ ನಿನಗೆ ಭಯದ ಸ್ಥಾನ. '

' ಭಯದ ಸ್ಥಾನವೆ ? ಯಾಕೆ ? '

' ಯಾಕೆ ? ನೀನು ನಾನು ಅಲ್ಲಿ ಎಂಥ ಅಪರಾಧಿಗಳು ನಿನಗೆ ತಿಳಿಯದೆ ? '

ವಿವರ್ಣಕಂಪಿತ ಮುಖದಿಂದ ಸ್ನೇಹಳು ತಲೆಗಿಂಬಿನ ಮೇಲೆ ತಲೆಯ ನ್ನಿರಿಸಿದಳು. ತುಸು ತಡೆದು ಕ್ಷೀಣ ಸ್ವರದಲ್ಲಿ, ' ನನಗಂತೂ ತಿಳಿಯು ಲೊಲ್ಲದು. ಅವರು ನನಗೆ ಬಹಳ ಬಯ್ಯುವರೆ ? '

' ಬಯ್ಯಲಿಕ್ಕಿಲ್ಲ. ಪ್ರೇಮಾದರದಿಂದಲೇ ಸ್ಥಳ ಕೊಡಬಹುದು. '

. ' ಹಾಗಾದರೆ ಹೆದರಿಕೆಯೇತರದು ? ನಾನೂ ಬರುವೆ. '

' ಬಾ. ನನ್ನ ಅಪರಾಧವನ್ನೆಲ್ಲ ನೀನು ನಿನ್ನ ತಲೆಯ ಮೇಲೆ ಹೊತ್ತು ಕೊಂಡು ಅಲ್ಲಿ ಅಪರಾಧಿನಿಯಂತೆ ನಿಲ್ಲಬಲ್ಲೆಯಷ್ಟೇ ಸ್ನೇಹಾ ? '

' ನನಗೆ ಏನೂ ತಿಳಿಯಲೊಲ್ಲದು. ನಿಮ್ಮ ಮಾತು ಕೇಳಿ ಭಯ ವಾಗುತ್ತಿದೆ. ನೀವು ಅಲ್ಲಿ ಇರುವಿರಲ್ಲವೆ ? '

' ನಾನು ' ! ಮನಸ್ಸಿನ ಕಲಕಲವನ್ನು ಸೂಚಿಸುವ ನಗೆ ನಕ್ಕು

ಸುರೇಶನು ಮತ್ತೆ ಹೇಳತೊಡಗಿದನು, ' ಅದು ಹೇಗೆ ನಿನಗೆ ತಿಳಿಯಲೊಲ್ಲದು ಸ್ನೇಹಾ ? ನೀನು ನನಗೆ ಯಾರೆಂದು ನಿನ್ನ ಹತ್ತಿರ ನಾನಿರಬೇಕು ? ನಿನ್ನನ್ನು ಅನ್ಯರ ಬಳಿ ಅಟ್ಟಲೆಂದೇ ಅಲ್ಲಿಗೆ ಕರೆದೊಯ್ಯುತ್ತಿರುವದು ' ಎಂದೆನ್ನುತ್ತ ಸವೇಗವಾಗಿ ಅವಳ ಮುಖವನ್ನೆತ್ತಿ ಹಿಡಿದು ಕಂಪಿತ ಕಂಠದಲ್ಲಿ ' ಬರುವಿಯಲ್ಲವೇ ಸ್ನೇಹಾ ? ' ಎಂದನು.

ಆ ವೇಗದ ಉಕ್ಕು ತುಸು ಇಳಿಯುತ್ತಲೇ ಸುರೇಶನು ನೋಡುತ್ತಾನೆ- ಸ್ನೇಹಳು ಸ್ಪಂದನಹೀನಳಾಗಿ ಬಿದ್ದಿದ್ದಾಳೆ. ಕಂಣು ತೆರೆದಿದ್ದಾಳೆ. ಆದರೆ ರೆಪ್ಪೆ ಬಡಿಯುತ್ತಿಲ್ಲ. ಹೃದಯದ ಸ್ಪಂದನವೂ ನಿಸ್ತಬ್ಧ. ಮೂಗಿಗೆ ಕೈಯಿರಿಸಿ ನೋಡಲು ಬಹು ವಿಲಂಬೀ ಶ್ವಾಸವು ಮೆಲ್ಲಮೆಲ್ಲಗೆ ಆಡುತ್ತಿದೆ.

' ಸ್ನೇಹಾ---ಸ್ನೇಹಾ---ಹೀಗೇಕೆ ಸ್ನೇಹಾ ? ಹೆದರಿಕೊಂಡೆಯಾ ಸ್ನೇಹಾ ? '

ಸ್ನೇಹಳು ಅವನ ಕಡೆಗೆ ನೋಡಿದಳು.

' ಬಹಳ ಭಯವಾಯಿತೆ ಸ್ನೇಹಾ ? '

ಉದ್ದವಾಗಿ ಉಸಿರೆಳೆದು ನೀಳವಾಗಿ ಬಿಟ್ಟು ಸ್ನೇಹಳು ಕ್ಷೀಣ ಸ್ವರದಲ್ಲಿ ' ಹುಂ ' ಎಂದಳು.

' ಹೆದರಬೇಡ ಸ್ನೇಹಾ ! ಜ್ವರವಿನ್ನೂ ಇಳಿದಿಲ್ಲ. ಸ್ವಲ್ಪ ಮಲಗು ನೋಡುವಾ. '

ಸ್ನೇಹಳು ಮಗ್ಗಲಾಗಿ ಮಲಗಿದಳು. ಇಷ್ಟರಲ್ಲಿ ಪರಿಚಾರಿಕೆ ಬಂದು, ' ತಮ್ಮದು ಊಟವಾಗಿದೆಯಷ್ಟೆ ? ' ಎಂದು ಕೇಳಿದಳು.

' ಊಟವೆ ? ಹೌದು ಆಗಿಲ್ಲ. '

ಪರಿಚಾರಿಕೆ ಝೇಂಕಾರದ ಧ್ವನಿಯಲ್ಲಿ, ' ಅವ್ವಾ---ಅವ್ವ ನೋಡ ! ಬಂದು ಇಷ್ಟು ಹೊತ್ತಾಯಿತು, ಇನ್ನೂ ಊಟದ ಹೆಸರಿಲ್ಲ ? ನೀನಾದರೂ ಎಂಥ ಹೆಂಣವ್ವಾ ! ಗಂಡಸರು ಇದನ್ನೆಲ್ಲ ತಾವೇ ಹೇಳುವರೇ ? ತುಸು ನೋಡಬೇಕು ಮಾಡಬೇಕು. ಬಾ ಮಗು ! ಉಂಣುವಿಯಂತೆ ಬಾ. ಆಹಾ, ಮುಖ ಒಣಗಿ ಹೋಗಿದೆ ! '

ಊಟಕ್ಕೆಂದು ಸುರೇಶನು ಹೊರಬೀಳುತ್ತಲೇ ಸ್ನೇಹಳು ಭಯಾರ್ತ ಸ್ವರದಲ್ಲಿ ಕೂಗಿದಳು, ' ನನಗೆ ಒಬ್ಬಳೇ ಇರಲು ಹೆದರಿಕೆಯಾಗುವದು. ಕೆಲಸದವಳನ್ನು ತುಸು ಕಳಿಸಿಕೊಡಿರಿ. '

ಸುರೇಶನು ಅವಳ ಬಳಿ ತಿರುಗಿ ಬಂದು ತಲೆ ತೀಡುತ್ತ ಹೇಳಿದನು, ' ಒಬ್ಬಳೇ ಎಲ್ಲಿ ಸ್ನೇಹಾ ?–ಇದೋ ನಾನಿರುವೆ; ಭಯವೇತರದು ? ನೀನು ಮಲಗು. '

' ಬೇಡ, ಬೇಡ. ನೀವು ಊಟಕ್ಕೆ ಹೋಗಿರಿ '–ಎಂದೆನ್ನುತ್ತ ಸ್ನೇಹಳು ತಲೆಗಿಂಬಿನಲ್ಲಿ ಮುಖವಡಗಿಸಿಕೊಂಡಳು. ಸುರೇಶನು ನೀರವವಾಗಿ ಕುಳಿತು ಕೊಂಡನು.

ಇರುಳಲ್ಲಿ ಸ್ನೇಹಳಿಗೆ ಜ್ವರ ೧೦೫ ಡಿಗ್ರಿಗೆ ಏರಿತು. ಯಾತನೆಯಿಂದ ಬಾಲಿಕೆಯು ಚೀತ್ಕಾರ ಮಾಡತೊಡಗಿದಳು. ಇರುಳೆಲ್ಲ ಸುರೇಶನು ಕಂಣಿಗೆ ಕಂಣು ಹಚ್ಚದೆ ಅವಳ ತಲೆಯ ಬದಿ ಕುಳಿತು ಹಣೆಗೆ ಡಿಕೋಲನ್ನಿನ ಪಟ್ಟಿ ಯನ್ನೂ ಮಂಜನ್ನೂ ಇಟ್ಟನು. ಪರಿಚಾರಿಕೆಯೂ ಇರುಳೆಲ್ಲ ಎದ್ದು ನಿಂತು ಗಾಳಿ ಹಾಕಿದಳು. ಬಾಲಿಕೆಯು ನಡುನಡುವೆ ಆರ್ತಕಂಠದಿಂದ ಅಳುತ್ತ ಹೇಳುತ್ತಿದ್ದಳು, ' ನಾನು ಹೋಗುವದಿಲ್ಲ–ನಾನು ಹೋಗುವದಿಲ್ಲ; ಹಾಗಾದರೆ ನಾನು ಬದುಕುವದಿಲ್ಲ. '

ಮುಂಜಾನೆ ಡಾಕ್ಟರರು ಬಂದು ನೋಡಿ ಹೇಳಿದರು, ' ಇಂದು ಬಹು-ತರವಾಗಿ ರೆಮಿಟೆಂಟ್ ಫೀವರಿನ ಹಾಗೆ ಇದೆ. ನಿನ್ನೆ ಚನ್ನಾಗಿ ತಿಳಿದಿರಲಿಲ್ಲ. ಆದರೆ ಹಾಗೆಂದು ಶಂಕಿಸಿದ್ದೆ. ಇಂದು ಇನ್ನೇನು ಅದರಲ್ಲಿ ಸಂದೇಹವಿಲ್ಲ. '

ಜ್ವರ ಇಳಿಯಲಿಲ್ಲ. ಬರಬರುತ್ತ ನಾನಾ ಕುಲಕ್ಷಣಗಳೇ ತೋರತೊಡಗಿ ದವು. ಸುರೇಶನು ಇಳಿಹೊತ್ತಿಗೆ ತಂದೆಗೆ ಪೂರ್ವೋಕ್ತ ಪತ್ರವನ್ನು ಬರೆದನು. ಆ ಮೇಲೆ ಅಚೇತನ ಸ್ನೇಹಳ ಮುಖ ಎತ್ತಿ ಹಿಡಿದು ಹೇಳಿದನು–' ಸ್ನೇಹಾ, ಸ್ನೇಹಾ, ನಾನು ನಿನ್ನನ್ನು ಮನೆಗೆ ಕರೆದೊಯ್ಯುವದಿಲ್ಲ–ಇನ್ನೆಲ್ಲಿಯೂ ಹೋಗ ಬೇಕಾಗಿಲ್ಲ. ನೀನು ನನ್ನವಳು––ನನ್ನ ಹತ್ತಿರವೇ ಇರುವಿ. '

ಸ್ನೇಹಳು ಅದೊಂದನ್ನೂ ಕೇಳಲಿಲ್ಲ. ಅವಳು ಜ್ವರದ ತಾಪದಿಂದ ಅಜ್ಞಾನಳು. ಸುರೇಶನು ತಂದೆಗೆ ಪತ್ರ ಬರೆದು ನಿಶ್ಚಿಂತನಾಗಿ ಅವಳ ಹಾಸಿಗೆಯ ಒಂದು ಬದಿಗೆ ಬಿದ್ದುಕೊಂಡು ಬಹು ದಿನಗಳ ನಂತರ ತುಸು ನಿದ್ರೆ ಮಾಡಿದನು. ಇಂದು ಅವನ ಮನದಲ್ಲಿ ದ್ವಿಧಾ-ದ್ವಂದ್ವ ಒಂದೂ ಇಲ್ಲ.

ಹದಿನಾಲ್ಕು ದಿನಗಳ ನಂತರ ಸ್ನೇಹಳ ಜ್ವರ ಇಳಿಯಿತು. ಏಕನಿಷ್ಠ ಔಷಧ–ಪಥ್ಯ–ಶುಶ್ರೂಷೆಯ ಗುಣದಿಂದ ಮರುದಿನವೇ ಸುರೇಶನೊಂದಿಗೆ ಕ್ಷೀಣ ಸ್ವರದಲ್ಲಿ ಕೆಲವು ಮಾತನಾಡಿದಳು. ಬರಬರುತ್ತ ಹಾಸಿಗೆಯಲ್ಲಿ ಎದ್ದು

ಕುಳಿತು, ಬಾಡಿದ ತುಟಿಗಳಲ್ಲಿ ಎಳೆನಗೆಯ ಸೆಳಕನ್ನು ತೋರಿ ಸುರೇಶನನ್ನು ಆಶಾನ್ವಿತನನ್ನಾಗಿ ಮಾಡಿದಳು.

ಆ ಮೇಲೆ ಪರಿಚಾರಿಕೆ ಹಾಗೂ ಹರಿಚಾಕರ ಇವರಿಬ್ಬರೂ ಪಾಳಿಯ ಪ್ರಕಾರ ರಾತ್ರಿ ಎದ್ದು ಕುಳಿತಿರುವದಾಗಿ ಗೊತ್ತು ಮಾಡಿಕೊಂಡರು. ಸ್ನೇಹಳ ಶುಶ್ರೂಷೆಯನ್ನು ನಿಜವಾಗಿ ಅವರೇ ಮಾಡಿದವರು. ಸುರೇಶನು ಕೇವಲ ತನ್ನ ಚಿಂತೆಯ ಭಾರವನ್ನು ತಲೆಯ ಮೇಲೆ ಹೊತ್ತುಕೊಂಡು, ಅನಿದ್ರಾ ಅನಾಹಾರದಿಂದ ಅವಳ ಮುಖವನ್ನೇ ನೋಡುತ್ತ ಕುಳಿತಿರುತ್ತಿದ್ದನು ಮಾತ್ರ. ತನ್ನನ್ನೆ ತಾನು ನೋಡಿಕೊಳ್ಳಲಾರದವನು ಅನ್ಯರ ಲಾಲನೆಪಾಲನೆಯನ್ನೇನು ಮಾಡಿಯಾನು ?

ಕ್ರಮವಾಗಿ ಸ್ನೇಹಳು ಅನ್ನಪಥ್ಯ ಮಾಡಿ ಎದ್ದು ಕುಳಿತಳು. ಒಂದು ದಿನ ಇಳಿಹೊತ್ತಿನ ಕಡೆಗೆ ಸುರೇಶನು ಅವಳ ಕೋಣೆಗೆ ಹೋಗಿ ನೋಡಿದನು– ಸ್ನೇಹಳು ತನ್ನ ಹಾಸಿಗೆಯಲ್ಲಿ ಮಲಗಿಕೊಂಡು ತೆರೆದ ಕಿಡಿಕಿಯೊಳಗಿಂದ ಉಜ್ವಲ ನೀಲ ಆಕಾಶವನ್ನು ನೋಡುತ್ತಿದ್ದಾಳೆ. ಮುಖವು ಬಂಣಗೆಟ್ಟು ಬಾಡಿ ಬತ್ತಿದಂತಿದೆ. ಸಂಜೆಯ ಹೊಂಬಣ್ಣದ ಕಿರಣಗಳು ಅವಳ ರುಕ್ಷ ಕೇಶ ದಲ್ಲಿ, ಮ್ಲಾನ ಲಲಾಟದಲ್ಲಿ ಬಿದ್ದು, ವಿವಾಹ ಹೋಮದ ಮುಂದೆ ಕುಳಿತ ನವ ವಧುವಿನ ಲಜ್ಜಾವನತಭಾಲದಲ್ಲಿ ಕುಂಕುಮದ ತಿಲಕದಂತೆ ದೀಪ್ತಿಪೆತ್ತಿದ್ದವು.

ಸುರೇಶನು ಮುಗ್ಧನೇತ್ರಗಳಿಂದ ನೋಡಿ ನೋಡಿ, ‘ ಈಗ ಹೇಗಿರುವೆ ಸ್ನೇಹಾ ? ಅಸ್ವಸ್ಥತೆ ಏನೂ ಇಲ್ಲವಷ್ಟೆ ? ’ ಎಂದು ಕೇಳಿದನು.

‘ ಇಲ್ಲ, ನೆಟ್ಟಗಿದ್ದೇನೆ ’ ಎಂದು ಹೇಳಿ ಸ್ನೇಹಳು ಅವನ ಕಡೆಗೆ ನೋಡಿ ದಳು. ಸುರೇಶನು ಹತ್ತಿರ ಕುಳಿತು ಹೇಳಿದನು, ‘ ಇನ್ನೂ ಚನ್ನಾಗಿ ರೋಗ– ಶೇಷವು ಹೋಗಬೇಕಾದರೆ ತಿಂಗಳೊಪ್ಪತ್ತು ಬೇಕಾಗಬಹುದೆಂದು ಡಾಕ್ಟರ್ ಹೇಳಿದನು. ’

ಸ್ನೇಹಳು ಒಂದು ಕ್ಷಣ ಸುಮ್ಮನಿದ್ದು ಹೇಳಿದಳು, ‘ ಈಗ ನನಗೆ ನೆಟ್ಟ ಗಾಗಿದೆಯಲ್ಲ; ಆದರೆ ಎದ್ದುನಿಂತರೆ ತಲೆ ತಿರುಗುವದು—– ’

ಸುರೇಶನು ಸಸ್ನೇಹ ನೇತ್ರದಿಂದ ನೋಡಿ ಹೇಳಿದನು– ‘ ಇಷ್ಟು ಅಶಕ್ತ ಳಾಗಿರುವಿ ! ನೆಟ್ಟಗಾಗಿ ಏಳುವಿಯೆಂದು ನನಗೆ ಆಶೆಯಿತ್ತೆಲ್ಲಿ ? ’

ಸ್ನೇಹಳು ಸ್ವಲ್ಪ ಹೊತ್ತಿನ ಮೇಲೆ, ಜೆದರಿದ ಎರಳೆಗಂಣುಗಳೆರಡನ್ನು ಸುರೇಶನ ಮುಖದಲ್ಲಿ ನಾಟಿಸಿ ಕ್ಷೀಣಕಂಠದಲ್ಲಿ ಹೇಳಿದಳು, ‘ ಆಗ ನನಗೆನಿಸು

ತ್ತಿತ್ತು– ನೀವು ನನ್ನೊಬ್ಬಳನ್ನೇ ಇಲ್ಲಿ ಬಿಟ್ಟು ಊರಿಗೆ ಹೋಗಿರುವಿರೆಂದು. ಆಗ ನೀವು ಇಲ್ಲಿಯೇ ಇದ್ದಿರಾ ? ಹೋಗಿರಲಿಲ್ಲವೆ ? '

' ಅದೇನು ಸ್ನೇಹಾ ? ಜಡ್ಡಿನವಳಾದ ನಿನ್ನನ್ನು ಬಿಟ್ಟುಕೊಟ್ಟು ನಾನು ಹೋಗಬಹುದೆ ? ಹಾಗೆ ನಿನ್ನ ವಿಶ್ವಾಸವೆ ? '

' ಆಗ ನನಗೆ ಹಾಗೇ ಅನಿಸಿತ್ತು. '

ಸುರೇಶನು ಸ್ವಲ್ಪ ಸರಿದು ಬಂದು ಅವಳ ಶೀರ್ಣ ಹಸ್ತವನ್ನು ಎತ್ತಿಕೊಂಡು, ತರಲ ಕಂಠದಲ್ಲಿ ಕೇಳಿದನು, ' ಈಗಲೂ ನಿನಗೆ ಆ ಭಯವಿದೆಯೆ ಲತಾ ? '

' ತುಸು ತುಸು ಉಂಟು. '

' ಯಾಕೆ ಸ್ನೇಹಾ ? '

ಸ್ನೇಹಳು ಕಂಪಿತ ಕಂಠದಲ್ಲಿ ಹೇಳಿದಳು, ' ಆ ದಿನ ಅಷ್ಟು ಸಿಟ್ಟಾಗಿದ್ದಿರಿ, ಮತ್ತೆ ಹಾಗಾದರೆ ! '

' ಸಿಟ್ಟೆ ? ಸಿಟ್ಟಲ್ಲ ಲತಾ,––ನಿನ್ನ ಮೇಲೆ ಸಿಟ್ಟಾಗಬಹುದೇ ! ಆದರೆ ಆಗಿದ್ದೆ––ನನ್ನ ಮೇಲೆಯೇ ನಾನು ! ನಾನು ದುರ್ಬಲನಾಗಿ ನನ್ನ ಹತ್ತಿರವೇ ನಿನ್ನನ್ನು ಇಟ್ಟುಕೊಂಡು, ನಿನ್ನ ಎಳೆಮನಸ್ಸಿನಲ್ಲಿದ್ದ ತಪ್ಪು ಗ್ರಹಿಕೆಯನ್ನು ಅದೇಕೆ ದೃಢಗೊಳಿಸಬೇಕಿತ್ತು ? ಆಗಲೇ ಊರಿಗೆ ಹೋಗಿ ತಂದೆಯವರಿಗೆ ನಿನ್ನನ್ನು ಒಪ್ಪಿಸಿ ಬಿಟ್ಟಿದ್ದರೆ ನೀನೆಂದೋ ನನ್ನನ್ನು ಮರೆತುಬಿಡುತ್ತಿದ್ದಿ ಮತ್ತು ಸುಖಿಯಾಗುತ್ತಿದ್ದಿ. ಹಾಗೆ ಮಾಡದೆ, ನನ್ನ ದುರ್ಬಲತೆಯ ಮೂಲಕ ನಾಲ್ಕೂ ಕಡೆಗೆ ಅಶಾಂತಿಯನ್ನು ಉಂಟುಮಾಡಿದೆನು. ತಂದೆಗೆ ಹೇಳಲಾರದಷ್ಟು ಕಷ್ಟ ಕೊಟ್ಟೆನು. ನಿನ್ನನ್ನಂತೂ ಸಾಯಗೊಲ್ಲುತ್ತಿದ್ದೆ. '

' ನೀವು ಊರಿಗೆ ಹೋಗಿರಿ. ನನಗೆ ಬರಲು ಬಹಳ ಭಯವಾಗುತ್ತಿದೆ. ನಾನೊಲ್ಲೆ. '

' ಈಗಲೂ ಹಾಗೇ ತಿಳಿದಿರುವಿಯಾ ಸ್ನೇಹಾ ? ಇನ್ನು ನಾನು ಊರಿಗೆ ಹೋಗುವದಿಲ್ಲ; ನೀನೂ ಹೋಗಬೇಕಾಗಿಲ್ಲ. ತಂದೆ ಎಂದಾದರೂ ನನ್ನನ್ನೂ ನಿನ್ನನ್ನೂ ಒಮ್ಮೆಗೇ ಕ್ಷಮಿಸಿದರೆ ಅಂದು ಹೋಗೋಣ; ಇಲ್ಲದಿದ್ದರೆ ಹೀಗೆಯೇ ಎಲ್ಲರಿಂದ ಪರಿತ್ಯಕ್ತರಾಗಿ ನಾನು ನೀನು ಒಂದಾಗಿ ಇದ್ದುಬಿಡೋಣ. '

' ನನ್ನನ್ನು ಇನ್ನೆಲ್ಲಿಯೂ ಕಳಿಸುವದಿಲ್ಲವಷ್ಟೆ ? '

‘ ಕಳಿಸಿಕೊಡುವದೇ? ಚಿರದಿನವೂ ಓೞಗೆ ಹತ್ತಿರ ಹಿಡಿದುಕೊಂಡಿರುವೆ ’ —ಎಂದೆನ್ನುತ್ತ ಸುರೇಶನು ಸ್ನೇಹಲತೆಯನ್ನು ಎದೆಗವಚಿಕೊಂಡನು.

ಕೆಲ ಹೊತ್ತಿನ ಮೇಲೆ ಸುರೇಶನು ನೋಡಿದನು— ಸ್ನೇಹಳು ಅದೇ ಅವಸ್ಥೆಯಲ್ಲಿ ಮಲಗಿ ನಿದ್ದೆ ಹೋಗಿದ್ದಾಳೆ. ತೋಳಿನಲ್ಲಿ ಎಳೆತೋಳೆರಡು ಹಾಗೇ ಸುತ್ತಿಕೊಂಡಿವೆ. ಗಭೀರ ಸ್ನೇಹದಿಂದ ಸುರೇಶನು ಅವಳ ಮಸ್ತಕಕ್ಕೆ ಮುತ್ತಿಟ್ಟು ಮೆಲ್ಲಮೆಲ್ಲಗೆ ಹಾಸಿಗೆಯ ಮೇಲೆ ಮಲಗಿಸಿದನು.

ಒಂದು ತಿಂಗಳಲ್ಲಿ ಸ್ನೇಹಳು ಓಡಾಡುವ ಹಾಗಾದಳು. ಅವಳ ಬಿಳುಪೇರಿದ ಕದಪುಗಳಲ್ಲಿ ಮತ್ತೆ ರಕ್ತ ಸಂಚಾರವಾಗಿ ಮೊದಲಿನಂತೆ ಮೃದು ಗುಲಾಬಿಯ ಹಾಗೆ ಅರಳಿಕೊಂಡವು. ಅವಳ ತಿಳಿನೀಲಿಯ ಹೊಳೆಗಂಣು ಗಳಲ್ಲಿ ಮತ್ತೆ ನಗೆಯಾಡತೊಡಗಿತು; ಸಹಸಾ ಒಂದು ದಿನ ನಸುಕಿನಲ್ಲೆದ್ದು ಕೇಳಿದಳು ತನ್ನ ಮದುವೆಯಂತೆ !

* * * *

ಸುರೇಶನು ವಿವಾಹದ ನಂತರ ಕಲಕತ್ತೆಯನ್ನು ಬಿಟ್ಟು ಸಮೀಪದ ಒಂದು ಹಳ್ಳಿಯಲ್ಲಿ ಸಣ್ಣ ಉದ್ಯಾನವುಳ್ಳ ಮನೆಯೊಂದನ್ನು ಬಾಡಿಗೆಗೆ ತೆಗೆದುಕೊಂಡು, ತಮ್ಮ ಸಿಹಿದಿನದ ಮಿಲನವನ್ನು ಮಧುರವಾಗಿ ಮಾಡಿದನು. ಸ್ವಜನ ವಿಯೋಗಕಾತರನಾದ ಸುರೇಶನು ತನ್ನ ಕ್ಷುದಿತ ಹೃದಯದಲ್ಲಿ ಸ್ನೇಹಲತೆ ಯನ್ನು ಇನ್ನೂ ಚೆನ್ನಾಗಿ ತುಂಬಿಕೊಳ್ಳಲೆಂದೇ ಕಲಕತ್ತೆಯ ಕರ್ಮಕೋಲಾ ಹಲದಿಂದ ದೂರ ಸರಿದು ಬಂದನು. ಚಳಿಗಾಲದ ಸ್ನಿಗ್ಧಸಲಿಲೆ ಗಂಗೆ ನಿತಾಂತ ನಿಶ್ಚಿಂತಳಾಗಿ ಮೃದು ಮಧುರ ರಾಗಿಣಿಯಲ್ಲಿ ಹಾಡುತ್ತ ಆಡುತ್ತ ಅವರ ಉದ್ಯಾನದ ಹಿಂದಿನಿಂದ ಸಲೀಲವಾಗಿ ಹೊರಟಿದ್ದಾಳೆ. ನಸುಕಿನಲ್ಲಿ ನವ ದಂಪತಿಗಳು ಉದ್ಯಾನದಲ್ಲಿ ತಿರುಗಾಡುವಾಗ ಎಡಬಲದಲ್ಲಿಯ ಹಸಿರು ಕರಿಕೆಯ ಕುಡಿಯಲ್ಲಿ ಇಬ್ಬನಿಯ ಹನಿಗಳು ಸ್ನೇಹಳ ಲಲ್ಲೆಮುನಿಸಿನ ಕಣ್ಣೀರಿ ನಂತೆ ಚಲಮಲಿಸುತ್ತಿವೆ. ಚಳಿಗಾಲದ ಬಿಳಿ ಮುಗಿಲಲ್ಲಿ ಉಷೆಯ ಕೆಂಪು ಸ್ನೇಹಳ ಗಲ್ಲದಲ್ಲಿ ಮೂಡಿದ ಭಾವಾವೇಗದಂತಿದೆ. ಮುಂಜಿನ ಮುಸುಕಿನಲ್ಲಿ ಕುಂದದ ಕಲಿಕೆಗಳು ಅವಳಂತೆಯೇ ನಾಚಿ ಸಂಕೋಚಗೊಂಡು ತಲೆ ತಗ್ಗಿಸಿ ತಮ್ಮ ಪುಟ್ಟ ಎದೆಯ ಬಾಗಿಲನ್ನು ಇಕ್ಕಿಕೊಂಡಿವೆ. ಹಕ್ಕಿಪಕ್ಕಿಗಳು ಅವರ ಮಿಲನಗುಂಜನವನ್ನೇ ಅನುಕರಿಸಿ ಉಲಿಯುತ್ತಿವೆ.

ಸ್ನೇಹಳು ಒಂದು ದಿನ ಇಳಿಹೊತ್ತಿನಲ್ಲಿ ಬಂಕದ ಅಂಕದಲ್ಲಿ ಇರಿಸಿದ ಒಂದು ಲೋಹರಚಿತ ಆಸನದ ಮೇಲೆ ಕುಳಿತುಕೊಂಡು ಏನನ್ನೊ ನಿಟ್ಟಿಸಿ

ನೋಡುತ್ತಿದ್ದಳು; ಸುರೇಶನು ಆಗ ಹತ್ತರಿಲ್ಲ. ಒಳಗೆ ಏನನ್ನೋ ಮಾಡುತ್ತಿದ್ದನು. ಸ್ನೇಹಳಿಗೆ ಗೊತ್ತು--ಸುರೇಶನು ಆವಳನ್ನು ಬದಿಯಲ್ಲಿ ಕಾಣದೆ ಈಗಲೇ ಹೊರಗೆ ಬಂದು ಬಿಡುವನೆಂದು. ಆದುದರಿಂದಲೇ ಆವಳು ಯಥಾಸಾಧ್ಯವಾಗಿ ಗಾಂಭೀರ್ಯ ರಕ್ಷಣೆ ಮಾಡುವದಕ್ಕೋಸ್ಕರ ಸಮೀಪದಲ್ಲಿಟ್ಟ ಟಬ್ಬಿನಲ್ಲಿಯ ಒಂದು ಗುಲಾಬೀ ಕಂಟಿಗೆ ಬಿಟ್ಟ ಮೊಗ್ಗೆಯನ್ನೆ ನಿಟ್ಟಿಸಿ ನೋಡುತ್ತಿದ್ದಳು. ಮಧ್ಯಾಹ್ನ ಸುರೇಶನ ಸಂಗಡ ಜಗಳವಾಗಿ ಹೋಗಿತ್ತು. ಬಹಳ ಹೊತ್ತಾಯಿತು, ಆದರೂ ಸುರೇಶನು ಬರಲಿಲ್ಲ. ಸ್ನೇಹಳು ಕೊಂಚ ಮುಖ ತಿರುಗಿಸಿ ಕದ್ದು ಹಿಂಬದಿಗಿದ್ದ ತೆರೆದ ಬಾಗಿಲೊಳಗಿಂದ ಹಣಿಕಿ ನೋಡಿದಳು. ಒಳಗೆ ಯಾರೂ ಕಾಣಲಿಲ್ಲ. ಆಗ ಮೆಲ್ಲಮೆಲ್ಲನೆ ಬಾಗಿಲ ಬಳಿ ಹೋಗಿ ಒಳಗೆಲ್ಲ ನೋಡಬೇಕೆಂದು ಬಾಗಿ ಹಣಿಕಿ ಹಾಕಿದಳು. ಅವಳಿಗೆ ಹೆದರಿಕೆ--ಸುರೇಶನು ಈಗಲೇ ಅಡಗಿದಲ್ಲಿಂದ ಬಂದು ತನ್ನನ್ನು ನೋಡಿಬಿಟ್ಟರೆ ?

ಹಿಂದಿನಿಂದ ಯಾರೋ ಒಂದು ರಾಶಿ ಕುಂದದ ಹೂಗಳನ್ನು ತಲೆಯ ಮೇಲೆ ಮುಖದ ಮೇಲೆ ಎರಚಿದರು. ಸ್ನೇಹಳು ಚಮುಕಿತಳಾಗಿ ತಿರುಗಿ ನೋಡುತ್ತಾಳೆ--ಹಿಂದೆ ಸುರೇಶ ! ಅತರ್ಕಿತ ಆನಂದದಿಂದ ಮುಖವೆಲ್ಲ ನಕ್ಕುಬಿಟ್ಟಿತು. ಮುನಿಸು ತೋರಿಸುವ ಅವಕಾಶ ಅವಳಿಗೆ ಸಿಕ್ಕದೇ ಹೋಯಿತು.

‘ ಹಾಗೆ ಹಣಿಕಿ ಹಾಕಿ ಏನು ನೋಡುವದಾಗುತ್ತಿತ್ತು ? ’

ಸ್ನೇಹಳು ಕೊರಳು ಕೊಡವಿ, ಕಂಣು ಕೊಂಕಿಸಿ, ತುಟಿ ಉಬ್ಬಿಸಿ ‘ ಹೋಗು ’ ಎಂದಳು.

‘ ಇನ್ನೂ ನಿನ್ನ ಸಿಟ್ಟು ಇಳಿದಿಲ್ಲವೆಂದು ಕಾಣುತ್ತದೆ ? ’

ಸ್ನೇಹಳು ಮುಖವನ್ನು ಇನ್ನೂ ಭಾರವಾಗಿಸಿಕೊಂಡು ‘ ಇಲ್ಲಾ ’ ಎಂದಳು.

‘ ನೋಡು ಎಷ್ಟೊಂದು ಹೂವು ತಂದಿದ್ದೇನೆ. ಬಾ ಇಬ್ಬರೂ ಒಂದೊಂದು ಮಾಲೆ ಕಟ್ಟೋಣ; ಮಾಲೆ ಚೆನ್ನಾಗಿ ಮಾಡಿದವರೇ ಗೆದ್ದವರು; ಮಾಲೆ ಕೆಟ್ಟರೆ ಕಟ್ಟಿದವರ ಸೋಲು; ಆಗ ಗೆದ್ದವರ ಮೇಲೆ ಸೋತವರು ಮುನಿಸುಗೊಳ್ಳಲು ಅವಕಾಶ ಸಿಕ್ಕದು. ಹೇಗೆ, ಒಪ್ಪಿಗೆಯೆ ? ’

‘ ಒಳ್ಳೇದು, ಒಪ್ಪಿದ. ಆದರೆ ನನಗೆ ಒಳ್ಳೊಳ್ಳೇ ಹೂ ಕೊಡಬೇಕು.’

‘ ವಾಃ, ಹಾಗೆ ಕೊಡುವವನಲ್ಲ. ಸಿಲ್ಲು, ಸೂಜಿ ದಾರ ತರುವೆ. ಒಳ್ಳೊಳ್ಳೇ ಹೂ ಆರಿಸಿ ಕದಿಯಬೇಡ ತಿಳಿಯಿತೆ ? ’

' ನಾನು ಹಾಗಾದರೆ ಕಳ್ಳಿಯೆ ? '

' ಅಲ್ಲದೇ ಇನ್ನೇನು ? ' ಎಂದು ಹೇಳಿ ಸುರೇಶನು ನಗುತ್ತ ನಗುತ್ತ ಒಳಗೆ ಹೋಗಿ ಸೂಜಿ ದಾರ ತೆಗೆದುಕೊಂಡು ಬಂದು ನಗುತ್ತ ಹೇಳಿದನು, ' ಈಗಿನಿಂದಲೇ ಮುಖ ಮುದುಡಿಸಿಕೊಂಡರೆ ನಡೆಯುವದಿಲ್ಲ; ಮೊದಲು ಮಾಲೆ ಕಟ್ಟಬೇಕು. '

' ನಾನು ಅದಕ್ಕೆ ಹೆದರುವೆನೆ ? ನನ್ನ ಮಾಲೆ ನಿಶ್ಚಯವಾಗಿಯೂ ನಿನಗಿಂತ ಚೆನ್ನಾಗುವದು.'

' ನೋಡುವಾ! ' ಹೀಗೆ ಇಬ್ಬರೂ ಮಾಲೆ ಕಟ್ಟಲು ಕುಳಿತರು. ಇಬ್ಬರೂ ಸಮಾನ ಶಿಲ್ಪಿಗಳೇ. ಕೇಳುವದೇನು ? ಆದರೂ ಸುರೇಶನು ವಯಸ್ಸಿನ ಗುಣದಿಂದ ಒಂದು ಬಗೆಯಾಗಿ ಮಾಲೆಯನ್ನು ಕಟ್ಟುತ್ತ ನಡೆದಿದ್ದನು. ಆದರೆ ಸ್ನೇಹಳಿಗೆ ತುಂಬಾ ಪೇಚಾಟ. ಅನಭ್ಯಸ್ತ ಅಂಗುಲಿಗಳಲ್ಲಿ ಸೂಜಿಯು ಕಂಪಿಸುತ್ತಲೇ ಇತ್ತು. ನಡುನಡುವೆ ಕೈಗೆ ಚುಚ್ಚುವದು; ಪೋಣಿಸಿದ ಹೂವು ದಾರದಲ್ಲಿ ಸೊಟ್ಟಾಗುವದು; ಚೆನ್ನಾಗಿ ಕಾಣದು; ಎಂದೇ ಅದನ್ನು ತೆಗೆದೊಗೆಯಬೇಕಾಗುವದು. ಎರಡು ಮೂರು ಸಲ ತೆಗೆದು ಪೋಣಿಸಿ, ಹೂವೆಲ್ಲ ಬಾಡಿ ಹರಿದು ಹೋಗುವವು. ಅರ್ಧ ಗಂಟೆಯಾದರೂ ಸ್ನೇಹಳ ದಾರದಲ್ಲಿ ಆರಕ್ಕಿಂತ ಹೆಚ್ಚು ಹೂವು ಪೋಣಿಸುವದಾಗಿರಲಿಲ್ಲ. ಸುರೇಶನು ಮಾಲೆಯ ತುದಿಗೆ ಗಂಟು ಹಾಕುತ್ತ ನಕ್ಕು ' ಈ ಸಲ ಗೆದ್ದವರಾರು ? ಮತ್ತೆ ನನ್ನೊಡನೆ ಪಂಥ ಕಟ್ಟುವಿಯಾ ? ' ಮಾಲೆಯನ್ನು ಎರಡೂ ಕೈಗಳಿಂದ ಎತ್ತಿಹಿಡಿದು ಸುರೇಶನು ನಗುತ್ತ ಅವಳ ಕಡೆಗೆ ನೋಡುತ್ತ ಏನನ್ನೋ ಭಾವಿಸಿಕೊಂಡು, ಆ ಮೇಲೆ ಫಕ್ಕನೆ ಸ್ನೇಹಳ ತಲೆಯ ಮೇಲೆ ಅದನ್ನು ಒಗೆದುಬಿಟ್ಟನು. ಮಾಲೆಯು ತಲೆಯಿಂದ ಜಾರಿ ಕೊರಳಿಗೆ ಬಿತ್ತು. ಸ್ನೇಹಳ ಮುಖ ಮುನಿಸಿನಿಂದ ಮೋಡ ಮುಸುಕಿದಂತಾಗಲು, ಮಾಲೆಯನ್ನು ತೆಗೆದು ಸುರೇಶನ ಮೈಮೇಲೆ ಬಿಸುಟಿ, ' ಬೇಕಾಗಿಲ್ಲ ' ಎಂದಳು.

' ಸೋತು ಮತ್ತೆ ಸಿಟ್ಟೆ ? ಬೇಕಾಗಿಲ್ಲವಂತೆ ! ' ಎಂದು ಸುರೇಶನು ಅವಳನ್ನು ಎದೆಗವಚಿಕೊಂಡು ಮಾಲೆಯನ್ನು ತೆಗೆದು ಮತ್ತೆ ಅವಳ ಕೊರಳಿಗೆ ಹಾಕಿ, ಕೆಂಪೇರಿದ ಕೆನ್ನೆಗಳಿಗೆ ಒಂದೊಂದು ಮುತ್ತನಿಟ್ಟು ' ಇದೇ ಶಿಕ್ಷೆ, ' ಎಂದನು.

' ಹೋಗು, ಈ ಮಾಲೆ ಬೇಡ ನನಗೆ. '

' ಯಾಕೆ ? '

‘ ಹಾಗಾದರೆ ನನ್ನದನ್ನು ಪೋಣಿಸಿಕೊಡು. ’

‘ ಇಷ್ಟೊತ್ತು ಕಷ್ಟಬಟ್ಟು ಒಂದನ್ನು ಪೋಣಿಸಿದೆ, ಮತ್ತೆ ? ನೀನು ಇದನ್ನೇ ತೆಗೆದುಕೊ,--ನೀನು ಪೋಣಿಸಿದ್ದೆಂದೇ ಇಟ್ಟುಕೊ. ’

‘ ಹಾಗಾದರೆ ಹೋಗು, ನನಗೆ ಬೇಡ. ’

‘ ತೆಗೆದು ಒಗೆ ನೋಡೋಣ ಎಷ್ಟು ಧೈರ್ಯವಿದೆ ? ’

ಇಬ್ಬರ ಜಗ್ಗಾಟದಲ್ಲಿ ಮಾಲೆಯು ಹರಿದು ಹೋಯಿತು. ಸುರೇಶನು ನಕ್ಕು, ‘ ನಡೆ, ನಿಶ್ಚಿಂತೆಯಾಯಿತು ’ ಎಂದನು.

ಸ್ನೇಹಳು ಅಪ್ರತಿಭಳಾಗಿ ಆ ಹರಿದ ಮಾಲೆಯನ್ನೇ ಸುರೇಶನ ಕೊರಳಿಗೆ ತೊಡಕಿಸಿದಳು.

ಇಂಥ ಸಮಯದಲ್ಲಿ ವಯಸ್ಕ ಪರಿಚಾರಿಕೆ ಹತ್ತಿರ ಬರುವದನ್ನು ಕಂಡು ಇಬ್ಬರೂ ಸಾವರಿಸಿಕೊಂಡು ಕುಳಿತರು. ವಯಸ್ಕಳು ಬಂದು ಅಭಿಭಾವಕ* ಳಂತೆ ಪರಮ ಗಂಭೀರಳಾಗಿ ಹೇಳಿದಳು, ‘ ಹೇಳದಿದ್ದರೂ ಸಾಗುವಂತಿಲ್ಲ ಮಗೂ, ಹೇಳಿದರೆ ನೀನು ಸಿಟ್ಟಾಗುವಿ, ಎಂದೇ ನಾನು ಇಷ್ಟು ದಿನ ಏನೂ ಹೇಳಿಲ್ಲ. ಅಂದುಕೊಂಡಿದ್ದೆ--ಹೇಗೋ ಸಾಗಿದೆಯೆಂದ ಮೇಲೆ ಅಡ್ಡ ಬಂದು ಹುಡುಗನಿಗೆ ತೊಂದರೆಯೇಕೆ ಕೊಡಬೇಕು; ತಾನೇ ಏನಾದರೂ ಉಪಾಯ ಹುಡಿಕಿಕೊಳ್ಳಬಹುದು ಎಂದು. ಆದರೆ ಚಲ್ಲಾಟವಲ್ಲದೆ ನೀವು ಇನ್ನೇನೂ ಮಾಡಿದ್ದು ನೋಡಲಿಲ್ಲ. ಗಡಿಯಾರದ ಸರಪಣಿ, ಉಂಗುರ ಇನ್ನೇನೇನೊ ಕೊಟ್ಟಿದ್ದೆಲ್ಲ ಹರಿಯಿಂದ ಮಾರಿಸಿ ಹಾಗೂ ಹೀಗೂ ಈ ವರೆಗೆ ಸಾಗಿಸಿದೆ. ರೂಪಾಯಿ ಕರಗುವವಲ್ಲದೇ ದಿನದಿನಕ್ಕೆ ಹೆಚ್ಚುವದಿಲ್ಲ ಮಗೂ, ಈಗ ಏನಾದರೂ ಒಂದು ಉಪಾಯ ಮಾಡು. ’

ಸುರೇಶನಿಗೆ ನೋವಿನ ಮೇಲೆ ಪೆಟ್ಟು ತಾಕಿದಂತಾಗಿ ಚಮಕಿತನಾದನು. ಅದರಲ್ಲೂ ಸ್ನೇಹಳ ಇದಿರು ಈ ಮಾತು ನಡೆದದ್ದರಿಂದ ಅವನ ಗರ್ವಭಂಗವಾದ ಹಾಗಾಗಿ ನಾಚಿಕೆಯೆನಿಸಿತು. ಈ ಮಾತು ಕೇಳಿ ಸ್ನೇಹಳ ಮುಖ ಹೇಗಾಯಿತು ಎಂದು ಕಂಣೆತ್ತಿ ನೋಡಲೂ ಸಹ ಅವನಿಗೆ ಸಾಹಸವಾಗಲಿಲ್ಲ. ನತಮುಖನಾಗಿ ಕುಳಿತುಕೊಂಡನು.

ತುಸು ತಡೆದು ಪರಿಚಾರಿಕೆ ಮತ್ತೆ ಹೇಳಿದಳು, ‘ ಹರಿ ಹೇಳುತ್ತಿದ್ದ, ನೀನು ದೊಡ್ಡವರ ಮಗ ಎಂದು. ಹಾಗಿದ್ದರೆ ತಂದೆ ನಿನಗೆ ದಿನದ ವೆಚ್ಚಕ್ಕೆ

* ಅಭಿಭಾವಕ= ಯೋಗಕ್ಷೇಮದ ಭಾರ ಹೊತ್ತವ. *Gaurdian*

ಕೊಡುವದಿಲ್ಲವೆ ? ಒಬ್ಬರ ಮೇಲೊಬ್ಬರು ಸಿಟ್ಟಾಗಿರುವಿರೇನು ? ಹೀಗೆ ಎಷ್ಟೋ ಆಗುವದುಂಟು. ಒಂದೆರಡು ಸವಿಮಾತಿನಲ್ಲಿ ಎಲ್ಲ ಮತ್ತೆ ಸರಿ ಹೋಗುವದು; ತಂದೆ ಮಕ್ಕಳ ಸಿಟ್ಟು ಅಷ್ಟರದೇ. '

' ಸಾಕು, ಸಾಕು, ಸುಮ್ಮನಿರು. ನನ್ನ ಹಾಗೂ ತಂದೆಯ ನಡುವೆ ಸವಿ ಮಾತಾಡಿ ಸರಿಪಡಿಸುವ ಸಿಟ್ಟಿನ ಸಂಬಂಧವಿಲ್ಲ. ಆ ಮಾತಂತೂ ಇಲ್ಲ. ಆದರೆ ಇನ್ನೇನಾದರೂ ಉಪಾಯ ಕಂಡರೆ— '

' ಉಪಾಯವಿನ್ನೇನು ! ಗಂಡು ಹುಡುಗ; ನೌಕರೀ ಚಾಕರೀ ಏನಾದರೂ ಒಂದು ಮಾಡಿದರಾಯಿತು. '

' ನೌಕರೀ ? ನನಗಂತೂ ಏನೂ ಗೊತ್ತಿಲ್ಲ. ಮೆಡಿಕಲ್ ಕಾಲೇಜಿನಲ್ಲಿ ಇನ್ನೂ ಒಂದು ವರ್ಷ ಓದುವದಿತ್ತು. '

' ಹುಡುಕಿ ನೋಡು ಮಗು, ಹುಡುಕಿ ನೋಡು—ಮನೆ ಹಿಡಿದು ಕುಳಿತರುಂಟೆ ? '

' ಹಾಗಾದರೆ ಕಲಕತ್ತೆಗೆ ಹೋಗಬೇಕಾಗುವದು. ಸ್ನೇಹಳ ಹತ್ತಿರ ಯಾರು ? '

' ಯಾಕೆ ? ನಾವಿರುವೆವು. ಅಲ್ಲದೆ ನೌಕರೀ ಮಾಡುವವರು ಹಗಲು ರಾತ್ರಿ ಆಫೀಸಿನಲ್ಲಿಯೇ ಇರುವರೇ ? '

' ಒಳ್ಳೇದು; ವಿಚಾರಿಸಿ ನೋಡುವೆ. ಈಗ ನೀನು ಹೋಗು. '

ಪರಿಚಾರಿಕೆ ಹೊರಟು ಹೋದಳು. ಸುರೇಶನು ಸ್ನೇಹಳ ಕಡೆಗೆ ನೋಡಿದನು. ಅವಳು ತಲೆತಗ್ಗಿಸಿಕೊಂಡು ನಿಂತು ಕಾಲ ಹೆಬ್ಬೆರಳಿನಿಂದ ನೆಲ ಕೆದರುತ್ತಿದ್ದಾಳೆ. ಅವಳನ್ನು ಹತ್ತಿರ ಸೆಳೆದುಕೊಂಡು ಸುರೇಶನು ' ಏನು ಯೋಚಿಸುತ್ತಿರುವೆ ಸ್ನೇಹಾ ? ' ಎಂದು ಕೇಳಿದನು.

ಸ್ನೇಹಳು ತುಸು ಮೌನವಾಗಿದ್ದು ಹೇಳಿದಳು, ' ನೀನೊಮ್ಮೆ ತಂದೆಯ ಬಳಿ ಹೋಗು. '

' ತಂದೆಯ ಬಳಿ ? ಅವರು ನನ್ನ ಮೇಲೆ ಸಿಟ್ಟಾಗಿದ್ದಾರೆ, ತಿಳಿಯದೆ ?

ಸ್ನೇಹಳು ಒಂದು ಕ್ಷಣ ಅಪಲಕ ನೇತ್ರದಿಂದ ಪತಿಯನ್ನು ನೋಡಿ, ಕೊನೆಗೆ ಮೆಲುದನಿಯಲ್ಲಿ ಹೇಳಿದಳು, ' ಅವರು ಸಿಟ್ಟಾಗಿರುವರು ? ಯಾಕೆ ? ನೀನು ಅವರ ಬಳಿ ಹೋಗುತ್ತಲೇ ಅವರ ಸಿಟ್ಟು ಇಳಿಯಬಹುದು. ನೀನು ಹೋಗು ಅವರ ಬಳಿ.'

ಸುರೇಶನು ಒಂದು ನಿಮಿಷ ಯೋಚಿಸಿ ಹೇಳಿದನು, ' ಕ್ಷಮಿಸ ದಿದ್ದರೆ ? ಅಲ್ಲದೇ ನಾನೂ ಅವರ ಮೇಲೆ ಮುನಿಸುಗೊಳ್ಳಲಾರೆನೆ ? ' ಆ ಮೇಲೆ ಒಡನೆಯೇ, ' ಪರಿಚಾರಿಕೆ ಹೇಳಿದ್ದನ್ನೇ ಮಾಡುವೆ. ನಾನು ಒಂದು ಕೆಲಸವನ್ನೇ ಹುಡುಕಿ ನೋಡುವೆ ' ಎಂದನು.

ಸ್ನೇಹಳು ಅವನನ್ನು ಪ್ರಶ್ನಸೂಚಕ ನೇತ್ರಗಳಿಂದ ನೋಡಿ, ' ಪರಿ ಚಾರಿಕೆ ಹೇಳಿದ್ದೇನು ? ತಂದೆ ನಿನ್ನ ಮೇಲೆ ಸಿಟ್ಟಾಗಿರಬಹುದು ಎಂದೇ ಅಲ್ಲವೇ ? ತಂದೆ ನಿನ್ನ ಮೇಲೆ ಅದೇಕೆ ಸಿಟ್ಟಾಗಿದ್ದಾರೆ ? ನೀನೇನು ಅಂಥ ಅಪರಾಧ ಮಾಡಿರುವಿ ? ' ಎಂದು ಹೇಳುತ್ತ ಹೇಳುತ್ತ ಸ್ನೇಹಳ ಕಂಠವು ಕಟ್ಟಿಕೊಂಡಿತು.

ಸುರೇಶನು ಸ್ನೇಹಳಿಗೆ ತನ್ನ ಅಪರಾಧದ ಗುರುತ್ವವನ್ನು ತಿಳಿಸಿ ಹೇಳಲು ಇಚ್ಛಿಸಲಿಲ್ಲ. ಹಾಗೂ ತಂದೆ ತನ್ನನ್ನು ಪರಿತ್ಯಾಗ ಮಾಡಿದ ಮಾತನ್ನೂ ಅವಳಿಗೆ ತಿಳಿಸುವ ಇಚ್ಛೆ ಅವನಿಗೆ ಇರಲಿಲ್ಲ. ಸರಳ ಸ್ವಭಾವದ ಹುಡಿಗೆಯ ಮನಸ್ಸಿನಲ್ಲಿ ಇಲ್ಲದ ಗರಲಲೇಪನವನ್ನೇಕೆ ಮಾಡುವದು ? ಸುರೇಶನು ಸಹಜ ಸ್ವರದಲ್ಲಿ ಹೇಳಿದನು, ' ನಾನು ಕೆಲದಿನ ವಿದೇಶಕ್ಕೆ ಹೋದರೆ ಸ್ನೇಹಾ,— ಕಲಕತ್ತೆ ಯಲ್ಲಿ ನೌಕರೀ ಮಾಡುವದು ನನ್ನಿಂದಾಗದು—ತುಸು ದೂರ ಹೋಗಬೇಕು. ಆದರೆ ನೀನು ಒಬ್ಬಳೇ ಇರಬಲ್ಲೆಯಷ್ಟೆ ? '

ಸ್ನೇಹಳು ತ್ರಸ್ತಳಾಗಿ, ' ನಾನು ಒಬ್ಬಳೇ ಇರಲಾರೆ. ನನ್ನನ್ನೂ ಕರೆದು ಕೊಂಡು ಹೋಗು ' ಎಂದಳು.

ಸುರೇಶನೂ ತುಸು ತ್ರಸ್ತನಾಗಿ ಹೇಳಿದನು, ' ಎಂದಿಗೆ ನಿನ್ನ ಬುದ್ಧಿ ಶುದ್ಧಿಗೆ ಬರುವದು ಸ್ನೇಹಾ ? ಹೋಗಲಿ. ಈಗ ಬೇರೆ ಹೊರಟು ನಿಂತಿಲ್ಲ ವಲ್ಲಾ ? ಹೆದರಬೇಡ ತಿಳಿಯಿತೆ ? '

ಸ್ನೇಹಳು ಭಯದಿಂದ ಸಂಕುಚಿತಳಾಗಿ ತಲೆತಗ್ಗಿಸಿ ನಿಂತುಕೊಂಡಳು.

೭

ಜಮೀನುದಾರ ಸಂತೋಷಬಾಬುವು ಇರುವ ರೀತಿಯು ಸುವ್ಯವಸ್ಥಿತ ವಾದದ್ದು. ಅವನ ಜೀವನದಲ್ಲಿ ಏನಾದರೂ ಅಶಾಂತಿಯು ಕಾರಣವಿದೆ ಎಂದು ಹೊರಗಿನವರು ಸಂದೇಹಪಟ್ಟುಕೊಳ್ಳಲು ಸಹ ಅಸ್ಪದವಿರುತ್ತಿದ್ದಿಲ್ಲ. ಈಗಲೂ

ಎಂದಿನಂತೆ ರಾತ್ರಿ ಇರುತ್ತಲೇ ಎದ್ದು, ಪ್ರಾತರ್ವಿಧಿಗಳನ್ನೆಲ್ಲಾ ಮುಗಿಸಿ, ಸುಮಾರು ಎಂಟು ಗಂಟೆಗೆ ಜಮೀನುದಾರೀ ಕಚೇರಿಗೆ ಬರುತ್ತಾನೆ. ಹಾಗೂ ಅಲ್ಲಿ ಅದೇ ನಿಯಮದಿಂದ ಎಲ್ಲ ಕಾರ್ಯಗಳೂ ಜರಗುತ್ತವೆ. ಮಧ್ಯಾಹ್ನದ ಹನ್ನೆರಡು ಗಂಟೆಗೆ ಯಥಾ ರೀತಿ ಸ್ನಾನವನ್ನು ಮಾಡಿ ಮುಗಿಸಿ ಸೊಸೆ ಸುಧೆಯ ಹತ್ತಿರ ಊಟಕ್ಕೆ ಕುಳಿತುಕೊಳ್ಳುವನು. ಅಲ್ಲಿ ಅವಳ ಬಳಿ ಸಸ್ನೇಹ ಹಾಸ್ಯ ದಿಂದ ಇದು ಬೇಕೆಂದು ಅದು ಬೇಡವೆಂದು ಅವಳನ್ನು ಕಾಡಿಸಿ ಪೀಡಿಸಿ ಅವಳ ಅಡಿಗೆಯ ಗುಣವರ್ಣನೆ ಮಾಡುತ್ತ ಮಾಡುತ್ತ ಊಟ ಮಾಡಿ ಮುಗಿ ಸಲು ಒಂದು ಗಂಟೆಗೆ ಮಿಕ್ಕಿ ಹೊತ್ತು ಕಳೆಯುವದು. ಆಮೇಲೆ ಒಂದೆರಡು ಗಂಟೆ ವಿರಾಮ. ಸಿದ್ಧಾಂತದಲ್ಲಿ ಸೊಸೆಯೊಡನೆ ಅತಿ ಮಹತ್ವದ ವಿಷಯ ಸಂಬಂಧದಲ್ಲಿ ಕಥೋಪಕಥನವಾದ ನಂತರ ಮತ್ತೆ ತನ್ನ ಕೂಡುವ ಮನೆಗೆ ಹೋಗುವನು. ಅಷ್ಟು ಹೊತ್ತಿಗೆ ಅನೇಕ ವಿದ್ಯಾಲಂಕಾರರು, ತರ್ಕವಾಚ ಸ್ಪತಿಗಳು, ನೈಯಾಯಿಕರು, ವೇದಾಂತ ಶಿಖಾಮಣಿಗಳು ಮೊದಲಾದವರು ಅವನ ಸ್ವಾಗತ ಶಾಲೆಯನ್ನು ಅಲಂಕರಿಸಿ ಅವನ ಬರವನ್ನೇ ಕಾಯುತ್ತ ಕುಳಿ ತಿರುವರು. ತರ್ಕ ಚರ್ಚೆಯಲ್ಲಿ ರಾತ್ರಿಯಾಗಿ ಹೋಗುವದು. ಪರಿಚಾರಕನು ಬಂದು ಪುನಃ ಪುನಃ ಅಂತರ್ಗೃಹದ ಆದೇಶವನ್ನು ಅರಿಕೆ ಮಾಡಿ ಸಂಧ್ಯಾಹ್ನಿ ಕದ ಸಮಯವು ಅತೀತವಾಗುತ್ತಿದೆ ಎಂದು ಹೇಳಿ ಹೇಳಿ ಹೋಗುವನು. ಮೀಮಾಂಸಾಂತ್ಯದಲ್ಲಿ ಪಂಡಿತಗಣದ ಧನ್ಯ ಧನ್ಯ ಎನ್ನುವ ಧ್ವನಿಯಲ್ಲಿ, ಆಶೀರ್ವಚನಗಳ ಸುರಿಮಳೆಯಲ್ಲಿ, ಅವರ ರಜಶೂನ್ಯ ಪಾದಧೂಳಿಯನ್ನು ತಲೆಗಿರಿಸಿಕೊಂಡು, ಪಂಡಿತರಿಗೆಲ್ಲ ಪ್ರಣಾಮೀ ಧನದಕ್ಷಿಣಾದಿಗಳನ್ನು ಅರ್ಪಿಸಿ ಕೊನೆಗೊಮ್ಮೆ ಸಂತೋಷಬಾಬುವು ಸಭಾ ವಿಸರ್ಜನೆ ಮಾಡುವನು. ಆಗ ಸಂಧ್ಯಾಹ್ನಿಕವನ್ನು ಮುಗಿಸಿ ಸೊಸೆಯ ಮೃದುಮಧುರ ಸಸ್ನೇಹ ಅನುಯೋಗ ತಿರಸ್ಕಾರಗಳ ಮಧ್ಯದಲ್ಲಿ ತನ್ನ ವಿಲಂಬದ ಕಾರಣವನ್ನು ತೋರಿಸುತ್ತ ತೋರಿ ಸುತ್ತ ಸಂಜೆಯ ಜಲಯೋಗವನ್ನು ಮುಗಿಸುವನು; ಹಾಗೂ ಶಯನಗೃಹದಲ್ಲಿ ವಿಶ್ರಾಮ ತೆಗೆದುಕೊಳ್ಳುತ್ತ ಧೂಮ್ರಪಾನ ಮಾಡುತ್ತ ದಿವಾಣನೊಂದಿಗೆ ಸಂಸಾರದ ನಾನಾ ಪ್ರಯೋಜನೀಯ ವಿಷಯವಾಗಿ ಮಾತುಕಥೆಗಳನ್ನಾಡು ವನು. ಈ ವೇಳೆಯಲ್ಲಿ ಸೊಸೆಯೂ ದಿನಾಲು ಅಲ್ಲಿ ಇರುವದಾಗಿ ಅಪ್ಪಣೆ ಯಾಗಿತ್ತು.

ಆ ದಿನವೂ ಸಂತೋಷಬಾಬುವು ಸಂಧ್ಯಾ ಜಲಯೋಗವಾದ ನಂತರ ಹಾಸಿಗೆಯಲ್ಲಿ ಮಲಗಿಕೊಂಡು ಬಾದಶಾಹೀ ಗುಡುಗುಡಿಯ ದೀರ್ಘ ನಲಿಕೆ ಯನ್ನು ಬಾಯಿಯಲ್ಲಿರಿಸಿ ತಂಬಾಕಿನ ಹೊಗೆಯಲ್ಲಿ ರೂಪುಗೊಂಡ ಸ್ವರ್ಗದಲ್ಲಿ

ವಿಹರಿಸುತ್ತಿದ್ದಾನೆ. ಇದಿರು ಪ್ರವೀಣ ದಿವಾಣ ಆಮೋದಬಾಬುವು ಒಂದು ಆಸನದ ಮೇಲೆ ಕುಳಿತು ಕಥೋಪಕಥನವನ್ನು ಮಾಡುತ್ತಿದ್ದಾನೆ. ಅವನು ಜಮೀನುದಾರಿಯ ಕೆಲವು ಕೆಲಸಕ್ಕಾಗಿ ಕಲಕತ್ತೆಗೆ ಹೋಗಿದ್ದನು. ಇಂದು ಸಂಜೆಗೆ ತಿರುಗಿ ಬಂದಿದ್ದಾನೆ. ಅದೇ ವಿಷಯವಾಗಿ ಆಲೋಚನೆ ನಡೆದಿದೆ. ಯಜಮಾನನ ಹಾಸಿಗೆಯ ಬದಿಗೆ ಬೀಸಣಿಕೆ ಹಿಡಿದುಕೊಂಡು ಸುಧೆಯು ಕುಳಿತಿದ್ದಾಳೆ. ಸುಮ್ಮನೇ ಕುಳಿತಿರುವದು ಹೆಂಣುಮಕ್ಕಳಿಗೆ ಶೋಭಿಸುವ ದಿಲ್ಲವೆಂದು, ನೆವಕ್ಕೆಂದು ಕೈಯಲ್ಲಿ ಕೆಲಸವಿರಬೇಕೆಂದು, ಅವಶ್ಯಕತೆ ಇರ ದಿದ್ದರೂ ಕೈಯ್ಯಲ್ಲಿ ಬೀಸಣಿಕೆ ಹಿಡಿದಿದ್ದಾಳೆ. ಹಾಗೂ ಸುಧೆಯು ನಡುನಡುವೆ ಅದನ್ನು ಮೃದುವಾಗಿ ಅಲ್ಲಾಡಿಸುತ್ತಿದ್ದಾಳೆ. ಸಂತೋಷಬಾಬುವು ಅಂದನು- 'ಹೋಗಲಿ, ಅವರು ಚಿರದಿನವೂ ತೊಂದರೆ ಕೊಡುವವರೇ--ಉಪಾಯ ವಿಲ್ಲ. ಮತ್ತೆ ಅಪೀಲುಗಿಪೀಲು ಮಾಡುವದಿಲ್ಲವಷ್ಟೆ ? '

ದಿವಾಣನು ಗಂಭೀರನಾಗಿ ಹೇಳಿದನು, 'ಇದರಲ್ಲಿ ಇನ್ನೇನೂ ಮಿಸು ಗಲು ಸಹ ಬರುವಂತಿಲ್ಲ. ಆದರೆ ಚೌಧುರಿಯವರಿಗೆ ಹೊಸದೊಂದು ನೆವ ಹುಡುಕಿಕೊಳ್ಳಲು ತಡವಾಗುವದಿಲ್ಲ. ಅಲ್ಲದೇ ಅವರ ಮತ್ತು ನಮ್ಮ ಜಮೀನುದಾರಿಯ ಸೀಮೆಗಳು ಒಂದಕ್ಕೊಂದು ಹತ್ತಿಹೋಗಿರುವ ಮೂಲಕ ನಿರ್ವಿವಾದವಾಗಿ ನಡೆಯುವದೇ ಸಾಧ್ಯವಿಲ್ಲ. ವೃದ್ಧರಾದ ನಮ್ಮಿಬ್ಬರ ತರುವಾಯ ಹೊಸಬರಿಗೆ ಇದನ್ನೆಲ್ಲ ತಿಳಿದುಕೊಳ್ಳುವದೇ ಆಗಲಿಕ್ಕಿಲ್ಲ. ಆದುದ ರಿಂದ ನಾವು ಮೊದಲಿನಿಂದಲೇ-- '

ಯಜಮಾನನು ನಡುವೇ ತಡೆದು, 'ಆದುದರಿಂದಲೇ ಸುಧಾತಾಯಿಗೆ ಇದನ್ನೆಲ್ಲ ಕೇಳಿ ತಿಳಿಯಲು ಹೇಳಿದ್ದೇನೆ. ಆಮೋದ, ನಾವು ಇರು ಇರು ತ್ತಲೇ ಅರಿತುಕೊಳ್ಳದಿದ್ದರೆ ಕಡೆಗೆ ಅವಳಿಗೇ ತೊಂದರೆ. ಎಲ್ಲ ಚೆನ್ನಾಗಿ ಮನಸ್ಸುಕೊಟ್ಟು ಕೇಳು ತಾಯಿ ? ಕೇಳಿ ತಿಳಿದುಕೊಳ್ಳಲೂ ಪ್ರಯತ್ನಿಸು. '

ಆಮೋದಬಾಬುವು ಕೆಲವು ನಿಮಿಷ ನೀರವವಾಗಿ ಕುಳಿತನು. ಸಂತೋಷ ಬಾಬುವೂ ಭರದಿಂದ ಗುಡುಗುಡಿಯನ್ನು ಜಗ್ಗತೊಡಗಿದನು. ಆ ಮೇಲೆ ದಿವಾಣನು ಸಂತೋಷಬಾಬುವನ್ನು ನೋಡಿ ಹೇಳಿದನು, 'ನಿಮ್ಮೊಡನೆ ಕೆಲ ವೊಂದು ಮಾತು ಹೇಳಬೇಕೆಂದು ನನ್ನ ಇಚ್ಛೆ. ನೀವು ಅನುಮತಿ ಕೊಟ್ಟರೆ- '

'ಅದೇನು ಆಮೋದ ! ನೀನು ಈ ಬಗೆಯಾಗಿ ಒಮ್ಮೆಯೂ ಮಾತ ನಾಡಿದವನಲ್ಲ ! ಇಂದು ಹೀಗೇಕೆ ? ಚಿಕ್ಕ ತಮ್ಮನ ಹಾಗಿರುವ ನಿನ್ನ ಅಧಿ ಕಾರವು ಅಕ್ಷುಣ್ಣವಾಗಿಲ್ಲವೆ ? '

‘ ಇದೆ ! ಆದರೆ ವಿಚಾರಿಸಿ ನೋಡಿರಿ; ಈಶ್ವರದತ್ತ ಅಧಿಕಾರವೇ ಸಾಮಾನ್ಯ ಮನೋಮಾಲಿನ್ಯದಿಂದ ಲುಪ್ತವಾಗಿ ಹೋಗುವದಾದರೆ ಜಗತ್ತಿನಲ್ಲಿ ಇನ್ನಾವ ಅಧಿಕಾರದ ಗರ್ವವು ಉಳಿದೀತು ? ’

ಸಂತೋಷಬಾಬುವು ತುಸು ಸುಮ್ಮನಿದ್ದು ಆ ಮೇಲೆ ಹೇಳಿದನು, ‘ ಅಪ್ರಾಸಂಗಿಕ ಮಾತುಗಳು ಬೇಡ ಆಮೋದ ? ವ್ಯರ್ಥವಾಗಿ ಮನವನ್ನು ಕಲಕುವ ಕಾರಣವೇನು ? ಒಳ್ಳೇದು; ಕಲಕತ್ತೆಯಲ್ಲಿ ನಿಮ್ಮ ಬೀಗರ ಮನೆಗೆ ಹೋಗಿದ್ದೆಯಾ ? ಅವರೆಲ್ಲ ನೆಟ್ಟಗಷ್ಟೆ ? ’

‘ ಹೌದು ಹೋಗಿದ್ದೆ; ಅಲ್ಲಿ ಅನೇಕರ ಭೆಟ್ಟಿಯಾಯಿತು. ’

ಸಂತೋಷಬಾಬುವು ಮತ್ತೆ ತುಸು ನಿಂತನು. ಅನುಮಾನಿಸುತ್ತ ಅನು-ಮಾನಿಸುತ್ತ ಕೇಳಿದನು, ‘ ಅನೇಕರೆಂದರೆ ಯಾರು ಯಾರು ? ’

‘ ರಾಧಾಚರಣ---ಶಶಿಕಾಂತ---ನಮ್ಮ ಸುರೇಶನನ್ನೂ ಕಂಡೆ. ’

ಸಂತೋಷಬಾಬುವು ಪ್ರಸಂಗಾಂತರ ಮಾಡಲು ಪ್ರಯತ್ನಿಸಿದನಾದರೂ ಆವನ ಆದಮ್ಯ ಕಂಠದಿಂದ ಮೃದುವಾಗಿ ನಿರ್ಗತವಾಯಿತು---‘ ಹೇಗೆ ಇದ್ದಾನೆ ? ’

ದಿವಾಣನು ತಲೆಬಾಗಿಸಿ ಗಂಭೀರ ಕಂಠದಲ್ಲಿ ಹೇಳಿದನು, ‘ ಹೇಗಿರುವದೇನು ? ನೀವು ಆವನನ್ನು ಇರಿಸಬೇಕೆನ್ನುವ ಹಾಗೆಯೇ ಇದ್ದಾನೆ. ’

‘ ತಿಳಿಯಲಿಲ್ಲ ಆಮೋದ---ಅಂದರೆ ಬಹಳ ಸೊರಗಿದ್ದಾನೆಯೆ ? ’

‘ ಅಷ್ಟು ಸೊರಗಿರದಿದ್ದರೂ ಇನ್ನುಳಿದ ಅವಸ್ಥೆ ನೆಟ್ಟಗಿಲ್ಲ. ಕೆಲಸ ಹುಡುಕಿಕೊಂಡು ಅಡ್ಡಾಡುತ್ತಿರುವದನ್ನು ಕಂಡೆ. ’

‘ ಕೆಲಸ ಹುಡುಕುವನೇ ? ಮುಂದೆ ಓದುವದು ಆಗಿಲ್ಲ ಹಾಗಾದರೆ ? ’

‘ ಓದುವದು ಹೇಗೆ ? ಆ ಮೇಲೆ ಆವನಿಗೆ ನಾವು ಏನನ್ನೂ ಕಳಿಸಿಲ್ಲವಲ್ಲ ? ’

ಸಂತೋಷಬಾಬುವು ಇನ್ನೂ ಜೋರಾಗಿ ಗುಡುಗುಡಿಯನ್ನು ಎಳೆಯ ತೊಡಗಿದನು. ಅದನ್ನು ನಿಲ್ಲಿಸಿ ಸಹಸಾ ಸುಧೆಯನ್ನು ಉದ್ದೇಶಿಸಿ ಹೇಳಿದನು, ‘ ತಾಯೀ, ಬೀಸಣಿಕೆ ಇಟ್ಟುಬಿಡು; ಅಷ್ಟು ಜೋರಾಗಿ ಗಾಳಿ ಹಾಕಬೇಡ. ’

ಸುಧೆಯು ಕುಂಠಿತಳಾಗಿ ಬೀಸಣಿಕೆ ಇಟ್ಟುಬಿಟ್ಟಳು.

‘ ಕುಳಿತುಕೋ, ಏಳುವಿಯೇಕೆ ತಾಯಿ ? ’ ಮತ್ತೆ ಆವಳು ಕುಳಿತಳು.

ಸಂತೋಷಬಾಬುವು ಸುಮ್ಮನಿದ್ದದ್ದು ನೋಡಿ ದಿವಾಣನು ಕೆಮ್ಮಿ ಮತ್ತೆ ಹೇಳತೊಡಗಿದನು, ' ಇದರಿಂದ ನಿಮ್ಮದೇ ಸನ್ಮಾನ ಭಂಗವಾಗುವದು. ನಿಮ್ಮ ಸ್ನೇಹಕ್ಕೆ ಎರವಾಗಿ ಆಗದ ಅನುತಾಪವು, ಸುರೇಶನಿಗೆ ಅಭಾವದಿಂದ ಆಗ ಬಹುದು. ಆಗ ನಿಮ್ಮ ಬಳಿ ಕ್ಷಮಾಯಾಚನೆಗೆ ಅವನು ಬಂದರೂ ಒದ ಬಹುದು. ಆದರೆ ಅದರ ಮೂಲ ಕಾರಣ, ಸಾಮಾನ್ಯ ಅರ್ಥಾಭಾವವು ಮಾತ್ರ ! '

ಸಂತೋಷಬಾಬುವು ಕೇಳಿ ತಡೆದು, ' ಅದು ನಿಜ. ಅವನು ಏನಾದರೂ ಹೇಳಿದನೇ ? '

" ಇನ್ನೇನು ಹೇಳುವನು ? ನಾನೇ ಹೇಳಿದೆ, ' ನಡೆ ನನ್ನ ಸಂಗಡ; ಅವರು ಪೂರ್ಣ ಕ್ಷಮಿಸದಿದ್ದರೂ ಅಣುಮಾದರೂ ತಾಳ್ಮೆ ತೋರಬಹುದು ' ಎಂದು. ಅದಕ್ಕೆ ಅವನು, ' ತಂದೆಯು ಅಂಥ ಕ್ಷಮೆ ಬೇಡ ನನಗೆ. ಇಷ್ಟಿ ಷ್ಟಕ್ಕೆ ಒಪ್ಪಿದೆನಾದರೆ ನಾನವರ ಕುಪುತ್ರನಾಗುವೆನು. ಅವರು ಮೊದಲಿನಂತೆ ' ಸುರೇಶ ' ಎಂದು ಕರೆದರೇ ತಿರುಗಿ ಅವರ ಮಡಿಲಿಗೆ ಹೋಗುವೆ; ಇಲ್ಲ ದಿದ್ದರೆ ಆ ಮಡಿಲಿನ ಬದಲು ಅವರ ದಯೆ ನನಗೆ ಬೇಕಿಲ್ಲ ' ಎಂದನು. "

ಸಂತೋಷಬಾಬುವು ಕ್ಷೀಣವಾಗಿ ನಕ್ಕು, ' ತೇಜವಿನ್ನೂ ಇದೆ ! ' ಎಂದನು.

' ಅವನು ಇನ್ನಾರ ಮಗ ? ನಿಮ್ಮ ಮಗನಿಗೆ ಅಷ್ಟು ಇರಬೇಕಾದ್ದೆ. '

' ಹೋಗಲಿ. ಹಾಗಾದರೆ ನೀನೇ ಹೇಳಿದೆಯಲ್ಲ--ಹಣಕ್ಕಾಗಿ ಕ್ಷಮೆ ಬೇಡಲೂಬಹುದೆಂದು ? '

' ಭವಿಷ್ಯದ ಮಾತು ಹೇಳಿದೆ. ಅದಲ್ಲದೇ ವಿಚಾರಿಸಿ ನೋಡಿರಿ. ನಿಮ್ಮ ಮಗನಾಗಿ ಊಳಿಗ ಗೀಳಿಗ ಎಂದು ಅನ್ನ ನೀರಿಲ್ಲದೆ ಆ ಕಲಕತ್ತೆಯ ನಗರ ದಲ್ಲಿ ತಿರುಗತೊಡಗಿದರೆ ಅದು ನಿಮ್ಮ ಸನ್ಮಾನ--ಸಂಭ್ರಮಕ್ಕೆ ಹಾನಿಕರ. ಮನೆಯ ವಿವಾದವನ್ನು ಪರರೇಕೆ ಅರಿಯಬೇಕು ? ಅವನು ನಿಮ್ಮನ್ನು ಉಪೇಕ್ಷಿಸಿದ್ದು ಉಭಯತರಿಗೂ ಲಜ್ಜಾಸ್ಪದವೇ. ಅದು ಹೊರಗೆ ಕರ್ಣಾ ಕರ್ಣಿಯಾಗಿ ಹಬ್ಬದ ಹಾಗೆ ನೋಡಿಕೊಂಡು, ಸ್ವಂತದ ಸಂಭ್ರಮದ ರಕ್ಷಣೆ ಗಾಗಿ ಅವನಿಗೆ ಉಚಿತವೆನಿಸಿದಷ್ಟು ನಿಯಮಿತ ಸಹಾಯ ಕಳಿಸುವದು ಉತ್ತಮ. ಇಷ್ಟರ ಮೇಲೆ ಅವನನ್ನು ಮನಸಾ ಕ್ಷಮಿಸುವದಾಗದಿದ್ದರೆ ಎಂದೂ ಅವನ ಮುಖಾವಲೋಕನವನ್ನೇ ಮಾಡಬೇಡಿರಿ. ಅವನು ಕೇಳಿದ

ಅಧಿಕಾರವನ್ನು ಬೇಕಾದರೆ ಅವನಿಗೆ ಕೊಡಬೇಡಿರಿ. ಇದೇ ಅವನಿಗೆ ತಕ್ಕ ಶಾಸನ! ಹಣ ಕಳಿಸುವದನ್ನು ನಿಲ್ಲಿಸಿ ಅವನ ಮನಸ್ಸಿಗೆ ನೋವನ್ನುಂಟು ಮಾಡುವೆನೆಂಬುವದು ತಪ್ಪು. ಅವನು ಇನ್ನಾರ ಮಗನೂ ಅಲ್ಲ. ಅದ್ದರಿಂದ ಅವನನ್ನು ಶಿಕ್ಷಿಸುವ ರೀತಿಯೇ ಬೇರೆ.'

ಸಂತೋಷಬಾಬುವು ಎದ್ದು ಕುಳಿತು ಹೇಳಿದನು, 'ಮಾತಿನಲ್ಲಿ ರಾತ್ರಿ ಬಹಳವಾಗಿ ಹೋಯಿತು. ಇನ್ನು ಬೇಡ. ಹೋಗು, ವಿಶ್ರಾಂತಿ ತೆಗೆದುಕೊ. ಪಥಶ್ರಮದಿಂದ ಬಳಲಿರುವಿ. ತಾಯೀ, ಇಂದು ಇನ್ನೇನು ಹಾಲು ಬೇಡ. ನೀನೂ ಹೋಗಿ ಮಲಗು. ಯಾರನ್ನಾದರೂ ಕಳಿಸು, ದೀವಗೀವ ದೂರ ಇರಿಸಲಿ.'

ಸುಧೆಯು ಎದ್ದು ನಿಂತು ಮೃದುವಾಗಿ ಕೇಳಿದಳು, 'ಹಾಲು ತೆಗೆದು ಕೊಳ್ಳುವದಿಲ್ಲವೆ?'

'ಇಲ್ಲ, ಒಳ್ಳೇದು ಕಳಿಸಿಕೊಡು ಯಾರಿಂದಾದರೂ. ಆಮೋದ, ಇನ್ನೂ ನಿನ್ನ ಊಟವಾಗಿರಲಿಕ್ಕಿಲ್ಲ?'

'ಇಲ್ಲ, ನೀವು ಅದಕ್ಕಾಗಿ ಮಿಡುಕಬೇಕಾಗಿಲ್ಲ. ನೀವು ಮಲಗಿರಿ.'

ಆಮೋದಬಾಬುವು ಹೊರಟು ಹೋದನು. ಸಂತೋಷಬಾಬುವು, ಸುಧೆಯು ಇನ್ನೂ ನಿಂತುಕೊಂಡಿರುವದನ್ನು ನೋಡಿ, 'ಹೋಗು ವಧು ಮಾತಾ, ಹೋಗಿ ಉಂಡು ಮಲಗು' ಎಂದು ಹೇಳಿದನು. ಮಾವನವರ ಆದೇಶ ಸೂಚಕ ಕಂಠಸ್ವರ ಕೇಳಿ ವಧು ಹೆಚ್ಚೇನೂ ಮಾತನಾಡದೆ ಧೀರ ಗತಿಯಿಂದ ಹೊರಟುಹೋದಳು.

ಸಂತೋಷಬಾಬುವು ಭೃತ್ಯನಿಗೆ ಇಂದು ಎಲ್ಲ ದೀಪಗಳನ್ನು ಶಾಂತ ಮಾಡಲು ಹೇಳಿ ಮಲಗಿದನು. ಕತ್ತಲೆಯ ಕೋಣೆಯಲ್ಲಿ ಮಲಗಿ ನಿದ್ರಾ ದೇವಿಯ ಉಪಾಸನೆ ಮಾಡಿದನಾದರೂ ಇಂದು ಅವಳು ಒಲಿಯಲಿಲ್ಲ. ಅವನ ವಿನಿದ್ರ ಮುದ್ರಿತ ನೇತ್ರಗಳೆದುರು ಹಿಂದಿನ ಎಷ್ಟೋ ಘಟನೆಗಳು ಚಿತ್ರಿತವಾಗ ತೊಡಗಿದವು. ತನ್ನ ಪ್ರಥಮ ಯೌವನ, ಪತ್ನಿಯ ಅಮಲ ಪ್ರೇಮ, ಹೆಂಡತಿಗೆ ಮಡಿಲಲ್ಲಿ ಮಗುವಿಲ್ಲದ ದುಃಖ; ಕೊನೆಗೊಮ್ಮೆ ಒಂದು ಸ್ನೇಹಪುತ್ಥಳಿಯ ಆವಿರ್ಭಾವ. ಇದೆಲ್ಲ ಕಣ್ಣು ಮುಂದೆ ಒಂದೊಂದಾಗಿ ಹಾದು ಹೋದವು. ಅಂದಿನ ಆ ಹರ್ಷೋಚ್ಛ್ವಾಸದ ಸ್ಮೃತಿಯು ಇಂದೂ ಮೈ ಜುಮ್ಮೆನ್ನಿಸುತ್ತದೆ. ಅಂದಿನ ಆ 'ಪುತ್ರಗಾತ್ರಸ್ಯ ಸಂಸ್ಪರ್ಶಃ' ಇಂದೂ ಸರ್ವಾಂಗಕ್ಕೆ ಸುಖ ಕೊಡುತ್ತಿದೆ.

ಮನುಷ್ಯನು ಒಮ್ಮೊಮ್ಮೆ ನೆನಹಿನ ಬೆನ್ನು ಹಿಡಿದು ಹುಚ್ಚನಾಗುತ್ತಾನೆ. ಅಂದಿನ ಸುಖ–ದುಃಖದ ಆಟವು ಎಂದೋ ಮುರಿದು ಹೋಗಿದೆ; ಜೀವನವು ಹೊಸ ಸೆಳವಿಗೆ ಸಿಕ್ಕು ಒಂದು ಬಗೆಯಾಗಿ ಹರಿದು ಹೋಗುತ್ತಿದೆ. ಆದರೂ ಹೊಸ ಜೀವನದ ತೊರೆಯಲ್ಲಿ ನೆನಹು ಹೊಸ ತೆರೆಗಳನ್ನು ತೂರದೇ ಬಿಡುವದಿಲ್ಲ. ಅದು ಒಮ್ಮೊಮ್ಮೆ ನಗಬೇಕಾದಲ್ಲಿ ಅಳಿಸಿ ಬಿಡುವದು, ಅಳಬೇಕಾದಲ್ಲಿ ನಗಿಸಿ ಬಿಡುವದು.

ಹೀಗೆ ಸಂತೋಷಬಾಬುವಿನ ನೆನಹಿನ ಮುನ್ನೀರಲ್ಲಿ ಬಗೆಬಗೆಯ ತೆರೆಗಳು ತೂರಿ ಬರತೊಡಗಿದ್ದವು. ಪುತ್ರೋತ್ಸವದ ಸಂಭ್ರಮದಲ್ಲಿರುವಾಗಲೇ ಕಾಲಚಕ್ರವು ಅವನ ಹೃದಯಕ್ಕೆ ಅತಿ ಭೀಕರ ಆಘಾತವನ್ನು ತಗುಲಿಸಿ ಉರುಳಿ ಹೋಯಿತು. ಆಗ ಮಾತೃಹೀನ ಶಿಶುವನ್ನು ಎದೆಗವಚಿಕೊಂಡು ತಾನೇ ತಾಯಿಯೂ ಆಗಿ ಲಾಲನೆ ಪಾಲನೆ ಮಾಡಿ ಬೆಳೆಸಿ ದೊಡ್ಡವನನ್ನಾಗಿ ಮಾಡಿದನು. ಇಂದು ಮತ್ತೆ ಕಾಲಚಕ್ರಕ್ಕೆ ಶಿಲುಕಿ ಘಟನೆಗಳು ಪಲ್ಲಟಿಸಿ ಹೋಗಿವೆ! ಇವೆಲ್ಲ ಮರೆತು ನಿದ್ದೆಹೋಗಲು ಅವನಿಂದ ಆಗಲಿಲ್ಲ. ತುಸು ನಿದ್ದೆಹತ್ತಿದರೂ ಅದು ಸ್ವಪ್ನಮಯ; ಸ್ವಪ್ನವಾದರೂ ಶಿಶುವಿನ ಬಾಲ್ಯಸ್ಮೃತಿಮಯ.

ನಸುಕಿನಲ್ಲಿ ಎದ್ದು ಎಂದಿನಂತೆ ಎಲ್ಲ ಕಾರ್ಯಗಳನ್ನು ಒಂದೂ ಬಿಡದೆ. ಮಾಡುತ್ತಾ ಹೋದನು. ಮಧ್ಯಾಹ್ನ ಯಥಾರೀತಿಯಾಗಿ ಊಟ ಮಾಡಿದನು. ಸುಧೆಯು, ಅವನ ಅಸಾಧಾರಣ ಗಂಭೀರ ಮುಖವನ್ನು ನೋಡಿ, ಯಾವ ಮಾತನ್ನೂ ಆಡದೆ ತನ್ನ ಕೆಲಸವನ್ನೆಲ್ಲ ಮಾಡಿ ಮುಗಿಸಿದಳು. ಆ ದಿನವೆಲ್ಲ ಅವನು ಯಾರೊಡನೆಯೂ ಚನ್ನಾಗಿ ಮಾತನಾಡಲಿಲ್ಲ. ಭಾವವರಿತು ದಿವಾಣನೂ ಅಂದು ದೂರದೂರವೇ ಇದ್ದುಕೊಂಡನು.

ಸಂಜೆಗೆ ನಿಯಮದಂತೆ ಸಂಧ್ಯಾಹ್ನಿಕ ಹಾಗೂ ಜಲಯೋಗವಾದ ನಂತರ ಸಂತೋಷಬಾಬುವು ದಿವಾಣನನ್ನು ಕರೆಕಳಿಸಿದನು. ಆದೇಶದಂತೆ ವಧುವೂ ಕೈಯಲ್ಲಿ ಬೀಸಣಿಕೆ ಹಿಡಿದುಕೊಂಡು ಶಯ್ಯಾಪ್ರಾಂತದಲ್ಲಿ ಕುಳಿತುಕೊಂಡಳು. ಒಂದೆರಡು ಅವಾಂತರದ ಮಾತುಕಥೆಗಳಾದ ಮೇಲೆ ಸಂತೋಷಬಾಬುವು ದಿವಾಣನನ್ನು ನೋಡದೆ ಒಂದು ವರ್ತಮಾನಪತ್ರವನ್ನು ನೋಡುತ್ತ ನೋಡುತ್ತ ಹೇಳಿದನು, ‘ನಾನು ಎಲ್ಲಾ ಪರಾಮರ್ಶಿಸಿ ನೋಡಿದೆನು. ನನ್ನ ಸಂಭ್ರಮ ಸಂರಕ್ಷಣೆಗಾಗಿ ಅವನಿಗೆ ಮಾಸಾಶನ ಕೊಡುವದು ಯೋಗ್ಯ.’

ದಿವಾಣನು ಒಂದು ಕ್ಷಣ ಮೌನವಾಗಿದ್ದು ಹೇಳಿದನು, ‘ಒಳ್ಳೇದು, ಇಷ್ಟೇ ಕರ್ತವ್ಯವೆಂದು ನಿಮಗೆ ತೋರಿದ್ದರೆ ಹಾಗೇ ಆಗಲಿ. ಆಮೇಲೆ ಅದು ಸ್ವೀಕೃತವಾದೀತೋ ಇಲ್ಲವೋ ಎಂಬುದು ಮುಂದಿನ ಮಾತು.’

' ಮುಂದಿನ ಮಾತಲ್ಲ; ನನ್ನ ಸನ್ಮಾನ ಸಂಭ್ರಮಕ್ಕಾಗಿ ಅವನು ಅದನ್ನು ಸ್ವೀಕರಿಸಲೇಬೇಕು. ವಧುಮಾತಾ, ನಿನ್ನ ಅಭಿಪ್ರಾಯವನ್ನು ತಿಳಿಯ ಬಯಸುತ್ತೇನೆ. ಏನೆಂಬುದನ್ನು ನಾಚಿಕೊಳ್ಳದೇ ಸ್ಪಷ್ಟವಾಗಿ ಹೇಳು. ಮಾಸಾಶನವನ್ನು ಕೊಡುವದು ಯೋಗ್ಯವಷ್ಟೆ ?'

ಸುಧೆಯು ಮೆಲ್ಲಮೆಲ್ಲಗೆ ತನ್ನ ನತಮುಖವನ್ನು ಮಾವನವರ ದೃಷ್ಟಿ-ಸಮ್ಮುಖದಲ್ಲಿ ಎತ್ತಿ ಹಿಡಿದು ಸ್ಥಿರ ಕಂಠದಿಂದ, ' ಅಲ್ಲ ' ಎಂದು ಹೇಳಿದಳು.

' ಅಲ್ಲ ? ಅವನಿಗೆ ಏನನ್ನೂ ಕೊಡುವದು ಉಚಿತವಲ್ಲವೆ ? ನೀನು ಹೀಗೆ ಹೇಳುವಿಯೆಂದು ನಾನು ತಿಳಿದಿರಲಿಲ್ಲ. '

' ಅಲ್ಲ ಪಿತಾ, ಕ್ಷಮಿಸಬಲ್ಲಿರಾದರೆ ಕ್ಷಮೆಯನ್ನೇ ನೀಡಿರಿ. ಮನಸ್ಸು ಮಾಡಿದರೆ ನಿಮಗದು ಸಹಜ. '

' ಓಃ— ಅದನ್ನೇ ಹೇಳಿದೆಯೇನು ? ಅಲ್ಲ, ಅದು ಅಷ್ಟು ಸಹಜವಿಲ್ಲ. ಹಾಗಿದ್ದರೆ ಈ ಬಗೆಯ ಕಠಿಣ ಶಾಸನದ ಆಯೋಜನೆ ಮಾಡಲು ಬಯಸುದ್ದೆನೆ ? '

ದಿವಾಣನು, ' ಇದು ನಿಮ್ಮಂಥ ತಂದೆಗೆ ತಕ್ಕಂತಲ್ಲ ' ಎಂದನು.

' ನನ್ನಂಥ ತಂದೆಗೇ ತಕ್ಕಂತಹದು. ನನಗೇ ಇದು ಸಂಭವ ' ಎಂದು ಹೇಳಿ ವಧುವನ್ನುದ್ದೇಶಿಸಿ, ' ತಾಯೀ ! ನೀನು ಅವನನ್ನು ಕ್ಷಮಿಸಬಲ್ಲೆಯಾ ? ಹೇಳು, ನೀನು ಅವನನ್ನು ಮನ್ನಿಸಿರುವೆನೆಂದು— ನಾನೂ ಈಗಲೇ ಅವನನ್ನು ಕ್ಷಮಿಸುವೆ. ಆದರೆ, ಹೊಟ್ಟೆಯಲ್ಲೊಂದು ಹೊರಗೊಂದು ಹೇಳಬೇಡ.'

ದೃಢ ಪದಗತಿಯಿಂದ ಸುಧೆಯು ಎದ್ದು ಹೋದಳು. ಅವಳ ಬಾಷ್ಪರುದ್ಧ ಕಂಠದಿಂದ ' ಇಲ್ಲ ' ಎಂಬ ಶಬ್ದವು ನುಗ್ಗಿ ನುಗ್ಗಿ ಹೊರಬರಲು ಹಾತೊರೆಯಿತು.

ಮರುದಿನ ಸುರೇಶನ ಹೆಸರಿನಲ್ಲಿ ದಿವಾಣನು ಒಂದು ನೂರು ರೂಪಾಯಿಗಳನ್ನು ಕಲಕತ್ತೆಗೆ ಕಳಿಸಿಕೊಟ್ಟನು. ನಾಲ್ಕಾರು ದಿನಗಳ ಮೇಲೆ ಅವು ತಿರುಗಿ ಬಂದವು. ಜೊತೆಗೆ ಸುರೇಶನ ಹಸ್ತಾಕ್ಷರವುಳ್ಳ ಒಂದು ಸಂಕ್ಷಿಪ್ತ ಕಾರ್ಡೂ ಬಂದಿತು. ಸುರೇಶನು ಬರೆದಿದ್ದಾನೆ—' ಕಾಕಾ, ನಿಮ್ಮ ಸ್ನೇಹವನ್ನು ಚಿರದಿನವೂ ನೆನಸಿಕೊಳ್ಳುವೆ. ನೀವು ನನಗಾಗಿ ತಂದೆಯವರೊಂದಿಗೆ ಪರಾಮರ್ಶಿಸಿ ಈ ಯೋಜನೆ ಮಾಡಿರುವಿರಾಗಿ ತಿಳಿದಿದ್ದೇನೆ. ನಿಮಗೆ ಧನ್ಯವಾದಗಳು. ನಾನು ಈ ಸ್ನೇಹಕ್ಕೆ ಅಯೋಗ್ಯನು.'

ಸಜಲನಯನನಾಗಿ ದಿವಾಣನು ಪತ್ರವನ್ನು ಯಜಮಾನನ ಕೈಗೆ ಕೊಟ್ಟನು.

ತತ್‍ಕ್ಷಣವೇ ಸಂತೋಷಬಾಬುವು ಒಂದು ಚೂರು ಕಾಗದದಲ್ಲಿ ಬರೆದು ಕೊಟ್ಟನು--'ನಾನು ಜಮೀನುದಾರ ಸಂತೋಷ ಗುಪ್ತ, ನನ್ನ ಪುತ್ರನು ನೀನೆಂದು ಎಲ್ಲರೂ ಬಲ್ಲರು. ಆದ ಕಾರಣ ನನ್ನ ಮಾನಸಂಭ್ರಮವು ಕೆಲ ಮಟ್ಟಿಗೆ ನಿನ್ನನ್ನೂ ಅವಲಂಬಿಸಿದೆ. ನೀನು ಯಾವದೇ ಸಣ್ಣ ನೌಕರಿಯಲ್ಲಿ ತೊಡಗಿಕೊಂಡರೆ ಆ ಅವಮಾನವು ನನಗೂ ತಪ್ಪುವದು. ಅತಏವ, ನಿನ್ನ ಸ್ಥಿತಿ ಸುಧಾರಿಸುವ ವರೆಗೆ ನಿನ್ನ ವೆಚ್ಚಕ್ಕೆಂದು ನೂರು ರೂಪಾಯಿಗಳು ಪ್ರತಿತಿಂಗಳು ಇಲ್ಲಿಂದ ಹೋಗುವವು. ಮತ್ತು ನೀನು ಅವನ್ನು ಸ್ವೀಕರಿಸಲೇಬೇಕು. ಇಷ್ಟಲ್ಲದೆ ನಿನ್ನೊಡನೆ ನನ್ನ ಯಾವ ಸಂಬಂಧವೂ ಇಲ್ಲ. ಇತಿ--

—ಶ್ರೀ ಸಂತೋಷ ಗುಪ್ತ'

ಕೆಲದಿನಗಳ ಮೇಲೆ ಸಂತೋಷಬಾಬುವಿಗೆ ಸುರೇಶನಿಂದ ಒಂದು ಪತ್ರವು ಬಂದಿತು. ಅವನು ಅದನ್ನು ಆವೇಗ ಕಂಪಿತ ಹಸ್ತದಿಂದ ಬಿಚ್ಚಿ ಓದಿದನು-- 'ನಿಮ್ಮ ಸನ್ಮಾನ ರಕ್ಷಣೆಗಾಗಿ ನನ್ನ ಮಸ್ತಕನ್ಯಸ್ತ ಶಾಸ್ತಿಭಾರವನ್ನು ನಾನು ಶಿರಸಾವಹಿಸಿದ್ದೇನೆ. ನಿಮ್ಮಿಂದ ಪರಿತ್ಯಕ್ತನಾಗಿಯೂ ನಿಮ್ಮ ಅನ್ನದಿಂದಲೇ ನಾನು ಇನ್ನು ಮೇಲೂ ಪರಿಪುಷ್ಟನಾಗುತ್ತ ಇದ್ದುಕೊಳ್ಳುವೆ.

—ಸುರೇಶ'

ಪತ್ರವನ್ನು ಮತ್ತೆ ಮತ್ತೆ ಓದಿ, ಅದನ್ನು ಬಹು ಜೋಪಾನವಾಗಿ ಪೆಟ್ಟಿಗೆಯಲ್ಲಿ ತೆಗೆದಿಟ್ಟು, ಸಂತೋಷಬಾಬುವು ಬಹು ದಿನದ ಶುಷ್ಕ ಪ್ರಶಾಂತ ನಯನಗಳಿಂದ ದೊಡ್ಡ ದೊಡ್ಡ ಎರಡು ಹನಿ ಕಂಣೀರು ಮಿಡಿದನು.

೮

ಸುರೇಶನು ಒಮ್ಮನಸ್ಸಿನಿಂದ ಓದಿ ಒಂದುವರೆ ವರ್ಷದಲ್ಲಿ ತನ್ನ ಮೆಡಿಕಲ್ ಕಾಲೇಜಿನ ಶಿಕ್ಷಣ ಸೇತುವೆಯನ್ನು ದಾಟಿ ನಿಂತನು. ಇನ್ನು ಉಳಿದದ್ದೆಂದರೆ ತನ್ನ ಮುಂದಿನ ಜೀವನವನ್ನು ಕರ್ಮರತವಾಗಿಸುವದು.

ಸ್ನೇಹಳು ಇನ್ನೂ ಮೊದಲಿನಂತೆಯೇ ಇದ್ದಾಳೆ. ಅಷ್ಟೇ ಸರಲ ಸ್ವಭಾವದವಳು, ಅಷ್ಟೇ ಅನಭಿಜ್ಞಳು, ಅಷ್ಟೇ ನಿರ್ಭರಶೀಲಳು! ಸುರೇಶನು

ಅವಳನ್ನು ಒಂದು ಕೈಯಿಂದ ಸಾವರಿಸಿಕೊಂಡು ಇನ್ನೊಂದರಿಂದ ಏಕಾಗ್ರನಾಗಿ, ಸಂಸಾರ ಸ್ರೋತವನ್ನು ಈಸಿ ಈಸಿ ಪಾರಾಗಲು ಹೆಣಗಾಡುತ್ತಿದ್ದಾನೆ.

ಈ ಮಧ್ಯದಲ್ಲಿ ಸುರೇಶನಿಗೆ ಒಬ್ಬ ಹೊಸ ನೆಂಟನು ಅಂಟಿಕೊಂಡನು. ಆವನ ಹೆಸರು ಕಾಲೀಪದ. ಅವನು ಸ್ನೇಹಳ ತಂದೆಯ ಸೋದರತ್ತೆಯ ಅಳಿಯನ ಭಾವ ತಮ್ಮ ಸಂತತಿ–ಸಂಘಾನ ಹಚ್ಚಿಕೊಂಡು ಬಂದಿದ್ದಾನೆ. ಆವನು ಈ ಸಂಸಾರದ ಅನಭಿಜ್ಞ ದಂಪತಿಗಳ ಆಶ್ರಯವಾದದ್ದರಿಂದ ಇತ್ತ, ಸ್ನೇಹಳು ತನ್ನ ಕಾಲೀಪದನ ಸಹಾಯದಿಂದ ಸಂಸಾರಕರ್ಮದಲ್ಲಿ ಅಭಿಜ್ಞತೆಯನ್ನು ಆರ್ಜಿಸುತ್ತಿದ್ದಳು. ಅತ್ತ ಸುರೇಶನು ನಿಶ್ಚಿಂತನಾಗಿ ತನ್ನ ಓದು ಬರೆಹದಲ್ಲಿ ತೊಡಗಿಕೊಳ್ಳುವ ಅವಕಾಶ ಪಡೆದನು.

ನಿಜವನ್ನು ಒಪ್ಪಿ ಹೇಳುವದಾದರೆ ಕಾಲೀಪದನು ಇವರಿಗೆ ಬಹಳ ಸಹಾಯಮಾಡಿದ್ದನು. ಸ್ನೇಹಳ ಸಂಸಾರದ ಭಾರವನ್ನು ತಾನೇ ಹೊತ್ತು ಅವನು ಸುರೇಶನ ಶಿಕ್ಷಣಕ್ಕೆ ಸಾಕಷ್ಟು ಅವಕಾಶ ಕಲ್ಪಿಸಿಕೊಟ್ಟಿದ್ದನು. ಆವನ ಸುನಿಯಮಿತ ವ್ಯವಸ್ಥೆಯಿಂದ ಇವರಿಗೆ ಯಾವ ಬಗೆಯ ಅಭಾವವೂ ತೋರಲಿಲ್ಲ. ಕಾಲೀಪದನ ಅನೇಕ ಲೋಪದೋಷಗಳನ್ನು ಗಣನೆಗೆ ತಂದುಕೊಳ್ಳದೇ ಆವನ ಸಹಾಯಕ್ಕಾಗಿ ಸುರೇಶನು ಅತ್ಯಂತ ಕೃತಜ್ಞನಾಗಿದ್ದನು.

* * * *

ವಸಂತಮಾಸ; ವಸಂತನು ಆಮ್ರ ಮುಕುಲಗಳನ್ನು ಮುಂದಿಟ್ಟು, ಬಕುಲ ಸೌರಭವನ್ನು ಮಲ್ಲಿಗೆಯ ಕಂಪಿನಲ್ಲಿ ಬೆರಸಿ ತನ್ನ ಜೊತೆಗಿರಿಸಿ, ಮಲಯದ ಗಾಳಿಗೆ ಹೊತ್ತ ಉತ್ತರೀಯದ ಅಂಚಲವನ್ನು ಬೀಸಿ ಜನ ಮನವನ್ನು ಚಂಚಲಗೊಳಿಸಿ, ಅಶೋಕದ ಅಡಿಯಲ್ಲಿ ತಂಗುತ್ತ, ತರಗೆಲೆಗಳಲ್ಲಿ ತೇಲುತ್ತ, ಪಲಾಶದ ತುದಿಯಲ್ಲಿ ಶಿಖಾಗತಿಯನನುಕರಿಸಿ ಕುಣಿದು ಮಣಿದು ಸರಾಗವಾಗಿ ಬರುತ್ತಿದ್ದಾನೆ. ಪಲಾಶದ ಶಾಖಾ ಶಿಖದಲ್ಲಿ ಕುಳಿತು ಕೋಗಿಲೆ ಅನರ್ಥಕವಾಗಿ ಯಾರನ್ನೋ ಕರೆಕರೆದು ಕೂಗುತ್ತದೆ– ಸಂಗಿನಿಯನ್ನೇ ಇರಬೇಕು. ಆದು ಓ ಕೊಡಲೊಲ್ಲದು. 'ಕು–ಊ ಕು–ಊ '— ಕಿಡಿಕೆಯೊಳಗಿಂದ ಒಂದು ಕೋಮಲ ತರುಣ ಕಂಠವು ಕೋಕಿಲೆಯನ್ನು ಅಣಗಿಸಿ ಕೂಗಿತು; ಮತ್ತು ಒಡನೆಯೇ ಒಂದು ಮಧುರ ಮುಖವು ಕಿಡಿಕಿಯಲ್ಲಿ ಕಾಣಿಸಿಕೊಂಡಿತು. ಕೋಗಿಲೆ ಅತ್ತ ಕಂಣೆತ್ತಿ ಸಹ ನೋಡದೆ ಮೊದಲಿನಂತೆ ಕೂಗಿತು 'ಕು–ಊ.' ಆ ಎಳೆ ಮೊಗವು ಕೆಂದುಟಿಗಳೆರಡನ್ನು ನವಿನಗೆಯಿಂದ ತೊಡೆದು ಸಲೀಲವಾಗಿ ಮತ್ತೆ 'ಕು–ಊ' ರವ ಮಾಡಲು ಈ ಸಲ ಮಾತ್ರ

ಕೋಗಿಲೆಗೆ ಸಿಟ್ಟು ಬಂತು! ಅದು ಚೀತ್ಕಾರ ಮಾಡಿ ಮಾಡಿ ಕೂಗಲು ಅಣಕ ಸ್ವರವೂ ಇನ್ನೂ ಉಚ್ಚವಾಗಿ ಹೋಯಿತು. ಈ ಸೆಣಸಾಟದಲ್ಲಿ ಕೊನೆಗೆ ಕೋಗಿಲೆಯೇ ಬೇಸತ್ತು ಸೋಲೊಪ್ಪಿ ಸುಮ್ಮನಾಯಿತು.

ಹಿಂದಿನಿಂದ ಸುರೇಶನು ಎರಡೂ ಕೈಗಳಿಂದ ಮೆಲ್ಲಗೆ ಸ್ನೇಹಳ ಗಲ್ಲ ಹಿಡಿದು ನಗುತ್ತ ಹೇಳಿದನು, 'ಕೋಕಿಲೆಯನ್ನು ಕೆಣಕಿ ಕೆರಳಿಸಿ ಬಿಟ್ಟೆಯಲ್ಲ? ಮೊದಲೇ ಅದರ ಪ್ರಿಯುಳು ಓಗೊಡಲಿಲ್ಲ. ಅದರಲ್ಲಿ ನಿನ್ನ ಈ ಅತ್ಯಾಚಾರ ಬೇರೆ. ಅದರ ಅವಸ್ಥೆ ಏನಾಗಬೇಕು?'

ಸ್ನೇಹಳು ಮುಖ ಬಿಡಿಸಿಕೊಂಡು ನಗುನಗುತ್ತ ಹೇಳಿದಳು, 'ಹಾಗಾದರೆ ಆಗಿನಿಂದ ಹೀಗೇಕೆ ಒದರಿ ಒದರಿ ಸಾಯುವದು? ಈಗಲಾದರೂ ಸುಮ್ಮನಾಗಬೇಕಾಯಿತಲ್ಲ!'

'ಅದು ಒದರಿಕೊಂಡರೆ ನಿನ್ನದೇನು? ನೀನೇನು ಕಾಳಿದಾಸನ ವಿರಹಿಣಿಯೋ? ಅದು ತನ್ನ ಸ್ವರಶರದಿಂದ ನಿನಗೆ ಗುರಿಯಿಟ್ಟಿತೆ?

ನಲ್ಲನಿಲ್ಲದೆ ಜೀವ, ನಿಲ್ಲಲೊಲ್ಲದು ದೇವ!
ಎಲ್ಲಿರುವ ಬಲ್ಲಿರಾ ನನ್ನ ಕಾವ

ಎನ್ನುವ ಹಾಗೆ ನಿನ್ನ ಸ್ಥಿತಿಯಿಲ್ಲವಷ್ಟೆ? ನಿನ್ನ ಕಾವನು ಈಗ ನಿನ್ನ ಬಳಿಯೇ ನಿಂತಿದ್ದಾನೆ. ಎಂದಮೇಲೆ ಆ ಬಡಪ್ರಾಣಿಯ ಮೇಲೆ ಅಷ್ಟೇಕೆ ಸಿಟ್ಟು?'

'ಏನೇನೋ ಅಷ್ಟೊಂದು ಹೇಳಿದಿಯಲ್ಲ; ಅದರಲ್ಲೊಂದೂ ನನಗೆ ತಿಳಿಯಲಿಲ್ಲ. ಆದರೆ ಆ ಹಕ್ಕಿ ಬಹಳ ಕೆಟ್ಟದು. ನೀನು ಹೇಳಿಕೊಟ್ಟ ಹಾಡನ್ನು ಎಷ್ಟೋ ಕಷ್ಟಪಟ್ಟು ಗಟ್ಟಿಮಾಡಿಕೊಂಡು ಮನಸ್ಸಿನಲ್ಲಿ ಅಂದುಕೊಳ್ಳ ಹೋಗುತ್ತೇನೆ. ಆ ಹಾಳು ಹಕ್ಕಿ ನೂರು ಬಾರಿ ನನ್ನ ಕಿವಿಯಲ್ಲಿ ಚೀರಿ ಚೀರಿ ಸಾಯಬೇಕೆನ್ನುತ್ತದೆ!'

'ಸಖೀ! ಸಹಿಸು ಸಹಿಸು ಇನ್ನು ಕೆಲದಿನ ಮಾತ್ರ. ಅದೇನು ಅನುದಿನವೂ ಕೂಗುವ ಹಕ್ಕಿಯಲ್ಲ.'

'ಪೇಚು ನಿಜವಾಗಿಯೂ! ಕೋಗಿಲೆಗೆ ಅಣಗಿಸಿದರೆ ಕಣ್ಣು ಬರುವವಂತೆ. ಛೀ! ಹಾಗೆ ಅಣಗಿಸಬಾರದಿತ್ತು!'

ಸುರೇಶನು ಅವಳನ್ನು ಎಳೆದುಕೊಂಡು ಒಂದು ಕೋಚಿನ ಮೇಲೆ ಕೂರಿಸಿ ತಾನೂ ಕುಳಿತು 'ಯಾವ ಹಾಡನ್ನು ಗಟ್ಟಿ ಮಾಡುತ್ತಿದ್ದಿ?' ಎಂದು ಕೇಳಿದನು.

‘ ಅದೇ ನಿನ್ನ ಆ ಹಾಡನ್ನು— ’

‘ ಹಾಗೆಂದರೆ ? ಯಾವುದದು ? ’

‘ಅದೇ ಆ ಹಾಡು, ‘ ಪ್ರತಿ ರಜನಿ ರಚಿಸಲಿನ್ನೆಷ್ಟು ಸಖಾ ರಚಿಸಲಿನ್ನೆಷ್ಟು ಶಯನವನು ’

‘ ಅದು ನನ್ನದೆಂದೆಯಾ ? ಕೇಳಿದವರು ಈಗಲೇ ಬಡಿಗೆ ತೆಗೆದುಕೊಂಡು ನನ್ನ ಬೆನ್ನಟ್ಟಿ ಬಂದಾರು. ’

‘ ಒಳ್ಳೇದು, ಆ ಹಾಡಿನ ಮೇಲೆ ‘ ವಿರಹ ’ ಎಂದೇಕೆ ಬರೆದಿದೆ ? ವಿರಹ ಏತರ ಹೆಸರು ? ’

‘ ಅದೂ ಗೊತ್ತಿಲ್ಲವೆ? ಹಾ ಹತೋಸ್ಮಿ ! ನಿಜವಾಗಿಯೂ ಗೊತ್ತಿಲ್ಲವೆ ?’

ಸ್ನೇಹಳು ತಿಳಿದಳು— ಇದನ್ನು ಅರಿಯದಿದ್ದದ್ದು ಅತಿ ದಡ್ಡತನದ ಲಕ್ಷಣ ! ಎಂದೇ ಸಂಕೋಚಗೊಂಡು ನಾಚಿ ಕೆಂಪಗಾಗಿ ಮೆಲ್ಲಗೆ ಉಸುರಿದಳು, ‘ ಗೊತ್ತಿಲ್ಲವಲ್ಲಾ ! ಹೇಳಬಾರದೇ ಹಾಗೆಂದರೇನು ? ’

‘ ವಿರಹವೆಂದರೆ ? ಇದೋ, ಹೀಗೆಂದು ಇಟ್ಟುಕೋ. ನಾನು ಇಲ್ಲದಿದ್ದರೆ ನಿನ್ನ ಜೀವಕ್ಕೆ ಕಳವಳವಾಗುವದಿಲ್ಲವೆ ? ’

‘ ಆಗುವದು. ಅದರಲ್ಲೇನು ಮಹಾ ? ’

‘ ಅದೇ ಆ ಜೀವ ಕಳವಳಗೊಳ್ಳುವದೇ ವಿರಹ. ’

‘ ಹೌದೇ ? ’ ಎಂದು, ಗಂಭೀರವಾಗಿ ವಿಚಾರಿಸಿಕೊಂಡು, ‘ ಹಾಗಾದರೆ ವಿರಹ ಬಹಳ ಕೆಟ್ಟದು ’ ಎಂದಳು.

‘ ಅದೇಕೆ ಕೆಟ್ಟದು ? ಈ ವಿರಹವೇ ವಿಶ್ವಸಾಹಿತ್ಯದ ಆಧಾರ. ಪ್ರೇಮವು ಸಹ ಇದರಿಂದಲೇ ಪುಷ್ಟವಾಗುವದು. ಅದು ಹೋಗಲಿ. ನಿನಗೆ ತಿಳಿಯುವ ಮಾತಿನಲ್ಲಿಯೇ ಹೇಳುತ್ತೇನೆ— ನೋಡು, ರಾಧಾಕೃಷ್ಣರು ಅಗಲಿದ ಹಾಡುಗಳು ಎಷ್ಟು ಸವಿ ? ಉಳಿದವು ಅಷ್ಟು ರುಚಿಸುವವೆ ? ರಾಧೆ ವಿರಹದಲ್ಲಿದ್ದಳು. ಅರ್ಥಾತ್ ಕೃಷ್ಣನು ರಾಧೆಯನ್ನು ಬಿಟ್ಟು ಮಥುರೆಯಲ್ಲಿದ್ದನು. ’

ಸ್ನೇಹಳು ಬಹಳ ಯೋಚಿಸಿದಳು. ಕೊನೆಗೆ ಸವೇಗವಾಗಿ ತಲೆಕೊಡವುತ್ತ, ‘ ಆದರೇನಾಯಿತು ? ಹಾಗೆಂದು ವಿರಹ ಎಂದೂ ನೆಟ್ಟಗಲ್ಲ. ನಾನು ಆ ಹಾಡನ್ನು ಇನ್ನು ಕಲಿಯುವವಳಲ್ಲ ’ ಎಂದಳು.

ಸುರೇಶನು ನಾಕಾಗಿ ಸೋಲೊಪ್ಪಿ ಅವಳನ್ನು ಹತ್ತಿರ ಸೆಳೆದುಕೊಂಡು, ' ಹಾಗಾದರೆ ಇನ್ನೊಂದು ಹಾಡು ಹೇಳುವೆ ಕೇಳು ' ಎಂದನು.

' ಹೇಳು ' ಎಂದು ಸ್ನೇಹಳು ಅರಳಿಕೊಂಡು ತನ್ನನ್ನು ಬಿಡಿಸಿಕೊಂಡು ಕುಳಿತಳು.

ಸುರೇಶನು ' ಆಗಲಿ ' ಎಂದು ಹಾಡತೊಡಗಿದನು —

' ಯೌವನ ನಿಕುಂಜವ ಪಕ್ಷಿ । ಹಾಡಿತು ಏಳು ಸಖಿ, ಸಖಿ ಏಳು ;

ಆವರಿಸಿದಲಸದಕ್ಷಿ । ನೋಡಿದೊ ತೆರೆ ಸಖಿ, ಸಖಿ ಏಳು । '

ಸ್ನೇಹಳು ಏಕಚಿತ್ತಳಾಗಿ ಹಾಡು ಕೇಳುತ್ತಿದ್ದಳು. ಅವಳಿಗೆ ಏನೂ ಅರ್ಥವಾಗದಿದ್ದರೂ ಸುರೇಶನ ಪ್ರೇಮಪೂರ್ಣ ಸ್ವರ, ಮತ್ತು ಸ್ನಿಗ್ಧ ಅನುರಾಗಪೂರ್ಣ ಕಂಣುಗಳು ಅವಳಿಗೆ ಅನೇಕ ಮಾತುಗಳನ್ನು ತಿಳಿಸಿಕೊಟ್ಟವು. ಮಧುರ ವಸಂತದಲ್ಲಿ ಮಧುರ ಪ್ರೇಮವು ನವ ಅನುರಾಗದಿಂದ ಇನ್ನೂ ರಂಜಿತವಾಗಿ, ಅವರ ' ಯೌವನನಿಕುಂಜ 'ವನ್ನು ನಯನ ಮನೋಹರವಾಗಿಸಿತು. ತನ್ನ ಪ್ರೇಮ ನಿವೇದನದ ಆವೇಗವನ್ನು ಸೂಚಿಸಿ ಸುಪ್ತಿಮಗ್ನಳಾದ ಪ್ರಣಯಿನಿಯನ್ನು ಜಾಗರಿಸಿ ಸುರೇಶನು ಹಾಡುತ್ತಾನೆ, ' ಏಳು ಸಖಿ, ಸಖಿ ಏಳು ' ಎಂದು.

ಈ ಹೊತ್ತಿಗೆ ಪರಿಚಾರಿಕೆ ಬಂದು ಒಂದು ಪತ್ರವನ್ನು ಕೋಚಿನ ಮೇಲೆ ಒಗೆದು ಹೋದಳು. ಸ್ನೇಹಳು ಪತ್ರವನ್ನು ತೆಗೆದುಕೊಂಡು ಸುರೇಶನಿಗೆ ಕೊಡಹೋಗಿ, ವಿಸ್ಮಿತಳಾಗಿ ಪತ್ರದ ಕಡೆಗೆ ನೋಡಿದಳು. ಸುರೇಶನು ತನ್ನ ಸುಖೋಚ್ಛ್ವಾಸದಿಂದ ಎಚ್ಚತ್ತು - ' ಏನು ? ' ಎಂದು ಕೇಳಿದನು.

ಸ್ನೇಹಳು ಬರಗಾಗಿ ' ಇದಾರ ಪತ್ರ ? ' ಎಂದು ಕೇಳಿದಳು.

' ಓದಿ ನೋಡಬಾರದೆ ? ನನ್ನ ದಾಗಲೀ ಕಾಲೀಪದನದಾಗಲಿ ಇರಬಹುದು. '

' ಅಲ್ಲ; ಇದರ ಮೇಲೆ ನನ್ನ ಹೆಸರು ಬರೆದಿದೆ. ನನಗಾರು ಪತ್ರ ಬರೆದರು ? '

' ಎಲ್ಲಿ ನೋಡುವಾ ? '

ಸ್ನೇಹಳು ಪತ್ರವನ್ನು ಪತಿಯ ಕೈಗೆ ಕೊಟ್ಟಳು. ಸುರೇಶನು ಓದಿ ನೋಡಿದನು. ಒಳ್ಳೇ ನೀಟಾದ ಅಕ್ಷರಗಳಲ್ಲಿ, ' ಶ್ರೀಮತಿ ಸ್ನೇಹಲತಾ ಕಲ್ಯಾಣಿಯಾಸು ' ಎಂದು ಬರೆದಿದೆ.

'ಅದೇ ಅನ್ನುತ್ತೀನೆ ! ಯಾರು ಬರೆದರು ? ಒಡೆದು ಓದಿಯೇ ನೋಡಿದರಾಯಿತು' ಎಂದು ಎನ್ನುತ್ತ ಸುರೇಶನು ಪತ್ರವನ್ನು ಒಡೆಯುತ್ತಲೇ ಸ್ನೇಹಳು ಕುತೂಹಲದಿಂದ ಬಾಗಿ ಹೇಳಿದಳು, 'ಹೆಸರನ್ನು ಓದಿ ನೋಡ ಬಾರದೇ ಮೊದಲು, ಯಾರು ಬರೆದರೆಂದು ? ಇದೋ ಹೆಸರು ಬರೆದಿದೆ, ಅದೋ—ಶ್ರೀ ಸುಧಾ ದಾಸೀ—ಸುಧಾ ದಾಸಿ ಯಾರು ?'

ಸುರೇಶನೂ ಚಮುಕಿತನಾಗಿ, 'ಎಲ್ಲಿ ? ಎಲ್ಲದೆ ?' ಎಂದನು.

'ಇದೋ ಕಾಣುವದಿಲ್ಲವೆ—ಶ್ರೀ ಸುಧಾ ದಾಸೀ ಎಂದು ಬರೆದಿದೆ. ಮೇಲೆ ಏನು ಬರೆದಿದೆ—ರಾಣೀಗಂಜ್'

ಸುರೇಶನು ಬಹಳ ಹೊತ್ತು ಮೌನವಾಗಿದ್ದದ್ದು ನೋಡಿ ಸ್ನೇಹಳು ಉತ್ಕಂಠಿತಳಾಗಿ ಕೇಳಿದಳು, 'ಹೀಗೇಕೆ ಸುಮ್ಮನೆ ಕುಳಿತೆ ? ಸುಧಾ ದಾಸಿ- ಅವರಾರು ? ಅವಳನ್ನು ನೀನು ಬಲ್ಲೆಯಾ ?'

'ನಿನಗೆ ಗೊತ್ತಾಗಲೊಲ್ಲದೆ ?'

'ಇಲ್ಲ, ಅವಳಾರು ?'

'ಅವಳು—ಅವಳು—' ಎಂದೆನ್ನುತ್ತ ಮತ್ತೊಮ್ಮೆ ಪತ್ರದ ಹಸ್ತಾಕ್ಷರ ಗಳನ್ನು ನೋಡಿಕೊಂಡನು. ಆ ಮೇಲೆ ಪತ್ರವನ್ನು ಸ್ನೇಹಳ ಕೈಗೆ ಕೊಟ್ಟು ಹೇಳಿದನು, 'ಪತ್ರವನ್ನು ನೀನೇ ಓದು. ಓದಿದರೆ ತಾನೇ ತಿಳಿಯಬಹುದು'

ಪತ್ರವನ್ನು ತೆಗೆದುಕೊಂಡು ಶಂಕಿತಮುಖಿಯಾಗಿ, 'ಓದಿದ ಮೇಲೂ ತಿಳಿಯದಿದ್ದರೆ ?' ಎಂದಳು.

'ಆಗ ಹೇಳುವೆನು.'

'ನನಗೆ ನೆಟ್ಟಗೆ ಓದಲು ಬರಲಿಕ್ಕಿಲ್ಲ. ನೀನೇ ಓದಿ ಹೇಳಲ್ಲ ?'

'ಬರುವದು. ಅಕ್ಷರ ಒಳ್ಳೇ ದುಂಡಾಗಿವೆ. ನಿನ್ನ ಪತ್ರ ನೀನೇ ಓದ ಬೇಕಾದದ್ದು.'

ಸ್ನೇಹಳು ಮನಸ್ಸಿನಲ್ಲಿ ಪತ್ರ ಓದತೊಡಗಿದಳು. ಸುರೇಶನು ತುಸು ಅನ್ಯ ಮನಸ್ಕನಾಗಿದ್ದು ಆಮೇಲೆ ಅವಳ ಕಡೆಗೆ ನೋಡುತ್ತಾನೆ—ಸ್ನೇಹಳ ಉದ್ವಿಗ್ನ ಮುಖವು ವಿವರ್ಣವಾಗುತ್ತ ನಡೆದಿದೆ. ಕಂಪಿತ ಹಸ್ತದಲ್ಲಿ ಪತ್ರವು ಥರಥರ ನಡುಗುತ್ತಿದೆ.

ಸುರೇಶನು ವ್ಯಗ್ರನಾಗಿ, 'ಏನು ಸ್ನೇಹಾ, ಏನು ?' ಎಂದನು.

‘ ಓದಿ ನೋಡು. ನಾನು ನೆಟ್ಟಗೆ ಓದಿಕೊಂಡಿರಲಿಕ್ಕಿಲ್ಲ. ’

‘ ಸುರೇಶನು ವಿಚಲಿತನಾಗಿ ‘ ತಂದೆ ನೆಟ್ಟಗಿದ್ದಾರಷ್ಟೆ ? ’ ಎಂದು ಕೇಳಿದನು.

‘ ಅವರಿಗೆ ಬಹಳ ಕಾಹಿಲೆಯಾಗಿದೆಯಂತೆ, ಓದಿ ನೋಡು. ’

ಸುರೇಶನು ಹೆದರುತ್ತಾ ಹೆದರುತ್ತಾ ಮೊದಲು ಪತ್ರದ ಪ್ರತಿ ಅಕ್ಷರವನ್ನೂ ಕಂಣಾಡಿಸಿ ನೋಡಿಕೊಂಡನು. ಓದಲು ಒಮ್ಮೆಲೇ ಸಾಹಸವಾಗಲೊಲ್ಲದು. ಕೊನೆಗೊಮ್ಮೆ ಓದಿದನು--

‘ ರಾಣೀಗಂಜ್

‘ ಕಲ್ಯಾಣಿಯಾ,

‘ ಬಹುತರವಾಗಿ ನೀನು ನನ್ನನ್ನು ಗುರುತಿಸಲಾರೆ. ಆದರೆ ಪತ್ರವನ್ನೋದಿ, ನಿನ್ನ ಪತಿಗೆ ಎಲ್ಲ ಮಾತುಗಳನ್ನು ಹೇಳಿದೆಯಾದರೆ, ನೀವು ನನ್ನನ್ನು ಗುರುತಿಸಬಲ್ಲಿರಿ; ಹಾಗೂ ಉದ್ದೇಶವನ್ನೂ ತಿಳಿಯಬಲ್ಲಿರಿ. ಪಿತೃದೇವನು ಅತ್ಯಂತ ಅಸ್ವಸ್ಥನಾಗಿದ್ದಾನೆ. ಒಂದು ವರ್ಷದಿಂದ ಅವರ ಪ್ರಕೃತಿ ನೆಟ್ಟಗಿಲ್ಲ. ಈಗ ಅವರ ಅವಸ್ಥೆಯು ಸಂಶಯಾಪನ್ನವು. ಅವರಿಗೆ ಬರೆಯಲು ಅಸಾಧ್ಯವಾಯಿತಾದ್ದರಿಂದ ಉಪಾಯಗಾಣದೆ ನಾನು ನಿನಗೆ ಬರೆಯುತ್ತಿದ್ದೇನೆ. ನೀನು ನಿನ್ನ ಪತಿಗೆ ಹೇಳು-- ಪಿತಾ ಅತ್ಯಂತ ಪೀಡಿತನೆಂದು. ಅವರು ನಿಮ್ಮನ್ನು ನೋಡಲು ಬಯಸಿದ್ದಾರೆ. ನೀನು ಮತ್ತು ನಿನ್ನ ಪತಿಯು ಪತ್ರ ಕಂಡ ಕೂಡಲೇ ಹೊರಟು ಬರಬೇಕು. ನೀವು ಬಹಳ ಅಸ್ಥಿರರಾಗಬೇಡಿರಿ. ಅವರು ಎಂದಿಗಿಂತ ಇಂದು ನೆಟ್ಟಗಿದ್ದಾರೆ. ಅವರ ಸಲುವಾಗಿ ಕಲಕತ್ತೆಯಿಂದ ಒಳ್ಳೇ ಅಂಜೂರಿ ಮತ್ತು ದ್ರಾಕ್ಷಿ ತೆಗೆದುಕೊಂಡು ಬರಬೇಕು. ಇಲ್ಲಿ ಒಳ್ಳೆಯವು ಸಿಕ್ಕುವದಿಲ್ಲ. ಹೆಚ್ಚೇನು ಬರೆಯಲಿ ? ಇತಿ--

ಶ್ರೀ ಸುಧಾ ದಾಸೀ ’

ಸುರೇಶನು ಸ್ತಂಭಿತನಾಗಿ ಮೌನವಾಗಿ ಕುಳಿತುಬಿಟ್ಟನು. ಸ್ನೇಹಳು ಅವನ ಮಾತಿಗಾಗಿ ಕಾದು ಕಡೆಗೆ ಮೆಲ್ಲಗೆ ಕೇಳಿದಳು, ‘ ಏನು ಓದಿದೆ ? ’

‘ ತಂದೆಯವರಿಗೆ ಬಹಳ ಬೇನೆ. ’

ಸ್ನೇಹಳು ನೀರವವಾದಳು. ಸಹಸಾ ಸುರೇಶನು ವ್ಯಗ್ರ ಕಂಠದಿಂದ ಹೇಳಿದನು, ‘ ಬೇಗ ಬೇಗ ಸ್ನೇಹಾ, ಬೇಗ ಎಲ್ಲ ಸರಿಪಡಿಸಿಕೊ--ಊರಿಗೆ ಹೋಗೋಣ--ತಂದೆಯವರಿಗೆ ಬಹಳ ಕಾಹಿಲೆ. ’

'ಏನು ಮಾಡಲಿ ?'

'ಆಃ, ಕೆಲವೊಂದು ಅರಿವೆ ಅಂಚಡಿ ತೆಗೆದುಕೊ. ಕಾಲಿ–ಕಾಲಿ ?'

ಕಾಲೀಪದನು ಬಂದು, 'ಏನು ? ಇಷ್ಟು ವ್ಯಸ್ತರೇಕೆ ?' ಎಂದು ಕೇಳಿದನು.

'ರಾತ್ರಿಯ ಗಾಡಿಗೆ ಊರಿಗೆ ಹೋಗುವೆವು. ಬೇಕಾಗುವ ಸಾಮಾನು ಗಳನ್ನೆಲ್ಲ ಸರಿಪಡಿಸಿ ಇಟ್ಟುಬಿಡು.'

ಕಾಲೀಪದನು ವಿಸ್ಮಿತನಾಗಿ ಕೇಳಿದನು, 'ಒಮ್ಮಿಂದೊಮ್ಮೆ ಊರಿಗೆ ? ಯಾಕೆ ? ಏನಾಗಿದೆ ?'

'ತಂದೆಯವರಿಗೆ ಬೇನೆ.'

'ಯಜಮಾನರಿಗೆ ಕಾಹಿಲೆ ? ಅವರು ನಿಮಗೆ ಮನೆಗೆ ಬರಲು ಹೇಳಿದ್ದಾರಷ್ಟೆ ?'

ಸುರೇಶನು ರೇಗಿಕೊಂಡನು. 'ಯಾಕೆ ಹೇಳುವದಿಲ್ಲ ? ಅವರಿಗೆ ಕಾಹಿಲೆ.'

'ಅದು ತಿಳಿಯಿತು. ರೇಗಿಕೊಳ್ಳಬೇಡಿರಿ. ನಾನು ಹೇಳುವದನ್ನು ಮನಸ್ಸುಗೊಟ್ಟು ಕೇಳಿರಿ. ಅವರು ನಿಮ್ಮನ್ನು ಕ್ಷಮಿಸಿರುವೆನು ಎಂದೇನಾದರೂ ಬರೆದಿರುವರೆ ?'

'ಕ್ಷಮಿಸಿದ್ದಾರೆ'— ಎಂದೆನ್ನುತ್ತ ಎನ್ನುತ್ತ ಸುರೇಶನು ಒಮ್ಮೆಗೇ ನಿಂತುಬಿಟ್ಟನು. ಆಗ ಅವನಿಗೆ ತನ್ನ ವಿಗತ ಜೀವನದ ಮಾತು ನೆನಪಿಗೆ ಬಂತು. ಪಿತನ ಅಸ್ವಾಸ್ಥ್ಯದ ವರ್ತಮಾನ ಓದಿ ಉತ್ಕಂಠಿತವಾದ ಅವನ ಮನಸ್ಸು ಅದನ್ನೆಲ್ಲ ಮರೆತು ತಂದೆಯ ಕಡೆಗೆ ಧಾವಿಸಲು ಹಾತೊರೆದಿತ್ತು. ಕಾಲೀಪದನ ಒಂದು ಮಾತು ಅವನನ್ನು ಎಚ್ಚರಿಸಿತು. ಅಸ್ವಾಸ್ಥ್ಯವೆಂದರಿತು ಕೂಡಲೇ ಹೋಗಿ ತಂದೆಯ ಮುಂದೆ ನಿಲ್ಲುವ ಅಧಿಕಾರ ಅವನಿಗೆಲ್ಲಿ ? 'ಅವರು ಕ್ಷಮಿಸಿರುವರೆ ?' ಎಂದು ತಿರುತಿರುಗಿ ತನ್ನನ್ನೇ ತಾನು ಕೇಳಿಕೊಳ್ಳುತ್ತ ಸುರೇಶನು ಬಿಟ್ಟಿದ್ದ ಆಸನದ ಮೇಲೆ ಮತ್ತೆ ಮೆಲ್ಲಮೆಲ್ಲಗೆ ಕುಳಿತುಕೊಂಡನು.

ಕಾಲೀಪದನು ಅವನ ಈ ಭಾವವನ್ನರಿತು, ಸಾವಕಾಶವಾಗಿ ಕೇಳಿದನು—'ಪತ್ರವನ್ನು ಯಾರು ಬರೆದಿದ್ದಾರೆ ? ಯಜಮಾನರೆ ?'

'ಅಲ್ಲ.'

'ಹಾಗಾದರೆ ಯಾರು ಬರೆದಿದ್ದಾರೆ ?'

ಸುರೇಶನು ತುಸು ರುಷ್ಟನಾಗಿ ಹೇಳಿದನು, 'ಯಾರೇ ಬರೆದಿರಲಿ-- ತಂದೆಯುವರಲ್ಲ.'

ಕಾಲೀಪದನು ಅಪ್ರತಿಭನಾದದ್ದು ನೋಡಿ ಸ್ನೇಹಳು ಹೇಳಿದಳು-- 'ನನಗೆ ಅಕ್ಕನಾಗಬೇಕು-ಅವರು ಬರೆದಿದ್ದಾರೆ.'

ಕಾಲೀಪದನಿಗೆ ಮತ್ತೆ ಎಳೆ ಸಿಕ್ಕಿತು. 'ಒಳ್ಳೇದು, ಸುರೇಶಬಾಬುಗಳು ನನ್ನ ಮಾತನ್ನು ಸುಸಂಗತವೆಂದು ತಿಳಿದುಕೊಂಡರೆ ಹೇಳುತ್ತೇನೆ.. 'ಅವರು ಹೋಗುವವಾದರೆ ಹೋಗಲಿ; ಸ್ನೇಹಾ ನೀನು ಇರು.'

ಸ್ನೇಹಳು ಸುಮ್ಮನಿದ್ದಳು. ಸುರೇಶನು ಹೇಳಿದನು--'ಅದೇ ಒಳ್ಳೇದು ಸ್ನೇಹಾ, ನೀನು ಕಾಲೀಪದನ ಹತ್ತಿರ ಇರು; ನಾನು ಹೋಗುತ್ತೇನೆ-- ತಂದೆ ಕರೆದಿದ್ದಾರೆ.'

ಕಾಳಿಯು ಮೆತ್ತಗೆ ಹೇಳಿದನು. 'ನಿಮ್ಮ ಹಿರಿಯ ಹೆಂಡತಿ ಬರೆದಿದ್ದಾರೆ--ತಂದೆ ಬರೆದಿಲ್ಲವಲ್ಲವೆ ?'

ಸುರೇಶನು ಉಗ್ರಕಂಠದಲ್ಲಿ ಅವನನ್ನು ತಡೆದು ಹೇಳಿದನು--'ಸಾಕು ಮಾಡು ಕಾಲೀಪದ, ತಂದೆಯುವರೇ ಕರೆದಿದ್ದಾರೆ. ಅವರಿಗೆ ಕಾಹಿಲೆ- ತಾವೇ ಹೇಗೆ ಬರೆಯುವರು ?'

ಅವರು ದಿವಾಣನಿಗೆ ಅಥವಾ ಇನ್ನಾರಿಗಾದರೂ ಹೇಳಿ ಬರೆಯಿಸಬಹುದಾಗಿತ್ತು ? ಇಷ್ಟು ತಿಳಿಯದೇ ನಿಮಗೆ ? ಇದು ಮೊದಲಿಂದ ಕೊನೆವರೆಗೆ ನಿಮ್ಮ ಹಿರಿಯ ಹೆಂಡತಿಯು ಆಟ.'

ಸುರೇಶನು ಎರಡೂ ಕೈಗಳಿಂದ ತಲೆ ಹಿಡಿದುಕೊಂಡು ಕುಳಿತುಬಿಟ್ಟನು. ದುಃಖ, ಅಪಮಾನ, ಲಜ್ಜೆ ಎಲ್ಲ ಕೂಡಿ ಅವನ ತಲೆಯನ್ನು ಕಲಕಿಬಿಟ್ಟವು. ವಿಚಾರ ಮಾಡಿ ಮಾಡಿ ಸ್ಖಲಿತಕಂಠದಲ್ಲಿ ಉಸುರಿದನು, 'ಹಾಗಾದರೆ ತಂದೆ ಕರೆದಿಲ್ಲ--ಹಾಗಾದರೆ ಹೋಗುವದಿಲ್ಲ.'

'ಅದನ್ನೇ ಹೇಳುತ್ತಿದ್ದೆ ಸುರೇಶಬಾಬು; ಚನ್ನಾಗಿ ತಿಳಿದು, ಹಿಂದೆ ಮುಂದೆ ನೋಡಿ ಕೆಲಸ ಮಾಡಿರಿ. ಏನೋ ಒಂದು ಭಾವದ ಭರದಲ್ಲಿ ಒಂದು ಕೆಲಸ ಮಾಡಿಬಿಟ್ಟು ಕೊನೆಗೆ ಜೀವನದಲ್ಲೆಲ್ಲ ಪಶ್ಚಾತ್ತಾಪ ಪಡಬೇಡಿರಿ. ನೀವು ಹೋದಿರೆಂದು ಇಟ್ಟುಕೊಳ್ಳಿರಿ. ತಂದೆಯ ಸ್ಥಿತಿ ನೋಡಿ ನಿಮ್ಮ ಕಂಣು ತೊಯ್ದವು ಎನ್ನೋಣ. ಆದರೆ ಅವರು ಅದನ್ನು ಗಮನಿಸದೆ ಮಾತನ್ನೂ ಆಡದೆ ಮುಖ ತಿರುಗಿಸಿ ಮಲಗಿಬಿಟ್ಟರೆ? ನಿಮ್ಮ ಹೆಂಡತಿಯೂ ಸಹ--'

ನಡುವೇ ತಡೆದು ಸುರೇಶನು ಆರ್ತಕಂಠದಿಂದ ಹೇಳಿದನು, ‘ ಸುಮ್ಮನಿರು ಕಾಲೀಪದ, ಇನ್ನು ಸಾಕು. ಅವರು ನನ್ನನ್ನು ತಿರುಗಿಯೇ ಕಳಿಸಬಹುದು; ಮಾತನ್ನೂ ಆಡಲಿಕ್ಕಿಲ್ಲ; ಆದರೂ ಅವರಿಗೆ ಬೇನೆ. ನಾನು ಹೋಗುವವನೇ. ’

‘ ಹಾಗಾದರೆ ಮುಂದೆ ಮಾತೇ ಇಲ್ಲ. ಆದರೆ ಸ್ನೇಹಾ ? ಅವಳನ್ನೂ ಸಂಗಡ ಕರೆದೊಯ್ಯಬೇಕೆನ್ನುವಿರೇನು ? ನಿಮ್ಮ ಹಿರಿಯ ಹೆಂಡತಿ ನಿಮಗೆ ದ್ವಿಗುಣ ಅಪಮಾನ ಮಾಡುವದಕ್ಕಾಗಿ ಈ ಜಾಲವನ್ನು ಪಸರಿಸಿರಬಹುದು. ನೀವು ಹೋಗಿರಿ. ಆದರೆ ಸ್ನೇಹಲತೆಯನ್ನೂ ಆ ಜಾಲದಲ್ಲಿ ಸಿಲುಕಿಸುವದು ಉಚಿತವೆ ? ’

‘ ಸ್ನೇಹಾ, ನೀನು ಹಾಗಾದರೆ ಕಾಲೀಪದನ ಹತ್ತಿರ ಇರು. ’

‘ ನಾನೂ ಬರುತ್ತೇನೆ.’ ಸಜಲನಯನಳಾಗಿ ಪತಿಯ ಹತ್ತಿರಕ್ಕೆ ತೀರ ಹೊಂದಿ ನಿಂದು ಭಗ್ನಕಂಠದಲ್ಲಿ ಸ್ನೇಹಳು ಹೇಳಿದಳು— ‘ ನನ್ನನ್ನು ಕರೆದು ಕೊಂಡು ಹೋಗು. ನನಗೂ ಅಕ್ಕ ಬರಲಿಕ್ಕೆ ಬರೆದಿದ್ದಾಳೆ. ’

‘ ತಂದೆ— ತಂದೆಯವರು ಬರೆದಿಲ್ಲ ಸ್ನೇಹಾ ! ’

‘ ತಂದೆ ಹೇಳಿದ್ದಾರೆ—ಅವರೇ ಕರೆದಿದ್ದಾರೆ—ಅಕ್ಕ ಅದನ್ನೇ ಬರೆದಿದ್ದಾರೆ. ’

ಸ್ನೇಹಳ ಸರಲ ವಿಶ್ವಾಸವು ಸುರೇಶನ ಹೃದಯಕ್ಕೆ ಇಲ್ಲದ ಬಲ ತಂದು ಕೊಟ್ಟಿತು. ದೀರ್ಘ ನಿಶ್ವಾಸವನ್ನು ಬಿಟ್ಟು ಕೇಳಿದನು, ‘ ಇದು ಅಷ್ಟು ಅಸಂಭವವೇ ಕಾಲೀ ? ’

‘ ವಿವೇಚಿಸಿ ನೋಡಿರಿ; ಸರಿದೋರಿದ್ದು ಮಾಡಿರಿ; ನನಗಂತೂ ಅದೇಕೋ ನೆಟ್ಟಗೆನಿಸಲೊಲ್ಲದು. ’

ಸ್ನೇಹಳು ವ್ಯಗ್ರಳಾಗಿ ಕೇಳಿದಳು, ‘ ಇದರಲ್ಲಿ ವಿವೇಚಿಸುವದೇನಿದೆ ? ನಿಮಗೇಕೆ ಇಷ್ಟು ತಿಳಿಯಲೊಲ್ಲದೋ ? ’

‘ ಹೋಗಲಿ ! ಏನಾದದ್ದು ಆಗುವದು. ಕಾಲೀ, ನೀನೇ ನನ್ನ ಏಕ ಮಾತ್ರ ಆಪದ್ಬಂಧು. ಅಸಾವಧಾನನಾಗಿ ಏನಾದರೂ ಅಂದಿದ್ದರೆ ಮನ್ನಿಸು. ನೀನು ಇಲ್ಲಿ ಇರು; ಸ್ನೇಹಾ ಮತ್ತು ನಾನು ಇಂದೇ ಹೋಗುತ್ತೇವೆ. ’

ಆ ಮೇಲೆ ತುಸು ಬಿಟ್ಟುಕೊಂಡು ನಿಟ್ಟುಸಿರಿಟ್ಟು ಸುರೇಶನು ಎಂದು ಕೊಂಡನು, ‘ ನನಗೆನಿಸುತ್ತಿದೆ— ತಂದೆಯೇ ನನ್ನನ್ನು ಕರೆದಿದ್ದಾರೆ - ಅವರು ನಿಶ್ಚಯವಾಗಿ ನನ್ನನ್ನು ಕ್ಷಮಿಸಿದ್ದಾರೆ. ’

ಕಾಲೀಪದನು ಕ್ರೂರ ಹಾಸ್ಯದಿಂದ ಹೆಗಲು ಕೊಡಹುತ್ತ ‘ ಹುಂ ’ ಎಂದಿಷ್ಟೇ ಎಂದನು.

೮

ಹಾದಿಯುದ್ದಕ್ಕೂ ದುರ್ಭರ ವಿಚಾರಭಾರವನ್ನು ಹೊತ್ತುಕೊಂಡು ಸುರೇಶನು ಸ್ನೇಹಲತೆಯನ್ನೊಡಗೊಂಡು ಊರ ದಾರಿಯಲ್ಲಿ ಹೊರಟಿದ್ದನು. ಹಾದಿಯಲ್ಲಿ ಸ್ನೇಹಲತೆಯೊಡನೆ ವಿಶೇಷ ಮಾತಾಡಿರಲಿಲ್ಲ. ಪತಿಯು ಸುಮ್ಮನಿದ್ದುದರಿಂದ ಅವಳೂ ಮೌನವಾಗಿದ್ದಳು; ಅಜ್ಞಾತ ಭಯದಿಂದ ಸಂಕುಚಿತಳೂ ಆಗಿದ್ದಳು. ಹಾದಿಯಲ್ಲಿ ಸುರೇಶನು ಎರಡು ಮೂರು ಸಲ ಪತ್ರ ತೆಗೆತೆಗೆದು ನೋಡಿದನು. ಸ್ನೇಹಲತೆಗಾಗಿ ಅವನ ಚಿಂತೆ. ಪತ್ರ ಓದಿ ನೋಡಿದಾಗ ಒಮ್ಮೊಮ್ಮೆ, ಅದರಲ್ಲಿ ಏನೋ ಒಂದು ಬಗೆಯ ಭಾವವಿದೆ ಎಂದು ಅವನಿಗೆ ಎನಿಸುತ್ತಿತ್ತು. ಆಜ್ಞಾಧಾರಕನಿಗೆ ಪ್ರಭುವಿನ ಆದೇಶದಂತೆ, ಅಪರಾಧಿಗೆ ವಿಚಾರಕನು ವಿಧಿಸಿದ ಕಠೋರ ಶಾಸನದಂತೆ ಆ ಪತ್ರವು ಅವನಿಗೆ ಭಾಸವಾಗುತ್ತಿತ್ತು. ಆಗ ಸುರೇಶನು ಹುಬ್ಬುಗಂಟಿಕ್ಕಿ ಅಂದುಕೊಳ್ಳುತ್ತಿದ್ದನು–ಸುಧಾ ತಾನಾರೆಂದು ನನಗೆ ಅನುಜ್ಞೆಯನ್ನಾಗಲಿ ಅವಜ್ಞೆಯನ್ನಾಗಲಿ ತೋರಿಸುತ್ತಿದ್ದಾಳೆ ? ಒಡನೆಯೇ ಅವಳಿಗಾಗಿ ಮನದಲ್ಲಿ ವಿದ್ವೇಷಭಾವವು ಹುಟ್ಟುತ್ತಿತ್ತು. ಮನುಷ್ಯನ ಅಪರಾಧವು ಗುರುತರವಾದಂತೆ ಹೆರವರ ಮೇಲೆ ಇಲ್ಲದ ದ್ವೇಷವುಂಟಾಗುತ್ತದೆ. ಕಾಲೀ ಎಂದಂತೆ ತಂದೆ ತನ್ನನ್ನು ಗಮನಿಸದಿದ್ದರೆ ? ಮಾತನಾಡದಿದ್ದರೆ ? ಹಾಗಿದ್ದರೆ ಹೀಗೆ ಪತ್ರ ಬರೆಯಿಸುತ್ತಿದ್ದರೆ ? ಅವರೀಗ ಹೋಗುವಲ್ಲಿ ಸುಧಾ ಅಧೀಶ್ವರಿ. ಅವಳ ಆದೇಶದಂತೆ ಅವಳ ಹತ್ತಿರ ಅನುಗ್ರಹಕ್ಕಾಗಿ, ಕ್ಷಮಾಯಾಚನೆಗಾಗಿ ನಾವಿಬ್ಬರೂ ಹೊರಟಿರುವೆವೆ ? ಅಲ್ಲಿ ಪ್ರಭುವಾಗಬೇಕಾದವನು ಸ್ವಯಂ ತಾನು. ಅಂಥವನು ಇಂದು ಅಲ್ಲಿ ತ್ಯಾಜ್ಯನು, ದೂರೀಕೃತನು. ಒಬ್ಬ ಆಗಂತುಕಳು ಅಲ್ಲಿಯ ಅಧೀಶ್ವರಿಯೇ ? ಸುರೇಶನ ವಕ್ಷವು ಇದನ್ನೆಲ್ಲ ನೆನೆನೆನೆದು ಕ್ಷೋಭದಿಂದ ಉಬ್ಬಿ ಒಡೆಯುವ ಹಾಗಾಗುತ್ತಿತ್ತು. ತಂದೆಯು ಸುಧೆಯ ಸಮ್ಮುಖದಲ್ಲಿಯೇ ತನ್ನ ಅಪಮಾನ ಮಾಡಿದರೆ ? ಸ್ನೇಹಳು ಆ ವಿಚಾರಕಳ ಪ್ರಭುತ್ವವ್ಯಂಜಕ ದೃಷ್ಟಿಯ ಎದುರು ಒಣಗಿ ಹೋಗಬಹುದಲ್ಲ ? ನಿಟ್ಟುಸಿರು ಬಿಟ್ಟು ಸುರೇಶನು, ಸ್ನೇಹಲತೆಯನ್ನು ಕರೆತರದಿದ್ದರೇ ನೆಟ್ಟಗಿತ್ತು ಎಂದುಕೊಂಡನು. ಮತ್ತೆ ಮರು ಗಳಿಗೆಗೇ ತಂದೆಯ ಅಸ್ವಾಸ್ಥ್ಯದ ನೆನಪಾಗಿ ಕರಗಿ ನೀರಾಗಿ ಹೋದನು.

ಅವರು ಗಾಡಿಯನ್ನಿಳಿದು ಬಂಡಿ ಹತ್ತಿದಾಗ ಆಗಲೇ ಮಸುಕು. ಗಿಡಗಳ ಮರೆಯಲ್ಲಿ ದೂರದಿಂದ ಊರು ಮಸುಕುಮುಸುಕಾಗಿ ಕಂಡಾಗ ಸುರೇಶನ ಕಣ್ಣಿಗೆ ನೀರು ಕಟ್ಟಿಕೊಂಡಿತು. ತಮ್ಮ ಹಾಗೂ ಚೌಧುರಿಯವರ ಮನೆಯ ಹೊಲದ ಬೆಳೆ ಮತ್ತು ತೋಟದ ಗಿಡಗಳು ಬದಿಬದಿಗೆ ನಿಂತು ಸ್ಪರ್ಧೆ ತೋರಿಸುತ್ತಿವೆ. ಅಲ್ಲಿ ಅದೇ ಆ ದೊಡ್ಡ ಸೇತುವೆ. ಎರಡೂ ಬದಿಗೆ ಉಭಯ ಪಕ್ಷದ ಅದೇ ಆ 'ವಿಮಾರೀ' ಜಲಸ್ರೋತವು ಈಗಲೂ ಕ್ಷೀಣವಾಗಿ ಹರಿಯುತ್ತಿದೆ. ಎದುರಿನ ವಿಶಾಲ ಆಲದ ಮರದಡಿಯಲ್ಲಿ ಈಗಲೂ ದನ ಕಾಯುವ ಹುಡುಗರು ಹಾಗೆಯೇ ಗಿಡದ ಜಟಕ್ಕೆ ಜೋತುಬಿದ್ದು ಜೀಕುತ್ತಿದ್ದಾರೆ. ಸಣ್ಣವನಿದ್ದಾಗ ಸುರೇಶನು ಇಲ್ಲಿಯೇ ತಿರುಗಾಡಲು ಬರುತ್ತಿದ್ದನು. ಇದೇ ಸೇತುವೆಯ ಮೇಲಿಂದ ನೀರಲ್ಲಿ ಜಿಗಿಜಿಗಿದು ಅದೆಷ್ಟು ಈಸುವದು ! ಈ ಹಾದಿಯ ಎರಡೂ ಬದಿಗಿರುವ ಹುಲ್ಲಿನ ಗುಡಿಸಲುಗಳಲ್ಲಿರುವವರೆಲ್ಲ ಅವನಿಗೆ ಅತ್ಯಂತ ಪರಿಚಿತರು. ಈಗಲೂ ಹರಿ, ಪರಶು, ಗೋಪಾಳರು ಇವೇ ಗುಡಿಸಲುಗಳಲ್ಲಿ ಚಿರದಿನದ ತಮ್ಮ ಸುಖದುಃಖಗಳೊಂದಿಗೆ ವಾಸಮಾಡಿಕೊಂಡಿರಬಹುದು; ಆದರೆ ತಾನು ಮಾತ್ರ ಈಗೆರಡು ವರ್ಷಗಳಿಂದ ತನ್ನೂರಲ್ಲಿ ನಿರ್ವಾಸಿತನು.

ಊರಲ್ಲಿ ಬಂಡಿಯು ಹೋಗುತ್ತಲೇ ಒಂದು ಬಗೆಯ ಲಜ್ಜೆಯಿಂದ ಅವರ ಕಿಡಿಕಿಯನ್ನು ಮುಚ್ಚಿ ಊರ ಕುತೂಹಲಿಗಳ ಕಣ್ಣು ತಪ್ಪಿಸಿ ಕುಳಿತನು. ಆದರೂ ಜೀವ ನಿಲ್ಲಲಾರದೆ ಬಾಗಿಲನ್ನು ತುಸು ತೆರೆದು ನೋಡಿದನು. ದೂರದಲ್ಲಿ ಚೌಧುರಿಯವರ ಅಟ್ಟಾಲಿಕೆ. ಎದುರಿಗೆ ನವೀನಪಾಲ ಡಾಕ್ಟರನ ದವಾಖಾನೆ. ಅತ್ತ ಭಟ್ಟಾಚಾರ್ಯರ ಚಂಡೀಮಂಟಪ. ಇತ್ತ ಹಳ್ಳಿಯ ಸಾಲೆ. ಆ ನಿಟ್ಟು ಅಂಚೀಕಟ್ಟೆ. ಅದರ ಬದಿ ಚಟ್ಟೋಪಾಧ್ಯಾಯರ ದೊಡ್ಡ ಹಳೆಯ ಮನೆ. ಆ ಮೇಲೆ ಅದೇ ತಮ್ಮ ಅಚ್ಚ ಬಿಳಿಯ ಅಟ್ಟಾಲಿಕೆ ತನ್ನ ಉನ್ನತವಾದ ಮಸ್ತಕವನ್ನೆತ್ತಿಕೊಂಡು ಗರ್ವದಿಂದ ನಿಂತುಕೊಂಡಿದೆ. ಎದುರಿಗೆ ತಮ್ಮ ಅದೇ ಚಿರಪರಿಚಿತ ಅಚ್ಚ ಬಿಳಿಯ ಉಚ್ಚ ಸಿಂಹದ್ವಾರ. ಸುರೇಶನು ಮುಖ ಚಾಚಿ ನೋಡಿದನು– ಸಿಂಹದ್ವಾರದ ಸಮ್ಮುಖದಿಂದ ಒಂದು ವಾಹನವು ಸವೇಗವಾಗಿ ತಮ್ಮ ವಾಹನಕ್ಕೆ ಇದಿರಾಗಿ ಬರುತ್ತಿದೆ. ಆ ವಾಹನದ ಚಾಲಕನಾದ ರಹಿಮ್‌ಬಕ್ಷನು ಸಲಾಮು ಮಾಡಿ ಗಡ್ಡವನ್ನು ನೀವಿಕೊಳ್ಳುತ್ತ 'ಬಾಬುಜಿ ಆಪ್ ಆಯೇ ಹೈಂ?' ಎಂದು ಕೇಳಿದನು. ಅವನಿಗ ಉತ್ತರ ಕೊಡುವ ಮುನ್ನವೇ ಸುರೇಶನ ವಾಹನವು

ಮುಂದೋಡಿತು. ಎದುರಿಗೆ ರಾಮುಚರಣ ಖಾನಸಾಮಾನ ಕೈಯಲ್ಲಿ ಕೆಲ ವೊಂದು ಔಷಧದ ಕುಪ್ಪಿಗಳೊಂದಿಗೆ ನಡೆದಿದ್ದಾನೆ. ಸುರೇಶನನ್ನು ಕಂಡು ' ಯಾವಾಗ ಬಂದಿರಿ ಸಣ್ಣ ಧನಿಯರೆ ? ದೊಡ್ಡ ಒಡೆಯರಿಗೆ ಬಹಳ ಜಡ್ಡು. ಇಷ್ಟು ದಿನ . ' ಸುರೇಶನು ಮುಖ ತಿರುಗಿಸಿಕೊಂಡನು. ಖಾನಸಾಮಾ ನನ್ನು ಹಿಂದೆ ಹಾಕಿ ವಾಹನವು ತಲೆಬಾಗಿಲಿಗೆ ಬರುತ್ತಲೇ ಸುರೇಶನು ಕೆಳಗೆ ದುಮುಕಿ ಆ ತಮ್ಮ ಕೆಂಪು ಹರಳು ಹಾಸಿದ ಹಾದಿಯನ್ನು ಸವೇಗವಾಗಿ ದಾಟಿ ಬೈಠಕ್‌ಖಾನೆಯ ವಿಶಾಲ ಸೋಪಾನದ ಮೇಲೆ ಆತುರನಾಗಿ ಅಡಿಯಿಡುತ್ತಲೇ ಮೇಲಿನಿಂದ ಸ್ನೇಹಕೋಮಲ ಕಂಠದಲ್ಲಿ ಯಾರೋ ಹೇಳಿದರು, ' ಸುರೇಶ-ಸುರೇಶ- ಮೆಲ್ಲಗೆ, ಅಷ್ಟು ವ್ಯಸ್ತನಾಗಬೇಡ. ' ಚಮಕಿತನಾಗಿ ಸುರೇಶನು ನೋಡಿದನು- ಇದಿರು ಮೇಲ್ಗಡೆಗೆ ವೃದ್ಧ ದಿವಾಣ ಆಮೋದಬಾಬು. ಅವನ ಸುತ್ತಲೂ ಕೆಲ ಕಾರಕೂನರೂ ಊರ ಪ್ರತಿಷ್ಠಿತರೂ ಉತ್ಕಂಠಿತರಾಗಿ ನಿಂತಿದ್ದಾರೆ. ಸುರೇಶನು ನಿಂತಿದ್ದು ನೋಡಿ ದಿವಾಣನು ಇಳಿದು ಬರುತ್ತ ಹೇಳಿದನು, ' ಸ್ಟೇಶನ್ನಿಗೆ ವಾಹನ ಕಳಿಸಿರಲಿಲ್ಲ. ತೊಂದರೆ ಆಗಲಿಲ್ಲವಷ್ಟೆ ? ಹೊತ್ತು ಸರಿಯಾಗಿ ಗೊತ್ತಾಗಲಿಲ್ಲ. ಯಜಮಾನರಿಗೆ ಬಹಳ--- ' ಸುರೇಶನು ಅಷ್ಟಕ್ಕೇ ತಡೆದು, ಮೊದಲಿನಂತೆ ವೇಗವಾಗಿ ಸೋಪಾನವನ್ನು ಏರುತ್ತ ಏರುತ್ತ ರುದ್ಧ ಸ್ವರದಲ್ಲಿ ' ನನಗೆ ಗೊತ್ತು ! ಸು ಮ್ಮ ನಾ ಗಿ ರಿ ; ಸುಮ್ಮನಾಗಿರಿ ಕಾಕಾ ! ' ಎಂದು ಹೇಳುತ್ತ ಹೇಳುತ್ತ ಸೋಪಾನಗಳನ್ನು ಹತ್ತಿ ಮುಗಿಸಿ ಕೂಡುವ ಮನೆಯಲ್ಲಿ ಹೊಕ್ಕನು. ದಿವಾಣನು ಒದರಿ ಹೇಳಿ ದನು, ' ಸುರೇಶ, ಯಜಮಾನರು ಅಂತಃಪುರದ ಎದುರಿಗಿನ ಅಂತಸ್ತಿನ ಕೋಣೆಯಲ್ಲಿದ್ದಾರೆ. ' ಸುರೇಶನು ಹೋದ ಮೇಲೆ ಕರ್ಮನಿಷ್ಠ ದಿವಾಣನು ಕಾರಕೂನನನ್ನು ಕರೆದು- ' ಬಂಡಿಯುವನಿಗೆ ಕೊಡುವದು ಕೊಟ್ಟು ಕಳಿಸಿ ಕೊಡು. ಎಲೋ ನಗೇನ, ಸಾಮಾನುಗಳನ್ನೆಲ್ಲ ಇಳಿಸಿಕೊಂಡು ಬಾ--- ' ಎಂದು ಹೇಳಿದನು. ಪರಿಚಾರಕನು ಸಾಮಾನುಗಳನ್ನು ಇಳಿಸಿಕೊಳ್ಳಲು ಹೋಗಿ ಹಾಗೇ ತಿರುಗಿ ಬಂದು, ' ದೇವರು, ಬಂಡಿಯಲ್ಲಿ ಯಾರೋ ಇದ್ದಾರೆ ' ಎಂದು ಹೇಳಿದನು. ದಿವಾಣನು ಚಮಕಿತನಾಗಿ, ' ಆದೇ ಅನ್ನುತ್ತೇನೆ, ಆಃ ಎಂಥ ಹುಡುಗಾಟಿಕೆ ' ಎಂದೆನ್ನುತ್ತ ತ್ರಸ್ತನಾಗಿ ಬಂಡಿಯ ಹತ್ತಿರ ಹೋಗಿ ಬಂಡಿ ಹೊಡೆಯುವವನಿಗೆ ' ಒಳಗೆ ಹೊಡೆ, ಬಂಡಿ ಇನ್ನೂ ಒಳಗೆ ಹೊಡೆ. ಇನ್ನೂ ಅತ್ತತ್ತ, ನಡೆ ಮುಂದೆ. ಅದೋ ಅಲ್ಲಿ ಆ ಬಾಗಿಲಿಗೆ ಹೊಂದಿ ನಿಲ್ಲಿಸು. ಎಲಾ ನಗೇನ, ಗಿರೀಶ, ಯಾರಿರು ವಿರೋ; ಒಳಗೆ ಹೇಳಿರಿ, ದೇವಕೀ, ರೇಣುಕಾ ಬಿಂದಿ ಯಾರಿದ್ದವರನ್ನು

ಕಳಿಸು ' ಎಂದು ಮುಂತಾಗಿ ಹೇಳಲು ಪರಿಚಾರಕರು ವ್ಯಗ್ರರಾಗಿ ಅಂತಃಪುರಕ್ಕೆ ಓಡಿದರು.

ಒಳಗೆ ಕುಳಿತವರನ್ನು ಇಳಿಸಿಕೊಂಡು ದಿವಾಣನು ಒಂದು ಕುರ್ಚಿಯನ್ನು ಸರಿಸಿಕೊಂಡು ಕುಳಿತು ಆಳಿಗೆ ತಂಬಾಕು ತರಹೇಳಿದನು; ಮತ್ತು ಬಂದವರಿಗೆ ಯಜಮಾನನ ಸ್ವಾಸ್ಥ್ಯದ ಬಗ್ಗೆ ಡಾಕ್ಟರನು ಹೇಳಿದ ಲಕ್ಷಣಗಳ ವರ್ಣನೆಯನ್ನು ವಿವರಿಸಿದನು. ಹೊರಗೆ ಕಾರಕೂನನು ಬಂಡಿಯವನೊಡನೆ ಬಾಡಿಗೆಯ ಬಗ್ಗೆ ಜಗಳಾಡತೊಡಗಿದ್ದನು.

ಸುರೇಶನು ಮೇಲೆ ಬಂದು ಒಬ್ಬರು ಅರ್ಧ ಹೊತ್ತುಕೊಂಡು ಮಲಗಿದ್ದು ನೋಡಿ ಅವರೇ ತಂದೆಯವರೆಂದು ತಿಳಿದುಕೊಂಡು ಒಂದು ಬಗೆಯ ಅಜ್ಞಾತ ಭಯದಿಂದ ಕ್ಷಣಹೊತ್ತು ಸ್ತಂಭಿತನಾಗಿ ನಿಂತುಕೊಂಡನು. ಒಳಗೆ ಮಲಗಿದವರು ಸುರೇಶನ ಆವೇಗ ವ್ಯಗ್ರವಾದ ಕಾಲುಸಪ್ಪಳವನ್ನು ಕೇಳಿರಬೇಕು. ಎಂದೇ ಆ ಶಬ್ದವು ಸಹಸಾ ಸ್ತಬ್ಧವಾಗಲು, ಕ್ಲಾಂತವಾದರೂ ಗಂಭೀರಕಂಠದಿಂದ ' ಯಾರು ' ಎಂದು ಒಳಗಿಂದ ಬಂದ ಪ್ರಶ್ನೆಯನ್ನು ಸುರೇಶನು ಕೇಳಿ ಪುಲಕಿತನಾದನು. ' ತಂದೆ--ತಂದೆಯವರದೆ ದನಿ ! ' ಎಂದುಕೊಂಡು ಪ್ರಕೃತಿಸ್ಥನಾಗಿ ಮುಂದಡಿ ಇಡುತ್ತಲೇ ಮತ್ತೆ ಕೇಳಿದನು. ಒಳಗಿನಿಂದ ಹೆಂಣು ದನಿಯೊಂದು, ' ನೀವು ಸುಮ್ಮನೆ ಮಲಗಿರಿ. ನಾನೆಲ್ಲಿ ನೋಡುತ್ತೇನೆ ಯಾರೆಂದು ' ಎಂದು ಹೇಳಿತು. ಸುರೇಶನು ಈ ಸಲ ಸವೇಗವಾಗಿ ಅಡಿಯಿಟ್ಟನು. ತೆರೆದ ಬಾಗಿಲೆದುರಿಗೇ ಪಿತನ ರೋಗಶಯ್ಯೆಯು ಕಾಣುತ್ತಿದೆ. ಉನ್ನತ ಶುಭ್ರ ಲಲಾಟ. ಗಂಭೀರ ಮುಖಮುದ್ರೆ. ನೇಹ ತುಂಬಿದ ಕಂಗೆರಡು ಕ್ಲಾಂತಿಯಿಂದ ಮುಚ್ಚಿಕೊಂಡಿವೆ. ಸುರೇಶನ ದುಃಖವು ಉಕ್ಕಿ ಕೋಡಿಯಾಗಿ ಹರಿಯಲು ಹಾತೊರೆಯುತ್ತಿತ್ತು. ಅವನು ಮುಸುಗುಟ್ಟುತ್ತ ಎರಡೇ ಹಾರಿಕೆಯಲ್ಲಿ ತಂದೆಯ ಕಾಲಬದಿಗೆ ಹಾಸಿಗೆಯ ತುದಿಗೆ ಹೋಗಿ ಕುಳಿತುಕೊಂಡನು. ರೋಗಿಯು ಕಂಣು ಮುಚ್ಚಿಕೊಂಡೇ, ತಲೆಯ ಬದಿ ಕುಳಿತ ಸ್ತ್ರೀಯನ್ನುದ್ದೇಶಿಸಿ ಹೇಳಿದನು, ' ಯಾರು, ತಾಯೀ ನೋಡು ? ಯಾರೋ ನನ್ನ ಕಾಲಬದಿ ಬಂದು ಕುಳಿತಂತಾಯಿತು; ಆನೋದನೇನು ? '

ಸುರೇಶನು ಮುಖವೆತ್ತಿ ನೋಡಿದನು-- ತಂದೆ ಇನ್ನೂ ಕಂಣು ಮುಚ್ಚಿದ್ದಾರೆ. ಕುಳಿತ ಸ್ತ್ರೀ--ಅವಳು ಪರಿಚಿತಳೇ-- ಮೆಲ್ಲಗೆ ರೋಗಿಯ ತಲೆ ತಟ್ಟುತ್ತಿದ್ದಾಳೆ. ಅವಳ ಅಕುಂಠಿತ ದೃಷ್ಟಿಯನ್ನು ಎದುರಿಸುವದಾಗದೆ

ಸುರೇಶನ ದೃಷ್ಟಿ ನತವಾಯಿತು. ಕ್ಷಣಕಾಲ ತಡೆದು, ಸಂತೋಷಬಾಬುವು ಕ್ಷೀಣಸ್ವರದಲ್ಲಿ 'ತಾಯಿ!' ಎಂದು ಕರೆದನು.

ಕುಳಿತವಳು ಬಾಗಿ ಸ್ನಿಗ್ಧಸ್ವರದಲ್ಲಿ, 'ತಂದೆ' ಎಂದಳು.

'ನನಗೆ ನಿದ್ದೆ ಹತ್ತಿತ್ತೆ?'

'ಎಲ್ಲಿ? ಇಲ್ಲ, ನೀವು ಎಚ್ಚರಾಗಿಯೇ ಇರುವಿರಿ!'

ನಿಟ್ಟುಸಿರು ಬಿಟ್ಟು ಸಂತೋಷಬಾಬು ಮೃದುವಾಗಿ ಹೇಳಿದನು, 'ಬಹುತರವಾಗಿ ಸ್ವಲ್ಪ ಜಂಪು ಹಿಡಿದಿರಬೇಕು. ಯಾಕೆಂದರೆ, ಯಾರೋ ಬಂದು ನನ್ನ ಕಾಲಬದಿ ಕುಳಿತಂತಾಯಿತು! ಆವನೋ ನನು ಬಂದಿದ್ದನೆ? ಆದರೆ ಅವನ ಹಾಗೆ ಮಾತ್ರ ಎನಿಸಲಿಲ್ಲ.'

'ಯಾರ ಹಾಗೆ ಎನಿಸಿತು?'

'ಏನೋ!--ಅವನಂತೆಯೇ ಇರಬೇಕು--ಅಲ್ಲ ಅಲ್ಲ, ಅವನು ಇಲ್ಲಿ ಇಲ್ಲ. ಕಲಕತ್ತೆಯಲ್ಲಿ-'

ಅಡಿಯಲ್ಲಿ ಕುಳಿತ ಸುರೇಶನ ರುದ್ಧ ಆವೇಗವು ಕಂಠದ ಬಳಿ ನುಗ್ಗಿ ನುಗ್ಗಿ ಬರುತ್ತಿತ್ತು. ಇನ್ನು ತಡೆಯಲಾಗದೆ ಅವನು ತಂದೆಯ ಕಾಲ ಮೇಲೆ ತಲೆಯಿಟ್ಟನು. ಅವನ ಸ್ಪರ್ಶದಿಂದ ಸಂತೋಷಬಾಬುವು ಚಮಕಿತನಾಗಿ, ವ್ಯಾಕುಲ--ಆರ್ತ ಕಂಠದಿಂದ ಹೇಳಿದನು, 'ತಾಯಿ--ತಾಯಿ, ಮತ್ತೆ ಹಾಗೇ ಎನಿಸುವದು; ಯಾರು ನೋಡಬಾರದೆ?'

ಕುಳಿತವಳು ಮುಖ ತಿರುಗಿಸಿಕೊಂಡು ತುತ್ತಿಗೆ ಬಿಗಿದಿರಲು, 'ನೀವೇ ನೋಡುವದಿಲ್ಲವೇಕೆ ತಂದೆ! ಕಣ್ಣು ತೆರೆದು ನೋಡಿರಿ.'

'ನೋಡಲು ನನಗೆ ಹೆದರಿಕೆಯಾಗುವದು-ನೋಡ್ಯಾದರೆ-ಅವನೇ ಏನು?'

ಸುರೇಶನು ಆರ್ತಕಂಠದಿಂದ ಕರೆದನು, 'ತಂದೆ!'

ಮಿಂಚು ಮೈಗೆ ತಾಕಿದಂತಾಗಿ ಸಂತೋಷಬಾಬುವು ಕಣ್ಣು ತೆರೆದನು.

'ಸುರೇಶ!'

'ತಂದೆ, ತಂದೆ' ಎಂದೆನ್ನುತ್ತ ಸುರೇಶನು ಅವನ ಕಾಲುಗಳನ್ನು ಬಲವಾಗಿ ಒತ್ತಿ ಹಿಡಿದು ಅವುಗಳಿಂದ ಮುಖ ಮುಚ್ಚಿಕೊಂಡನು. ಸಹಸಾ ಅವನ ತಲೆಗೆ ಕೋಮಲ ಕರಸ್ಪರ್ಶ ಮಾಡಿ ಇನಿದನಿಯೊಂದು ವ್ಯಗ್ರ ಕಂಠದಿಂದ, 'ನೋಡು--ನೋಡು; ತಂದೆ ಹಾಗೇಕೆ ಮಾಡುತ್ತಾರೆ?' ಎಂದು ಹೇಳಿತು. ಮತ್ತು ಒಡನೆಯೇ ಸುಧೆ ಎಚ್ಚರತಪ್ಪಿದ ರೋಗಿಯ ಬಳಿ ಸರಿದು

ಹೋಗಿ ಅವನ ತಲೆಯನ್ನು ತೊಡೆಯ ಮೇಲಿರಿಸಿಕೊಂಡು ಕಾತರವಾಗಿ 'ತಂದೆ, ತಂದೆ!' ಎಂದು ಕರೆಯತೊಡಗಿದಳು. ಸುರೇಶನು ಪಿತನ ಪಾದಗಳನ್ನು ಬಿಟ್ಟು ನೀರವವಾಗಿ ಸುಮ್ಮನೆ ನಿಟ್ಟಿಸಿ ನೋಡತೊಡಗಿದನು. ತಾನು ಈಗ ಏನು ಮಾಡಬೇಕು ಎಂಬುದೇ ಅವನಿಗೆ ತೋಚಲೊಲ್ಲದು. ಸುಧೆಯು ಅವನ ಕಡೆಗೆ ಅಶ್ರುಪೂರ್ಣವಾದ ವ್ಯಾಕುಲ ನಯನಗಳಿಂದ ನೋಡಿ, ತ್ವರಿತ ಕಂಠದಿಂದ ಹೇಳಿದಳು, 'ಹೀಗೆ ಬಾ, ತುಸು ಗಾಳಿ ಹಾಕು. ಹೆದರಬೇಕಾಗಿಲ್ಲ; ಏನೋ ಮೂರ್ಛೆ ಬಂದ ಹಾಗಿದೆ; ಬಹಳ ದುರ್ಬಲರಾಗಿದ್ದಾರೆ. ಅದಕ್ಕೇ—'

ಸುರೇಶನು ಎದ್ದು ತಂದೆಯ ಬದಿಗೆ ನಿಂತು ಅವನ ತಲೆಗೆ ಮೃದುವಾಗಿ ಗಾಳಿ ಹಾಕತೊಡಗಿದನು; ಮತ್ತು ಮೌನವಾಗಿ ಸುಧೆಯ ಅಶ್ರಾಂತ ಶುಶ್ರೂಷೆಯನ್ನು ನೋಡತೊಡಗಿದನು. ಸ್ಖಲಿತ ಕಂಠದಿಂದ ಕೊನೆಗೆ, 'ಕಾಕಾ ಅವರನ್ನು ಕರೆಯಲಾ?' ಎಂದು ಕೇಳಿದನು.

ರೋಗಿಯ ಬಾಯಿಯಲ್ಲಿ ತುಸು ತುಸು ಬಿಸಿ ಹಾಲು ಹಾಕುತ್ತ ಸುಧೆ 'ಬೇಡ. ಇದೋ ಸಾವರಿಸಿಕೊಂಡಿದ್ದಾರೆ, ಇನ್ನೇನು ಭಯವಿಲ್ಲ. ತಂದೆ-ತಂದೆ—!'

ಸುದೀರ್ಘ ನಿಶ್ವಾಸವನ್ನು ಬಿಟ್ಟು ಸಂತೋಷಬಾಬುವು, 'ತಾಯಿ!' ಎಂದನು.

ಸುಖದ ಹಾಗೂ ದುಃಖದ ತೆರೆಗಳು ಏಕಕಾಲಕ್ಕೆ ತಾಕಿ ದುರ್ಬಲ ಅಂತಃಕರಣವು ಒಂದು ನಿಮಿಷ ನಿಸ್ಪಂದವಾಗಿತ್ತು. ಈಗ ಚೇತರಿಸಿಕೊಂಡು ಮಗನ ಕಡೆ ನೋಡಿ 'ಸುರೇಶ!' ಎಂದನು. ಪಿತನ ಉದ್ವಿಗ್ನ ನೇತ್ರಗಳನ್ನು ನೋಡಲಾರದ ಸುರೇಶನು ಮುಖ ಮುಚ್ಚಿಕೊಂಡನು. ಮತ್ತೆ ರೋಗಿಯ ಕ್ಷೀಣಸ್ವರವು 'ಸುರೇಶ!' ಎಂದಿತು. ಸುರೇಶನು ತಲೆ ಎತ್ತಿ ನೋಡಿದನು— ತಂದೆ ತನ್ನ ಕಡೆಗೆ ಬಲಗೈ ಚಾಚಿದ್ದಾನೆ. ತಂದೆಯ ಈ ಸ್ನೇಹಮಯ ಭಾವವನ್ನು ನೋಡಿ ಅವನಿಗೆ ಆನಂದವಾಯಿತು; ಅನುತಾಪವೂ ಆಯಿತು. ನಡುಗುವ ಕೈಗಳಿಂದ ತಂದೆಯ ಕೈಯನ್ನು ತನ್ನ ಮುಖಕ್ಕೆ ಹತ್ತಿಕ್ಕಿ, ಅವನು ಹಾಸಿಗೆಯ ತುದಿಯಲ್ಲಿ ತಲೆಯಿಟ್ಟು ಕುಳಿತುಕೊಂಡನು.

'ಪುತ್ರಗಾತ್ರಸ್ಯ ಸಂಸ್ಪರ್ಶಃ' ಸಂತೋಷಬಾಬುವಿನ ಬೆಂದ ಹೃದಯಕ್ಕೆ ತಣ್ಪನ್ನು ನೀಡಿತು. ಮತ್ತೊಂದು ಕೈಯನ್ನು ಪುತ್ರನ ಮಸ್ತಕದ ಮೇಲಿಟ್ಟು

ಇಷ್ಟುದಿನ ಹತ್ತಿಟ್ಟ ರೋಷವನ್ನು ನೀರಾಗಿ ಹರಿಸಿದನು. ವಯಸ್ಕ ಸಂತೋಷ ಬಾಬುವು ಇಂದು ರೋದನರತ ಬಾಲಕನಾದನು.

ಬಹಳ ಹೊತ್ತು ಅತ್ತಮೇಲೆ ತುಸು ಹಗುರೆನಿಸಿತು. ಮುಖತಿರುಗಿಸಿ ಸೊಸೆಯನ್ನು ಕರೆದನು. ಈ ಸಮಯದಲ್ಲಿ ಅವಳು ಒಂದು ಮೂಲೆಯಲ್ಲಿ ಮುಖ ಅಡಗಿಸಿ ನಿಂತು ಏನು ಮಾಡುತ್ತಿದ್ದಳೋ ಯಾರು ಬಲ್ಲರು ? ಮಾವ ನವರ ಕರೆಗೆ ಹತ್ತಿರ ಬಂದು ನತಮುಖಿಯಾಗಿ ನಿಂತಳು.

' ಇಲ್ಲಿ ಬಾ--ಇಲ್ಲಿ ಕೂಡು; ತುಸು ಗಾಳಿ ಹಾಕು ಮಾತಾ ! '

ಸುಧೆಯು ಇನ್ನೊಂದು ಬದಿಗೆ ಕುಳಿತು ಮೌನವಾಗಿ ಗಾಳಿ ಹಾಕ ತೊಡಗಿದಳು. ಸಂತೋಷಬಾಬು ಕೆಲಹೊತ್ತು ಅವಳ ಮ್ಲಾನ, ಗಂಭೀರ ಮುಖವನ್ನು ನೋಡಿನೋಡಿ ಅನುಕಂಪಿತ ಕಂಠದಲ್ಲಿ-- ' ಮಾತಾ, ನೀನು ನನ್ನ ಒಂದು ಮಾತನ್ನು ಮನ್ನಿಸಬೇಕು- ' ಎಂದು ಹೇಳಿದನು.

' ಹೇಳಿರಿ. '

' ತಾಯಿ, ನೀನಿನ್ನೂ ಸುರೇಶನನ್ನು ಮನ್ನಿಸಿರಲಿಕ್ಕಿಲ್ಲ. ಎಂದಾದರೂ ಮನ್ನಿಸಬಹುದೋ ಇಲ್ಲನ್ನೋ ಕಾಣೆ; ಆದ್ದರಿಂದ ಸಹಸಾ ಆ ಮಾತನ್ನೆತ್ತಲಾರೆ. ಯಾಕೆಂದರೆ, ನನಗಿಂತ ನಿನ್ನ ಬಳಿ ಅವನ ಅಪರಾಧವು ಗುರುತರವು. ತಾಯಿ, ನಿನ್ನ ಬಳಿ ನಾನು ಬೇಡುವದಿಷ್ಟೇ- ನಾನು ಉಸುರಾಡಿಸಿರುವ ವರೆಗೆ ನನ್ನ ಸಮ್ಮುಖದಲ್ಲಿ ನೀನು ಅವನನ್ನು ಮನ್ನಿಸಿರುವ ಹಾಗೆ ನಡೆದುಕೊಳ್ಳಬೇಕು. ಆದೀತೇ ತಾಯಿ ? '

ಸುಧೆಯು ಮೌನವಾಗಿ ಬೀಸಣಿಕೆಯನ್ನು ಇನ್ನೂ ಭರದಿಂದ ಅಲ್ಲಾಡಿ ಸಿದಳು. ಕೆಲ ನಿಮಿಷದ ಮೇಲೆ ಸಂತೋಷಬಾಬುವು ನಿಶ್ವಾಸಬಿಟ್ಟು, ' ಎಂದಾದರೂ, ಸಾಧ್ಯವಾದರೆ ಅವನನ್ನು ಕ್ಷಮಿಸು ' ಎಂದು ಉಸಿರಿದನು.

ಸುಧೆಯು ಮೆಲ್ಲಮೆಲ್ಲನೆ ಅವನ ಪದತಲದಲ್ಲಿ ಹೋಗಿ ನಿಂತಳು. ಕಂಪಿತ ಕರಗಳಿಂದ ಮಾವನ ಅಡಿಗಳನ್ನು ಒಡಿದು ಕಟ್ಟಿದ ಕಂಠದಲ್ಲಿ ' ತಾವು ಆಶೀರ್ವದಿಸಿರಿ ' ಎಂದಳು.

' ನಿನಗದು ಸಾಧ್ಯವಿದೆ ತಾಯಿ ! ನಿನಗೆ ನನ್ನ ಅನಂತ ಆಶೀರ್ವಾದ. '

ಸುರೇಶನು ನತಮುಖನಾಗಿ ಸುಮ್ಮನೆ ಕುಳಿತುಬಿಟ್ಟಿದ್ದನು. ಪಿತನ ಈ ಮಧುರ ವ್ಯವಹಾರದಿಂದ ಅವನ ಕ್ಷಮಾಪೂರ್ಣವಾದ ಅಪರಿಸೀಮವಾದ ಸ್ನೇಹದ ಪ್ರಮಾಣವಾಗುತ್ತಿತ್ತಲ್ಲದೆ ಅಪಮಾನದ ಗಂಧವಿರಲಿಲ್ಲ. ಆದರೂ ಬರುವಾಗ ಹಾದಿಯಲ್ಲಿ ಅಪಮಾನ ಭಯದಿಂದ ಅದೆಷ್ಟು ಕ್ಲಿಷ್ಟನಾಗಿದ್ದನು !

ಸುಧೆಯನ್ನು ನೋಡಲು ಮಾತ್ರ ಸುರೇಶನು ಕುಂಠಿತನಾಗುತ್ತಿದ್ದನು. ಆದರೂ ಅವಳನ್ನು ಗಣನೆಗೆ ತಾರದೆ ಇರಲು ಹೇಗಾಗುತ್ತಾನೆ. ಈ ಸಂಕೋಚ ಭಾವಕ್ಕೂ ತನ್ನಲ್ಲಿ ತಾನು ಲಜ್ಜಿತನಾಗುತ್ತಾನೆ. ಒಂದು ದಿನವೂ ಒಂದು ಕ್ಷಣವೂ ಪತ್ನಿಯ ಅಧಿಕಾರವನ್ನು ಪಡೆದಿರದ, ಪರಸ್ತ್ರೀಯಂತಿದ್ದ ಅವಳಿಗಾಗಿ ಈ ಲಜ್ಜೆಯೇಕೆ ? ಈ ಸಂಕೋಚವೇಕೆ ? ಇಂತು ಪರಿಯಾಗಿ ಭಾವಿಸಿ ತನ್ನ ಮೇಲೆ ತಾನೇ ಕ್ಷೋಭಗೊಳ್ಳುತ್ತಾನೆ.

ಈ ಧಾರ್ಮಿಕ ಸಂಬಂಧದ ಗುರುತ್ವವು ಸಮಾಜದ ದೃಷ್ಟಿಯಿಂದ ಅದೆಷ್ಟು ಎಂಬುದು ಮೂರ್ಖ ಸುರೇಶನಿಗೆ ಅದು ಹೇಗೆ ಹೊಳೆಯಲಿಲ್ಲವೋ ? ಈ ವಿಷಯದಲ್ಲಿ ತನ್ನ ಇಚ್ಛೆಯ ವಿರುದ್ಧವಾಗಿಯೂ ಸುರೇಶನು ಸಮಾಜದ ಎದುರಿಗೆ ತಲೆಬಾಗಿಸಲೇಬೇಕು.

ಸಂತೋಷಬಾಬು ಸುರೇಶನನ್ನು ನೋಡಿ ನೋಡಿ ಕರೆದು, ' ಸುರೇಶ, ಇಲ್ಲಿ ಒಂದು ಕೂಡು ' ಎಂದು ಹೇಳಿದನು. ದಾರದ ಗೊಂಬೆಯಂತೆ ಎದ್ದು ಸುರೇಶನು ತಂದೆಯ ಹತ್ತಿರ ಕುಳಿತನು. ಕಂಬನಿಯಿಂದ ಮಗನ ಮೈಗೆಲ್ಲ ನೇಹಮಜ್ಜನ ಮಾಡುವಂತೆ ನೋಡಿ ಸಂತೋಷಬಾಬು, ' ಬಹಳ ಸೊರಗಿರುವೆ ' ಎಂದನು.

ಸುರೇಶನ ಕಂಬುಗಳಿಂದ ಮತ್ತೆ ನೀರು ಹಳ್ಳವಾಗಿ ಹರಿಯಿತು.

ಅಕ್ಕರೆಯಿಂದ ಮಗನ ತಲೆಯ ಮೇಲೆ ಕೈಯಿಟ್ಟು, ' ಅಳಬೇಡ ಮಗು ! ಸಾವಿರ ತಪ್ಪು ಮಾಡಿದರೂ ನಿನ್ನ ಮೇಲೆ ನಾನು ಸಿಟ್ಟಾಗಬಲ್ಲೆನೆ ? ' ಎಂದನು ಸಂತೋಷಬಾಬು.

ಸುರೇಶನು ಒಂದು ಅನುತಾಪ ವಾಕ್ಯವನ್ನೂ ಸಹ ಉಚ್ಚರಿಸಲಾರ ! ಅವನು ಮಾತಿಲ್ಲದೆ ಕುಳಿತು ಅಳತೊಡಗಿದನು; ಮತ್ತು ಪಿತನು ಅವನ ತಲೆ ಸವರತೊಡಗಿದನು. ಅತ್ತತ್ತು ಸುರೇಶನು ಶಾಂತನಾದನು

ಸುಧೆಯು ಅಳತೆಯ ಒಂದು ಗ್ಲಾಸಿನಲ್ಲಿ ತುಸು ಔಷಧ ಹಾಕಿ ಕುಡಿಸ ಹೋಗುತ್ತಲೇ ಸಂತೋಷಬಾಬು, ' ಇನ್ನು ಆ ಔಷಧ ಬೇಡ ತಾಯಿ, ನೆಟ್ಟಗಾಗುವೆನಾದರೆ ಇದರಿಂದಲೇ ಆಗುವೆ. '

' ನೀವು ದಿನವೂ ಹೀಗೆ ಬೇಡವೆನ್ನುವಿರಿ ? '

' ಬೇಡವೆಂದರೂ ನೀನೆಲ್ಲಿ ನಿನ್ನ ಈ ಚಿಕ್ಕ ಮಗುವನ್ನು ಬಿಟ್ಟುಕೊಡುವೆ ಮಾತಾ ? '

ಸುಧೆಯು ನಗುತ್ತ, ‘ ಮಾತು ಆ ಮೇಲೆ ಆಡುವಿರಂತೆ ಪಿತಾ ! ಮೊದಲು ಇದನ್ನು ಕುಡಿಯಿರಿ ’ ಎಂದು ಹೇಳಿ ಸುರೇಶನ ಕಡೆಗೆ ನೋಡಿ, ‘ ದ್ರಾಕ್ಷೆ ತರುವದಾಗಿದೆಯಷ್ಟೆ ? ’ ಎಂದು ಕೇಳಿದಳು.

‘ ಟ್ರಂಕಿನಲ್ಲಿದೆ ’ ಎಂದು ಹೇಳುತ್ತಲೇ ಸುರೇಶನ ನೆನಪಿಗೆ ಬಂತು–– ಟ್ರಂಕು ಬಂಡಿಯಲ್ಲಿಯೇ ಉಳಿದುಬಿಟ್ಟಿದೆ ! ಮತ್ತು ಸ್ನೇಹಳು ಸಹ ಬಂಡಿಯಲ್ಲಿಯೇ !

ಸಂತೋಷಬಾಬು ಪುತ್ರನ ಕಡೆಗೆ ನೋಡಿ, ‘ ನೀನು ಒಬ್ಬನೇ ಬಂದಿರುವೆಯಾ ? ’ ಎಂದು ಕೇಳಿದನು.

ಸುರೇಶನು ಮೃದುವಾಗಿ ‘ ಇಲ್ಲ ’ ಎಂದನು.

‘ ಚಿಕ್ಕ ಸೊಸೆಯನ್ನು ಕರೆತಂದಿರುವೆಯಾ ? ಎಲ್ಲಿ ? ಕಾಣುವದಿಲ್ಲ ? ’

‘ ಬಂಡಿಯಲ್ಲಿ. ’

ಸಂತೋಷಬಾಬುವು ಉತ್ಕಂಠಿತನಾಗಿ– ‘ ಇನ್ನೂ ನಿನ್ನ ಸ್ವಭಾವವು ಹಾಗೆಯೇ ಉಳಿದಿದೆಯೇ ? ಚಿಕ್ಕ ತಾಯಿಯನ್ನು ಬಂಡಿಯಲ್ಲಿ ಬಿಟ್ಟು ನಿಶ್ಚಿಂತನಾಗಿ ಕುಳಿತೆಯಾ ? ತಾಯಿ–– ’ ಎಂದು ಹೇಳುತ್ತಲೇ ಸುಧೆ ಎದ್ದು ನಿಂತಳು ಸುರೇಶನನ್ನು ನೋಡಿ ಮುಸುಕಿನವೇ ನಿಂತುಬಿಟ್ಟಳು. ಸುರೇಶನಿಗೆ ಮುಖದ ವಿಕೃತಭಾವವನ್ನು ಅದೇನು ಮಾಡಿದರೂ ಬಚ್ಚಿಡಲಾಗಲಿಲ್ಲ. ಸುಧೆ ಅದನ್ನರಿತು ಬಾಗಿಲ ಬಳಿ ನಿಂತಿದ್ದ ಓರ್ವ ಆತ್ಮೀಯಳಿಗೆ ಇಂಗಿತದಿಂದ ಹೇಳಿದಳು, ‘ ನೀನು ಹೋಗು. ’

ಆತ್ಮೀಯಳು, ‘ ಚಿಕ್ಕ ವಧುವನ್ನು ನಾವು ಇಳಿಸಿ ಕರೆತಂದಿದ್ದೇವೆ. ಒಡೆಯರು ಹೇಳಿ ಕಳಿಸಿದ್ದರು ’ ಎಂದು ಹೇಳಿದಳು.

ಸಂತೋಷಬಾಬು ವ್ಯಗ್ರನಾಗಿ, ‘ ಇಲ್ಲಿ ಕಳಿಸಿಕೊಡು, ನಾನು ನೋಡಿ ಹರಸುವೆನು ’ ಎಂದನು.

‘ ಇದೇ ಈ ಕೋಣೆಯಲ್ಲಿಯೇ ಅವರಿದ್ದಾರೆ. ’

ಮೆಲ್ಲಮೆಲ್ಲಗೆ, ಅವಗುಂಠಿತ ಸ್ನೇಹಳು ನಡುಗುವ ನಡಿಗೆಯಿಂದ ಒಳಗೆ ಬಂದಳು. ಸುರೇಶನು ಗಂಭೀರನಾಗಿ ನತಮುಖನಾಗಿ ಕುಳಿತುಬಿಟ್ಟನು; ಮತ್ತು ಸುಧೆಯು ರೋಗಿಯ ಆಹಾರ-ಪಥ್ಯವನ್ನು ಸಿದ್ಧಗೊಳಿಸುವದರಲ್ಲಿ ತೊಡಗಿದಳು.

ಸಂತೋಷಬಾಬು ' ಬಾ ತಾಯಿ ! ' ಎಂದು ಸ್ನೇಹಲತೆಯನ್ನು ಕರೆದನು.

ಸ್ನೇಹಳು ಸಾವಕಾಶವಾಗಿ ಮಾವನವರ ಪಾದಗಳ ಬಳಿ ಹೋಗಿ ಪ್ರಣಾಮ ಮಾಡಿದಳು. ಸಂತೋಷಬಾಬು ಸ್ನಿಗ್ಧಸ್ವರದಲ್ಲಿ, ' ಬಾ ತಾಯಿ, ನನ್ನ ಹತ್ತಿರ ಬಂದು ಕುಳಿತುಕೊ; ಈ ಬದಿಗೆ ಬಾ ' ಎಂದು ಕರೆದನು.

ಸ್ನೇಹಳು ಗದಗದ ನಡುಗುತ್ತ ಹಾಗೂ ಹೀಗೂ ಹೇಳಿದಲ್ಲಿ ಹೋಗಿ ನಿಂತಳು.

' ನಾಚಿಕೆ ಏತರದು ತಾಯೀ, ನಾನು ನಿಮ್ಮ ಪಿತನಲ್ಲವೆ ? ಕುಳಿತುಕೊ.'

ಅವಗುಂಠನದ ಮರೆಗೆ ಸ್ನೇಹಳು ಬಿಕ್ಕಿಬಿಕ್ಕಿ ಅಳುತ್ತಿದ್ದಳು. ಇಷ್ಟು ವಾತ್ಸಲ್ಯದ ಮಾತುಗಳನ್ನು ಅವಳೆಂದೂ ಕೇಳಿಲ್ಲವೇನೊ ! ಇಲ್ಲಿ ಬರಲು ಇಷ್ಟುಹೊತ್ತು ಒಂದು ಬಗೆಯ ಅರಿಯದ ಹೆದರಿಕೆಯಿಂದ, ಸಂಕೋಚದಿಂದ ಗದಗದ ನಡುಗುತ್ತಿದ್ದಳು. ಈ ಸ್ನೇಹಮಯ ಮಹಾಪುರುಷನ ಬಳಿ ಬರಲು ಭಯವೇ ?

ಸ್ನೇಹಳ ಮಸ್ತಕದ ಮೇಲೆ ಹಸ್ತಸ್ಪರ್ಶ ಮಾಡಿ ಸಂತೋಷಬಾಬು ಮೆಲ್ಲ ಮೆಲ್ಲಗೆ, ' ನಾನು ನಿನಗೆ ಬಹಳ ಕಷ್ಟ ಕೊಟ್ಟೆ ತಾಯಿ, ನಿನ್ನ ಮನೆಯಲ್ಲಿ ನೀನು ಇಷ್ಟು ದಿನ ಸ್ಥಾನ ಪಡೆದಿರಲಿಲ್ಲ. ನಾನು ಹರಸುತ್ತೇನೆ, ನೀನು ಸುಖಿಯಾಗುವೆ– ' ಎಂದು ಹೇಳಿದನು.

ಬಹಳ ಹೊತ್ತು ಎಲ್ಲರೂ ಸುಮ್ಮನಿದ್ದರು. ಸುಧೆಯು ಪಥ್ಯದೊಂದಿಗೆ ಸುರೇಶನು ಕುಳಿತ ಕಡೆ ಬಂದಳಾದ್ದರಿಂದ ಅವನು ಎದ್ದು ಬದಿಗೆ ಸರಿದು ನಿಂತನು. ಸುಧೆಯು ಸಾವಕಾಶವಾಗಿ ' ಪಿತಾ, ಪಥ್ಯ ತಂದಿದ್ದೇನೆ ತೆಗೆದು ಕೊಳ್ಳಿರಿ ' ಎಂದಳು.

' ಕೊಡು ತಾಯೀ. '

ಸುಧೆಯು ಬದಿಗೆ ಕುಳಿತು ನಿಪುಣ ಹಸ್ತದಿಂದ ಜತನವಾಗಿ ಪಥ್ಯ ಸೇವನ ಮಾಡಿಸಿದಳು. ಸ್ನೇಹಳು ಈ ಮೊದಲೇ ಬಾಗಿಲೊಳಗಿಂದ ಸುಧೆಯ ಸ್ವಭಾವವನ್ನು ಗುರುತಿಸಿದ್ದಳು ಮತ್ತು ಆನಂದದಿಂದ ಅವಳ ಪ್ರತಿ ಕೆಲಸವನ್ನೂ ಪ್ರಶಂಸಾಪೂರ್ಣ ದೃಷ್ಟಿಯಿಂದ ನಿರುಕಿಸುತ್ತಿದ್ದಳು. ಅವಳ ಉದಾರತಾ ವ್ಯಂಜಕ ಮುಖಮಂಡಲ, ಜಲಪೂರ್ಣ ಆಯತನಯನ, ಅನಿಂದ್ಯ ಸುಂದರ ಕಾಂತಿ, ಇವೆಲ್ಲಕ್ಕೆ ಕಳಸವಿಟ್ಟ ಹಾಗೆ ಅವಳ ಸ್ನೇಹಪೂರ್ಣ ವ್ಯಾವಹಾರ ಮತ್ತು

ಸರ್ವಕರ್ಮನಿಪುಣತೆ ಇಷ್ಟೆಲ್ಲ ನೋಡಿ, ಭಕ್ತಿಮಿಶ್ರಿತ ಪ್ರೇಮದಿಂದ ಸ್ನೇಹಳ ಮನವು ತುಂಬಿ ಬರತೊಡಗಿತ್ತು. ತಂದೆ ಮಕ್ಕಳು ಮಿಲನೋಚ್ಛ್ವಾಸದಲ್ಲಿ ಕಂಬನಿಯ ಸುರಿಸುವಾಗ, ಸುಧೆಯು ಮುಖ ತಿರುಗಿಸಿಕೊಂಡು ತಾನೂ ತನ್ನ ತೇಜಃಪುಂಜವಾದ ಆಯತ ನಯನಗಳಿಂದ ಹನಿಗರೆಯುತ್ತಿದ್ದಳು. ಮುತ್ತಿ ನೀರು ಧಾರೆಯಾಗಿ ಅವಳ ಉಜ್ವಲ ಕಪೋಲಗಳನ್ನು ತೋಯಿಸುತ್ತಿತ್ತು. ಆಗ ಬಾಗಿಲೊಳಗಿಂದ ಆ ನೋಟವನ್ನು ನೋಡಿ, ಓಡಿಹೋಗಿ ಅವಳನ್ನು ಅಪ್ಪಿಕೊಂಡು ಸ್ನೇಹಳಿಗೂ ಅಳುವಹಾಗಾಗಿತ್ತು. ಆದರೆ ಅದು ಸಾಧ್ಯ ವಾಗಿರಲಿಲ್ಲ. ಈ ವರೆಗೆ ಕೇವಲ ಲುಬ್ಧನೇತ್ರಗಳಿಂದ ಅವಳ ಪ್ರತ್ಯೇಕ ಕಾರ್ಯವನ್ನೂ ಪ್ರತ್ಯೇಕ ಭಂಗಿಯನ್ನೂ ಪ್ರಶಂಸಾ ನಯನಗಳಿಂದ ನೋಡುತ್ತಿದ್ದಳು. ಜೀವನದಲ್ಲಿ ತಾಯಿಯನ್ನಲ್ಲದೆ ಇನ್ನಾರನ್ನೂ ನೋಡಿ ಅವಳಿಗೆ ಗೊತ್ತಿಲ್ಲ. ಎಂದೇ ಸುಧೆಯುಸಹಿತಿದ್ದ ತನ್ನ ಜಟಿಲ ಸಂಬಂಧವನ್ನು ನೆನಸಿ ಅವಳ ಗುಣಗಳನ್ನು ಏಳಿಸಿ ನೋಡುವ ಕೀಳುತನವನ್ನು ಕಲಿತಿಲ್ಲ ಸ್ನೇಹಾ. ಮನದಲ್ಲಿಯೇ, "ಆಹಾ– ನನ್ನ 'ಅಕ್ಕ' ನೋಡಿದರೆ ಎದೆಯಲ್ಲಿ ಅಕ್ಕರೆ ಉಕ್ಕಿಬರುವಹಾಗಿದ್ದಾಳೆ" ಎಂದುಕೊಳ್ಳುತ್ತಿದ್ದಳು.

ಆದರೆ ಅದೇ ಅಕ್ಕನನ್ನು ಈಗ ತೀರ ಹತ್ತಿರದಲ್ಲಿ ಕಂಡು ಅವಳ ವಿಶ್ವಸ್ತ ಹೃದಯವು ಅದೇಕೋ ಹೆದರಿ ಗಡಗಡ ನಡುಗಿತು. ಅಕ್ಕನ ಆ ಸ್ನೇಹಮಯ ಮುಖಮಂಡಲವು ಒಂದು ನಿಮಿಷದಲ್ಲಿ ಏನೋ ಒಂದು ಬಗೆಯಾಗಿ ಹೋಗಿದೆ! ಅವಳ ಆರಕ್ತ ಮುಖದಲ್ಲಿಯ ಆಯತಕೃಷ್ಣನಯನಗಳೆರಡರಿಂದ ಅಸ್ವಾಭಾವಿಕವಾದ, ಅಸಹನೀಯವಾದ ಜ್ಯೋತಿಯು ಹೊರಬರುತ್ತಿದೆ!

ಸಂತೋಷಬಾಬುವಿನ ಪಥ್ಯಸೇವನವು ಮುಗಿಯುತ್ತಲೇ ಸುಧೆಯು ಎದ್ದು ನಿಂತಳು. ಸಂತೋಷಬಾಬು ಸ್ನಿಗ್ಧ ಸ್ವರದಲ್ಲಿ 'ತುಸು ನಿಲ್ಲು ತಾಯಿ!— ನನ್ನ ಚಿಕ್ಕ ತಾಯಿ, ಹೀಗೆ ಬಾರಮ್ಮಾ!' ಎಂದು ಹೇಳಿದನು. ಸ್ನೇಹಳು ಅಪ್ಪಣೆಯಂತೆ ಶಯ್ಯಾಪ್ರಾಂತದಲ್ಲಿ ಹುದುಗಿ ನಿಂತಳು. ಅಕ್ಕನ ಕಡೆಗೆ ನೋಡುವ ಸಾಹಸವಾಗಲಿಲ್ಲ ಅವಳಿಗೆ. ಸಂತೋಷಬಾಬು ಮೆಲ್ಲ ಮೆಲ್ಲಗೆ ಸ್ನೇಹಳ ಕಂಪಿತ ಹಸ್ತವನ್ನು ಒಂದು ಕೈಯಲ್ಲಿ ಕೊಂಡು, ಇನ್ನೊಂದ ರಿಂದ ಸುಧೆಯ ಬಲಗೈ ಹಿಡಿದು, ಅದರಲ್ಲಿ ಸ್ನೇಹಳ ಹಸ್ತವನ್ನಿಟ್ಟನು. ತೊಯ್ದ ಕಂಗಳಿಂದ ಸುಧೆಯನ್ನು ನೋಡಿ ನಡುಗುವ ದನಿಯಲ್ಲಿ 'ತಾಯಿ, ನಾನು ಇವಳನ್ನು ನಿನಗೆ ಒಪ್ಪಿಸಿ ಹೋಗುವೆ. ಇವಳು ನಿನ್ನ ಸಣ್ಣ ತಂಗಿ. ಚಿಕ್ಕ ತಾಯೀ, ನಿನ್ನ ಅಕ್ಕನಿಗೆ ಪ್ರಣಾಮ ಮಾಡು. ಅವಳು

ವೇಷಿ ’ ಎಂದು ಹೇಳಿದನು. ಸ್ನೇಹಳು ಕಂಪಿತ ಹೃದಯದಿಂದ ನಮಸ್ಕಾರ ಮಾಡಿ ಏಳುತ್ತಲೇ ಮೆತ್ತನ್ನ ತೋಳೊಂದು ಸ್ನೇಹಳ ಒಂದು ಕೈಯನ್ನು ಸುತ್ತಿಕೊಂಡು ಹತ್ತಿರ ಸೆಳೆದುಕೊಂಡಿತು. ಸ್ನೇಹಳು ನೋಡುತ್ತಾಳೆ- ಅವಳು ಅಪೂರ್ವ ಸ್ನೇಹಮಯ ದೇವಿಯೋ ಸ್ತ್ರೀ ! ಆಹೇ ಆ ಉಜ್ವಲ ನೇತ್ರಗಳು ಈಗ ಸ್ನೇಹಳ ಭೀತ ಹೃದಯವನ್ನು ಸಂತೈಸಿ, ಶಾಂತ ಸ್ನೇಹ ಸುಧೆಯನ್ನು ಧಾರೆಯಾಗಿ ಎರೆಯುತ್ತಿವೆ ! ಸ್ನೇಹಳು ಕರಗಿ ನೀರಾಗಿ ಸುಧೆಯ ಎದೆಗೆ ತನ್ನ ತಲೆ ತಾಕಿಸಿ ಮೃದುವಾಗಿ ಮಧುರವಾಗಿ ‘ ಅಕ್ಕ ! ’ ಎಂದಳು.

* * * * * *

ಸುಧೆಯ ಅಶ್ರಾಂತ ಶುಶ್ರೂಷೆ ಮತ್ತು ಸುರೇಶನ ಕ್ಲಾಂತಿಹೀನ ಪ್ರಯತ್ನದಿಂದಲೂ ಸಂತೋಷಬಾಬು ತನ್ನ ಹೊಸದಾಗಿ ಹೂಡಿದ ಸ್ನೇಹ-ಸಂಸಾರದ ಆನಂದಭೋಗವನ್ನು ಬಹಳ ದಿನ ಅನುಭವಿಸಲಿಲ್ಲ. ತನ್ನ ಆಸನ್ನ ಮರಣದ ಆಶಂಕೆಯಿಂದ ವ್ಯಾಕುಲಗೊಂಡ ಕೆಲ ಜೀವಗಳು ಬೇಸರಿಲ್ಲದೆ, ತಮ್ಮ ಬೇಕು ಬೇಡಗಳ ಮಾತನ್ನೇ ಮರೆತು, ಒಮ್ಮನದಿಂದ ತನ್ನ ಸೇವಾ ಶುಶ್ರೂಷೆಯಲ್ಲಿ ನಿರತರಾಗಿದ್ದರು. ತನ್ನ ಮಹಾಪ್ರಸ್ಥಾನದ ವಿಲಂಬದಿಂದ ಅವರ ಸ್ಥೈರ್ಯ ಭಂಗವಾದೀತೆಂದು ಭಯಗೊಂಡ ಅವನಿಗೆ ಇದ್ದ ಕೆಲ ದಿನಗಳೇ ಬಹು ಉದ್ದವಾಗಿ ತೋರಿದವು ಮತ್ತೊಂದು ಭಯ— ತನ್ನ ಸಮ್ಮುಖದಲ್ಲಿಯೇ ಅವರ ಸ್ಥಾನಮಾನದ, ರೀತಿ ನೀತಿಯ ಪರಿವರ್ತನವಾಗಿ ಹೋದರೆ ! ಸುರೇಶನು ಸುಧೆಯ ಸಂಗಡ ಸಹಜವಾಗಿ ಮಾತಾಡುತ್ತಿರಲಿಲ್ಲ. ಅವಳು ಎದುರಿಗಿದ್ದರೆ ಮೊದಮೊದಲು ತಪಿಸ್ಥನಾಗಿ ಬಿದುತ್ತಿದ್ದನು. ಆದರೆ ಸುಧೆಯು ಅವನೊಡನೆ ಅಸಂಕೋಚವಾಗಿ ಶ್ವಶುರನ ಸೇವಾ ಶುಶ್ರೂಷೆಯ ಸಂಬಂಧವಾಗಿ ಏನಾದರೂ ಆಲೋಚನೆ ಮಾಡತೊಡಗಿದಳೆಂದರೆ ಆಗ ಅವನ ಜೀವ ತಿರುಗಿದಂತಾಗುತ್ತಿತ್ತು, ಮತ್ತು ಸಹಜ ಸರಲಭಾವದಿಂದ ಉತ್ತರ ಕೊಡುತ್ತಿದ್ದನು. ಸಂತೋಷಬಾಬು ಅಂಥ ವೇಳೆಯಲ್ಲಿ ಮನದೊಳಗೇ ಸುಧೆಗೆ ಅಜಸ್ರ ಆಶೀರ್ವಾದ ಕೊಡುತ್ತಿದ್ದನು. ಮತ್ತು ಮೃದುಕಂಠದಲ್ಲಿ- ‘ ಇನ್ನು ನಾನು ಸುಖವಾಗಿ ಹೋಗಬಲ್ಲೆ ’ ಎಂದು ಹೇಳುತ್ತಿದ್ದನು. ಕೊನೆಯ ದಿನ, ಸುರೇಶನು ಎಲ್ಲರ ಸಮ್ಮುಖದಲ್ಲಿ ಪಿತನಿಗೆ ಕೇಳಿದನು, ‘ಪಿತಾ, ನನಗಾಗಿ ಏನಾದರೂ ತಮ್ಮ ಆಜ್ಞೆ ಇದ್ದರೆ ಅಪ್ಪಣೆಕೊಡಿಸಬೇಕು. ’

‘ ಆಜ್ಞೆಯೆ ? ಏನಿದೆ ? ಏನೂ ಇಲ್ಲ. ’

' ಹೇಳಲು ಸಂಕೋಚಪಟ್ಟುಕೊಳ್ಳಬೇಡಿರಿ, ತಂದೆ ! ಕಾಕಾ ಅವರ ಹತ್ತಿರ ಕೇಳಿದ್ದೆ- ನೀವು ನಿಮ್ಮ ಜ್ಯೇಷ್ಠ ವಧುವಿಗೆ ಸಮಸ್ತ ವಿಷಯ ಸಂಪತ್ತಿಯನ್ನು ಕೊಡುವಿರಾಗಿ ಹೇಳಿದ್ದಿರಂತೆ. '

ಸುಧೆಯ ಕಡೆಗೆ ಕಂಣು ಹೊರಳಿಸಿ ಸ್ನೇಹಗದ್ಗದನಾಗಿ ' ನನ್ನ ಈ ತಾಯಿಯನ್ನು ತಿಳಿಯದೇ ಆಗ ಹಾಗೆ ಹೇಳಿದ್ದೆ. ಈಗ ಈ ನನ್ನ ಮಹಾ ಮಾತೆಗೆ ಮನಃಕ್ಲೇಶವನ್ನು ಕೊಟ್ಟು ಲಜ್ಜಿತಳನ್ನಾಗಿ ಮಾಡಿ ಹೋಗಬಲ್ಲೆನೆ ? '

ಸುರೇಶನು ಎರಡೂ ಕೈಗಳಿಂದ ಪಿತನ ಪದತಲ ಸ್ಪರ್ಶಮಾಡಿ, ರುದ್ಧ ಕಂಠನಾಗಿ, ' ಹಾಗಾದರೆ ನನ್ನನ್ನು ನೀವು ಕ್ಷಮಿಸಿರುವಿರಾ ಪಿತಾ ? ' ಎಂದನು.

' ನಿನಗೆ ಕ್ಷಮೆ? ನಿನ್ನ ಮೇಲೆ ಸಿಟ್ಟಾಗುವದು ನನ್ನಿಂದ ಆಗಿತ್ತೇ ಸುರಾ ? ನಿನಗೆ ನ್ಯಾಯವಾಗಿ ಮಾಡಬೇಕಾದಷ್ಟು ಶಾಸನವನ್ನು ಮಾತ್ರ ಆಗಲೇ ಮಾಡಿಬಿಟ್ಟೆನು. '

ಕೆಲಹೊತ್ತಿನ ಮೇಲೆ ಸಂತೋಷಬಾಬುವು ಸ್ವಲ್ಪ ಪ್ರಕೃತಿಸ್ಥನಾಗಿ ಹೇಳತೊಡಗಿದನು, ' ಇನ್ನು ಸಾಕು ಸುರಾ, ಈ ಬಗೆಯ ಮಾತು ನಾನು ಇನ್ನು ಬಹಳ ಆಡುವದಿಲ್ಲ. ನಾನು ಮನಸ್ಸಿನಲ್ಲಿ ಯಾವದೇ ಕ್ಷೋಭವನ್ನು ಇಟ್ಟುಕೊಂಡು ಹೋದೆನೆಂದು ತಿಳಿಯಬೇಡ. ನಾನು ಈಗ ಅತ್ಯಂತ ಸುಖಿಯು; ತೃಪ್ತನು. ನಿನ್ನ ಸ್ಥಾನದಲ್ಲಿ ನಿನ್ನನ್ನೇ ಪ್ರತಿಷ್ಠಾಪಿಸಿ ಹೋಗುವೆ. ನನ್ನ ಜ್ಯೇಷ್ಠ ವಧುಮಾತೆಯ ಸಂಬಂಧವಾಗಿ ನಾನು ನಿನಗೆ ಏನನ್ನೂ ಹೇಳುವದಿಲ್ಲ. ನಾನು ಬಲ್ಲೆ- ಅವಳು ತನ್ನ ಸ್ಥಾನರಕ್ಷಣೆಯನ್ನು ತಾನೇ ಮಾಡಿಕೊಳ್ಳುವಳು. ನನ್ನ ಆ ಮಹಾಮಾತೆಯನ್ನು ನೀನಿನ್ನೂ ಅರಿತಿಲ್ಲ ಸುರಾ ! '

ಇಳಿಹೊತ್ತಿಗೆ, ಪುತ್ರನಿಗೂ ಪುತ್ರವಧುಗಳಿಗೂ ಆಶೀರ್ವದಿಸಿ ಸಂತೋಷಬಾಬುವು ಪ್ರಶಾಂತಚಿತ್ತನಾಗಿ ಚಿರನಿದ್ರಾ ಮಗ್ನನಾದನು. ಸುರೇಶನು ಶಿಶುವಿನಂತೆ ಭೋರಿಟ್ಟು ಅತ್ತನು; ಸ್ನೇಹಳು ಕೆಲದಿನ ಮಾತ್ರ ಮಾವನ ಸ್ನೇಹಸ್ವಾದವನ್ನು ಪಡೆದು, ಮತ್ತೆ ಪಿತೃಮಾತೃಹೀನಳಾಗಿ ಒಂದು ಮೂಲೆಯಲ್ಲಿ ಕುಳಿತು ಬಿಕ್ಕಿ ಬಿಕ್ಕಿ ಅತ್ತು ಅವಶಳಾಗಿ ಮೂರ್ಛೆ ಹೋದಳು. ದಿವಾಣನು ಇಬ್ಬರಿಗೂ ಧೈರ್ಯ ಕೊಟ್ಟು ಸಂತೈಸತೊಡಗಿದನು. ಒಂದು ವ್ಯಕ್ತಿಯು ಮಾತ್ರ ಧೈರ್ಯದ ಪ್ರತಿಮೂರ್ತಿಯಾಗಿ, ಮೌನವಾಗಿ ದಿವಾಣನ ಉಪದೇಶದಂತೆ ಯಥಾಕರ್ತವ್ಯಕರ್ಮಗಳಲ್ಲಿ ಸಹಾಯ ಮಾಡುತ್ತಿದ್ದಳು; ಆದರೂ ಅವ್ಯಕ್ತಯಾತನೆಯಿಂದ ಅವಳ ಹೃದಯವು ಜರ್ಜರಿತವಾದಷ್ಟು

ಇನ್ನಾರದೂ ಆಗಿರಲಾರದು. ಅವಳ ಆ ಯಾರೂ ಅರಿಯದ, ಅಸಾಧಾರಣ ಆತ್ಮಸಿರ್ಭರಶೀಲ ಹೃದಯವು ಇಂದು ಅದೆಷ್ಟು ಶೂನ್ಯವಾಗಿ ಹೋಗಿದೆ ಎಂಬುದನ್ನು ಒಬ್ಬಳೇ ಬಲ್ಲಳು;— ಅವಳು ಸುಧೆಯು.

೧೦

ಸಂತೋಷಬಾಬುವಿನ ಮೃತ್ಯುವಿನ ನಂತರ ಕೆಲದಿನ ಉರುಳಿದವು. ಸುರೇಶನು ಕ್ರಮ ಕ್ರಮವಾಗಿ ಸುಧಾರಿಸತೊಡಗಿದನು. ಅವನು ಸ್ನೇಹಳಿಗಾಗಿ ಇನ್ನೂ ಪ್ರಯತ್ನಪಟ್ಟು ಪ್ರಕೃತಿಸ್ಥನಾಗಬೇಕಾಯಿತು. ಸ್ನೇಹಳು ಅಪರಿಚಿತ ಸ್ಥಾನದಲ್ಲಿ – ಇಲ್ಲಿ ಒಬ್ಬಳೇ. ಪತಿಯ ಬಳಿಗೂ ಅವಳು ತನಗೆ ಬೇಕಾಗಿ ಹೋಗುತ್ತಿಲ್ಲ. ಒಂದು ಮೂಲೆಯಲ್ಲಿ ಒಬ್ಬಳೇ ಕುಳಿತು ಬಿಡುತ್ತಿದ್ದಳು. ಸಂತೋಷಬಾಬುವಿನ ಮೃತ್ಯುವಿನ ಮರುದಿನದಿಂದಲೇ ಸುಧೆಯು ಅವರಿಂದ ದೂರ ಸರಿದು ಬಿಟ್ಟಿದ್ದಾಳೆ. ಆದ್ದರಿಂದ ಅವಶ್ಯವಾಗಿ ಸುರೇಶನಿಗೇ ಹಗಲೆಲ್ಲ ಸ್ನೇಹಳ ಜೊತೆಗಿರಬೇಕಾಗಿಬಂತು.

ದಿವಾಣನು ಒಂದು ದಿನ ಸುಧೆಗೆ, ' ತಾಯೀ, ನಿನ್ನ ಕೈಯಲ್ಲಿಯೇ ಯಜಮಾನರು ಸುರೇಶನನ್ನು ಕೊಟ್ಟುಹೋಗಿದ್ದಾರೆ. ಅವನು ಇನ್ನೂ ಸಂಸಾರದ ಯಾವ ಕೆಲಸವನ್ನೂ ಕಲಿತಿಲ್ಲ. ಕಲಿಯಲು ಪ್ರಯತ್ನಿಸುತ್ತಲೂ ಇಲ್ಲ. ನೀನು ಇಚ್ಛಿಸಿದರೆ ಅವನನ್ನು ಈ ಬಗ್ಗೆ ಚೇತರಿಸಬಲ್ಲೆ ' ಎಂದನು.

ಸುಧೆಯು ಸುಮ್ಮನಿದ್ದು ಆಮೇಲೆ ತುಸು ನಕ್ಕು ಹೇಳಿದಳು, ' ಇಲ್ಲ ಕಾಕಾ, ತಂದೆಯವರಿದ್ದರೆ ಅವಶ್ಯವಾಗಿ ನಾನು ನಿಮ್ಮ ಮಾತು ನಡೆಸುತ್ತಿದ್ದೆ. ಈಗ ಯಾವ ವಿಷಯದಲ್ಲಿಯೂ ನಾನು ಬಾಯಿ ಹಾಕದಿರುವದೇ ಒಳ್ಳೇದು. ಎರಡು ದಿನ ಬಿಟ್ಟು ತಾವೇ ತಿಳಿದು ನಡೆಯಲು ಕಲಿಯುತ್ತಾರೆ. '

' ತಾಯೀ ಸಿಟ್ಟಾಗಬೇಡ. ನೋಡುತ್ತೇನೆ– ನೀನು ಚಿಕ್ಕ ವಧು ಮಾತೆಯು ಅಥವಾ ಸುರೇಶನ ಸಮಾಚಾರವನ್ನು ಒಮ್ಮೆಯೂ ತೆಗೆದುಕೊಳ್ಳುತ್ತಿಲ್ಲ. ಅವರೂ ಈಗ ಶೋಕವ್ಯಾಕುಲರು. ಅವರ ಮನೆಯಾದರೂ ಅವರಿಲ್ಲಿ ನವಾಗತ ಅತಿಥಿಗಳು. ನಾನು ಬಲ್ಲೆ, ನೀನು– ನನ್ನ ತಾಯಿ· ಒಬ್ಬಳೇ ಎಲ್ಲಕ್ಕೂ ಎದೆಗೊಟ್ಟು ನಿಲ್ಲುವಿಯೆಂದು.'

‘ ಎದೆಗೊಟ್ಟು ನಿಲ್ಲಲು ಯತ್ನಿಸುವೆ ಕಾಕಾ, ಪಿತನ ಆಶೀರ್ವಾದವಿದೆ; ಆದರೆ ಈಗ ನನಗೆ ಏನನ್ನೂ ಹೇಳಬೇಡಿರಿ. ’

‘ ಸಂಪೂರ್ಣ ಮನಸ್ಸುಗೊಟ್ಟಿಲ್ಲದಿದ್ದರೂ, ಮುಖದಿಂದಾದರೂ ಆತ್ಮೀಯ ಭಾವವನ್ನು ತೋರಿಸಿ, ಅವರ ಕಲ್ಯಾಣವಾಗುವಹಾಗೆ ಮಾಡುವದು ಉಚಿತವಲ್ಲವೆ ? ’

‘ ಅಲ್ಲ ಕಾಕಾ, ಅದೆಂದಿಗೂ ನನ್ನಿಂದಾಗದು. ಮನಸ್ಸಿನಲ್ಲಿಲ್ಲದಿದ್ದರೆ ಮುಖದಲ್ಲಿಯೂ ಆತ್ಮೀಯತೆ ತೋರಿಸಲಾರೆ. ಹಾಗೆಂದೇ ಎಷ್ಟೋ ಸಲ ನಿಮ್ಮನ್ನೂ ನಿರ್ಲಜ್ಜಳ ಹಾಗೆ ವಿರೋಧಿಸಿ ವರ್ತಿಸಿದ್ದೇನೆ. ಅಲ್ಲದೇ ನನ್ನ ಮನಸ್ಸೂ ಸದಾ ಒಂದೇಬಗೆಯಾಗಿ ಇರುತ್ತಿಲ್ಲ ಕಾಕಾ ! ಒಮ್ಮೊಮ್ಮೆ ಎನಿಸುವದು ಎಲ್ಲವೂ ನನ್ನದೆಂದು, ಮತ್ತೆ ಪರಕ್ಷಣಕ್ಕೇ ಎನಿಸುವದು ಇಲ್ಲ, ನನ್ನದು-ನನ್ನವರು ಇಲ್ಲವೆಂದು ! ತಂದೆಯವರಿದ್ದಾಗ ನಾನು ನಡೆದುಕೊಂಡ ರೀತಿಯನ್ನು ನೆನೆದು ನೀವು ಬಹುತರವಾಗಿ ಆ ಮಾತುಗಳನ್ನು ಹೇಳುತ್ತೀರಿ. ಆದರೆ ತಂದೆಯವರ ಸ್ನೇಹಮೂಲಕವಾಗಿ ಆಗ ನನ್ನ ಮನದಲ್ಲಿ ಅಂಥ ಯಾವ ಕ್ಷೋಭವೂ ಇರಲಿಲ್ಲ. ತಂದೆ ಕಂಡೂ ಕಂಡೂ ಅವರನ್ನು ನನ್ನ ಕೈಯಲ್ಲಿ ಒಪ್ಪಿಸಿದಾಗ, ನನಗನಿಸಿತ್ತು, . . . ಆಃ, ಹೋಗಲಿ ಆ ರಗಳೆ, . . . ನನ್ನ ಮನಸ್ಸಿಗೆ ನೆಟ್ಟಿಗಿಲ್ಲ. ತಂದೆ ತೀರಿದಂದಿನಿಂದ ನನಗೆ ಅವರ ಬಳಿ ಹೋಗಲು ಸಾಧ್ಯವಾಗಿಲ್ಲ. ನನಗೆ ಅದೇಕೋ ಎನಿಸುವದು- ನನ್ನೆಲ್ಲ ಕರ್ತವ್ಯವು ನಿಃಶೇಷವಾಗಿ ಮುಗಿದು ಹೋಗಿದೆ ಎಂದು. ’

ದೀರ್ಘ ನಿಶ್ವಾಸ ಬಿಟ್ಟು ದಿವಾಣನು ಸುಮ್ಮನಾದನು.

ಮಹಾ ಸಮಾರೋಪದಿಂದ ಮತ್ತು ಬಹು ಅರ್ಥವ್ಯಯದಿಂದ ಸ್ವರ್ಗೀಯ ಸಂತೋಷಬಾಬುವಿನ ಶ್ರಾದ್ಧಕಾರ್ಯವು ಸಾಂಗವಾಯಿತು. ಶತ್ರುಪಕ್ಷವೂ ಒಪ್ಪಿ, ‘ ಹಾಂ, ನಿಜವಾಗಿಯೂ ಅವರ ಯೋಗ್ಯತೆಗೆ ತಕ್ಕಂತೆ ಆಯಿತು ’ ಎಂದರು. ಅತ್ಯಧಿಕ ವ್ಯಯವಾದ್ದರಿಂದ ಸುರೇಶನಿಗೆ ತುಸು ಸಾಲವೂ ಆಯಿತು. ದಿವಾಣನಿಗೆ ಇಷ್ಟು ವೆಚ್ಚಮಾಡುವ ಇಚ್ಛೆ ಇರಲಿಲ್ಲ, ಯಾಕೆಂದರೆ ಯಜಮಾನನು ಅತ್ಯಂತ ಮುಕ್ತಹಸ್ತನಿದ್ದಮೂಲಕ ಅಷ್ಟೇನು ಸಂಗ್ರಹಿಸಿ ಹೋಗಲಿಲ್ಲ. ಕೇವಲ ಸುರೇಶನ ಇಚ್ಛೆ ಹಾಗೂ ಆದೇಶದಿಂದ ಹೀಗಾಯಿತು. ಇಂಥ ಸಮಯದಲ್ಲಿ ಪ್ರತಿವಾದವು ಅನುಚಿತವೆಂದುಕೊಂಡು, ದಿವಾಣನಾಗಲೀ ಸುಧೆಯಾಗಲೀ ಹೆಚ್ಚಿಗೆ ಹೇಳಲಿಲ್ಲ.

ಕೆಲವು ವಾರಗಳ ಮೇಲೆ ಒಂದು ದಿನ ದಿವಾಣನು ಸುರೇಶನನ್ನು ಕರೆದು, ವಿಷಯ ಸಂಪತ್ತಿನ ಬಗ್ಗೆ ಅವನ ಹೊಣೆಗಾರಿಕೆಯನ್ನೂ ಯಥಾಕಾರ್ಯ ವನ್ನೂ ತಿಳಿಸಿಕೊಡಲು ಯತ್ನಿಸಿದನು. ಸುರೇಶನು ವಿಸ್ಮಿತನಾಗಿ, 'ಕಾಕಾ- ಇದರರ್ಥವೇನು ? ನೀವಿರುತ್ತಲೇ ನಾನಿದನ್ನೆಲ್ಲ ತಿಳಿದಿರುವ ಅವಶ್ಯಕತೆ ಯಿಲ್ಲ ! ' ಎಂದನು.

' ಮಗು, ಅಣ್ಣನು ಮುಂದೆ ಹೋಗಿದ್ದಾನೆ. ನಾನೂ ಇನ್ನು ಪ್ರಸ್ತುತ ನಾಗಿರಬೇಡವೇ ? ನಾನು ಕಾಶೀವಾಸವನ್ನು ನಿಶ್ಚಯಿಸಿದ್ದೇನೆ. '

ಸುರೇಶನು ಮ್ಲಾನಮುಖದಿಂದ ' ಓ ! ತಿಳಿಯಿತು, ನಾನು ಮತ್ತೊಮ್ಮೆ ಪಿತೃಹೀನನಾಗಲು ಬೇಕು ' ಎಂದನು.

ದಿವಾಣನು ಅವನಿಗೆ ವಿಧವಿಧವಾಗಿ ತಿಳಿಸಲು ಯತ್ನಿಸಿದನು. ಆದರೆ ಸುರೇಶನು ಏನೂ ಉತ್ತರವನ್ನೇ ಕೊಡದೆ ಎದ್ದು ಹೋಗಿಬಿಟ್ಟನು. ನಿರುಪಾಯನಾಗಿ ದಿವಾಣನು ಸುಧೆಗೆ ತನ್ನ ಅಭಿಪ್ರಾಯವನ್ನು ತಿಳಿಸಿದನು. ಸುಧೆಯು ವ್ಯಗ್ರಳಾಗಿ, ' ಇಲ್ಲ ಕಾಕಾ, ಈಗ ನಿಮ್ಮನ್ನು ಎಂದಿಗೂ ಹೋಗ ಗೊಡಲಾರೆ ' ಎಂದಳು.

' ಮಾತಾ, ನೀನು ಬುದ್ಧಿವಂತೆಯೂ ಹೀಗೆ ಹೇಳುವುದೆ ? '

' ಹೀಗೆ ಹೇಳದೆ ಇನ್ನೇನು ಹೇಳಲಿ ? ಅಂದು ತಂದೆ ಮರಳಿ ಬಾರದಲ್ಲಿಗೆ ಹೋದರು. ಇಷ್ಟರಲ್ಲಿ ನೀವೂ ಹೊರಟರೆ, ನಿಃಸಂಶಯವಾಗಿಯೂ ನಮ್ಮ ವಂಶವು ಧ್ವಂಸವಾಗಿ ಹೋದೀತು. '

' ಇದೆಂಥ ಮಾತು ತಾಯಿ ! ಸುರೇಶನು ವಿಷಯಸಂಪತ್ತಿನ ವ್ಯವಸ್ಥೆ ಯನ್ನು ಅರಿಯನಾದರೂ, ಅವನು ಬಹಳ ಒಳ್ಳೆಯ ಹುಡುಗ- ನಿನಗಿನ್ನೂ ಗೊತ್ತಿಲ್ಲ ತಾಯಿ ! ಹೋಗಲಿ – ಮತ್ತೊಮ್ಮೆ ಹೇಳುತ್ತೇನೆ. ನೀನು ಎಲ್ಲ ಕೇಳಿರುವಿ, ತಿಳಿದಿರುವಿ. ಪ್ರಯೋಜನವೆನಿಸಿದಾಗ ನೀನೇ ಅವನಿಗೆ ಪರಾಮರ್ಶೆ – ಗಿರಾಮರ್ಶೆ ಕೊಡುತ್ತಿರು ಹೀಗೆ ಸರಿದು ನಿಲ್ಲಬೇಡ, ತಾಯಿ!'

' ನೀವು ಮತ್ತೆ ಮತ್ತೆ ಇದನ್ನೇ ಹೇಳುವಿರಿ ಕಾಕಾ ! ನಾನಂತೂ ಸರಿದು ನಿಂತಿಲ್ಲ. ಈಗ ಯಜಮಾನರಾದವರು ಯಾವ ಕೆಲಸದಲ್ಲಿ ನನ್ನ ಸಲಹೆ ಕೋರಿರುವರೆಂದು ನಾನು -- '

' ಹುಡುಗ ಬುದ್ಧಿ; ಅಲ್ಲದೇ ಅವನಾದರೂ ಇನ್ನೂ ಯಾವ ಕೆಲಸವನ್ನೂ ಕೈಕೊಂಡಿಲ್ಲ. ನೀನು ನೀನಾಗಿಯೇ ಏಕೆ ನಿನ್ನ ಸ್ಥಾನ-ಮಾನಗಳನ್ನು ಕಳೆದು ಕೊಳ್ಳುವೆ ಮಾತಾ ! ನಿನ್ನೆ ಕಾರಕೂನನು ಹೇಳಿದನು- ನೀನು ಅವನ ಲೆಕ್ಕ ಪತ್ರ ಏನನ್ನೂ ಈಗ ನೋಡುವದಿಲ್ಲವಂತೆ; ಭಾಂಡಾರಿಯು ಹೇಳಿದನು,

'ತಾಯಿ ಈಗೇನೂ ಹುಕುಮು ಕೊಡುವದಿಲ್ಲ ಮತ್ತು ಕಾರಕೂನನು ನನ್ನ ಮಾತಿಗೆ ಕಿವಿಗೊಡುವದಿಲ್ಲ' ಎಂದು— ಇದೆಲ್ಲ ಏನು ತಾಯಿ ?'

'ನಾನು ಎರಡು ದಿನ ಅವಕಾಶ ತೆಗೆದುಕೊಂಡಿದ್ದೇನೆ ಕಾಕಾ.'

ದಿವಾಣನು ನಿಟ್ಟುಸಿರುಬಿಟ್ಟು ಮ್ಲಾನಮುಖದಿಂದ ತಲೆ ಅಲ್ಲಾಡಿಸುತ್ತ ಹೇಳಿದನು, 'ಇದೆಲ್ಲ ಒಳ್ಳೇ ಲಕ್ಷಣವಲ್ಲ, ಎಂದೇ ನಾನು ಮೊದಲೇ ಹೋಗ ಬಯಸುತ್ತೇನೆ.'

ಈಗ ಸುಧೆಯ ಮುಖವೂ ಮ್ಲಾನವಾಯಿತು. ಗಂಭೀರಳಾಗಿ ಹೇಳಿದಳು, 'ಅದಾಗದು ಕಾಕಾ, ನಾವು ನಿಮ್ಮ ಮಕ್ಕಳು. ನಾವು ತುಸು ತಪ್ಪಿ ಅತ್ತರೆ ನಕ್ಕರೆ, ನೀವು ಹಾಗೆಂದು ನಮ್ಮನ್ನು ಬನ್ನದ ಮುನ್ನೀರಲ್ಲಿ ತೇಲಬಿಟ್ಟು ಹೋಗಿಬಿಡುವಿರಾ ? ಕೆಲವು ದಿನ ನನ್ನನ್ನು ಕ್ಷಮಿಸಿರಿ. ನೀವೇಕೆ ಇದರಿಂದ ಅಸಮಾಧಾನರಾಗುವಿರಿ ? ಯಾರ ಸಂಸಾರವೋ ಅವರಿಗಂತೂ ಇವೆಲ್ಲದರ ಪರಿವೆಯೇ ಇಲ್ಲ !'

ವೃದ್ಧ ದಿವಾಣನು ದೀರ್ಘ ನಿಶ್ವಾಸ ಬಿಟ್ಟು ಕ್ಷೋಭಗೊಂಡ ಸ್ವರದಲ್ಲಿ, 'ನಿನಗೆ ಒಳಿತೆಂದೆನಿಸಿದ್ದು ಮಾಡು, ತಾಯಿ' ಎಂದನು.

'ಅದೇನೇ ಇರಲಿ ಕಾಕಾ, ನಿಮಗೆ ಈಗ ಹೋಗುವದಾಗದು. ಕನಿಷ್ಠ ಒಂದು ವರ್ಷವಂತೂ ಇಲ್ಲವೇ ಇಲ್ಲ. ನಾನೇನೇ ಮಾಡಲಿ— ಇದರಿಂದ ಅವರಿಗೆ ಯಾವ ಕೆಡಕೂ ಇಲ್ಲ—ಆದರೆ ಹಾಗೆಂದು ನಾನು ನಿಮಗೆ ಅವರನ್ನು ತ್ಯಾಗಮಾಡಗೊಡುವದಿಲ್ಲ. ಹೀಗಾದಲ್ಲಿ ಪಿತನು ಸ್ವರ್ಗದಲ್ಲಿ ವ್ಯಥಿತನಾಗ ಬಹುದು.'

ದಿವಾಣನು ಚಿಂತಿತನಾಗಿ ಹೇಳಿದನು, 'ನಾವನ್ನು ನಡೆಯಿಸುವ ನೀನು ಹುಟ್ಟೋಗೆದು ಬಿಟ್ಟೆ; ಸುರೇಶನೂ ಕಂಣೆತ್ತಿ ನೋಡುವದಿಲ್ಲ. ಮುಂದೆ ? ಕೆಲಸ ಕಲಿಸಬೇಕೆಂದು ಕಚೇರಿಗೆ ಕರೆದಿದ್ದೆ. ಏನನ್ನೂ ಕೇಳಿಕೊಳ್ಳದೇ ಅವನು ಎದ್ದು ಹೋಗಿಬಿಟ್ಟನು. ನೀವೆಲ್ಲರೂ ಒಂದೇ ಎಂದು ಕಾಣುತ್ತದೆ. ಒಳ್ಳೇದು; ಹೋಗಬೇಡವೆಂದರೆ ಬಿಟ್ಟೆನೆಂದಿಟ್ಟುಕೊಂಡರೂ, ವಿಷಯವನ್ನು ಕೇಳಲು ತಿಳಿಯಲು ದೋಷವೇನು ? ನಾನೊಬ್ಬನೇ ಮುದುಕ ಮನುಷ್ಯನು ಎಷ್ಟು ದಿನ ಇಂಥ ದೊಡ್ಡ ಭಾರವನ್ನು ಹೊತ್ತುಕೊಂಡು ಹೋಗಬಲ್ಲೆ ? ನನಗೆ ನಿಸ್ತಾರ ಬೇಡವೆ ?'

'ನಿಮಗಾಗದಿದ್ದರೆ ಕಾಕಾ, ಇನ್ನಾರಿಗೂ ಆಗುವದಿಲ್ಲ—ಈಗ ಹೊತ್ತಾಯಿತು ಸ್ನಾನಕ್ಕೆ ಹೋಗಿರಿ.'

ಕೆಲ ದಿನ ಕಳೆದು ಹೋದವು. ಸುರೇಶನು ಒಂದು ದಿನ ಬೇಸರಪಟ್ಟು ಕೊಂಡು ದಿವಾಣನನ್ನು ಕರೆದು ಕೇಳಿದನು, ' ಈಗಿನ ಆಳುಹೋಳುಗಳ ಕೆಲಸದ ಗೊತ್ತು ಗುರಿ ಎಂಬುದೇನೂ ಇಲ್ಲವೇನು ಕಾಕಾ ? ಕಂಡಲ್ಲೆಲ್ಲ ಹೊಲಸು, ನೋಡಿದಲ್ಲೆಲ್ಲ ಅಸಿಯುಸು. ವಿಶೇಷವಾಗಿ ಮನೆಯೊಳಗೆ ಎಲ್ಲವೂ ಬುಡಮೇಲು. ಮಲಗುವ ಕೋಣೆಗಳು ಅತಿ ಹೊಲಸು, ಹಾಸಿಗೆಗಳಂತೂ ಅದಕ್ಕೂ ಹೆಚ್ಚು. ಮನೆಯಲ್ಲಿ ದೀಪ ಹಚ್ಚುವದಿಲ್ಲ, ಕಸಬರಿಗೆ ಆಡಿಸುವ ದಿಲ್ಲ. ಇವರೆಲ್ಲ ಯಾರ ಅಂಕಿತದಲ್ಲಿಯೂ ಇಲ್ಲವೇನು ? '

ದಿವಾಣನು ಗಂಭೀರ ಮುಖದಿಂದ ಹೇಳಿದನು, ' ಅದೆಲ್ಲ ಮನೆಯ ಒಳಗಿನ ಕೆಲಸ. ಪರಿಚಾರಿಕೆಯರೇ ಮಾಡುತ್ತಾರೆ. '

' ಅವರಿಗೆ ಈಗ ಏನಾಗಿದೆ ? ಇಂದು ಬಹಳ ರೇಗಿ ಹೋಗಿದೆ. ನಾನಂತೂ ಅದನ್ನೆಲ್ಲ ಲಕ್ಷ್ಯಕ್ಕೇ ತರುವವನಲ್ಲ. ಆದರೂ ನನಗೇ ಇಂದು ಅಸಹ್ಯವಾಗಿದೆ. '

ಕಾರಕೂನನು ಅಲ್ಲಿಯೇ ಇದ್ದನು; ಅವನು ಹೇಳಿದನು, ' ಪರಿಚಾರಿಕೆ ಯರು ತಮ್ಮ ತಮ್ಮಲ್ಲಿ ಬಡಿದಾಡಿದ್ದರಿಂದ ಇಬ್ಬರು ಹೋಗಿಬಿಟ್ಟಿದ್ದಾರೆ. ಅವರೇ ಮೇಲಿನ ಮನೆಯ ಆ ಎಲ್ಲ ಕೆಲಸ ಮಾಡುತ್ತಿದ್ದರು. ಅಡಿಗೆಯ ಮನೆಯ ಚಾಕರರಂತೂ ನಮ್ಮ ಅವಸ್ಥೆಪಡಿಸಿ ಬಿಟ್ಟಿದ್ದಾರೆ. ಬಡಿದಾಟಕ್ಕೆ ಬೆದರಿ ಅಡಿಗೆಯವನೂ ಬಿಟ್ಟುಹೋದನು. ಹೋಗುವಾಗ ' ಹಿರಿಯೊಡತಿ ಯವರು ಪರಿಚಾರಿಕೆಯರನ್ನು ನೋಡುವದಿಲ್ಲ, ಶಾಸನ ಮಾಡುವದಿಲ್ಲ— ಇನ್ನು ಇಲ್ಲಿ ನಿಲ್ಲುವುದು ಬೇಡ ' ಎಂದು ಹೇಳಿ ಹೋದನು. ನಿನ್ನೆ ರಾತ್ರಿ ಅಡಿಗೆಯವನನ್ನು ಹುಡುಕಿ ಹುಡುಕಿ ಸತ್ತೆ. ಕಡೆಗೆ ಹಾಗೂ ಹೀಗೂ ಮಾಡಿ ಕೆಲಸ ಸಾಗಿಸಿದ್ದಾಯಿತು. '

' ಈ ಎಲ್ಲ ಈ ಬಗೆಯ ಅರಾಜ್ಯಕವೇಕೆ ಕಾಕಾ ? ನೀವು ಇದನ್ನೆಲ್ಲ ನೋಡುವದಿಲ್ಲವೇಕೆ ? '

' ನನಗೆ ಅದೆಲ್ಲ ನೋಡುತ್ತ ಕೂಡುವ ಅವಕಾಶ ಉಂಟೆ ಸುರೇಶ ? ಮನೆಯಲ್ಲಿ ಒಬ್ಬರು ಯಜಮಾನರಾಗಬೇಕು. ವಿಶೇಷವಾಗಿ ಒಬ್ಬ ಗೃಹಿಣಿ ಇಲ್ಲದಿದ್ದರೆ ಸಂಸಾರ ಸಾಗೀತೆ ? ನಿಮಗಂತೂ ಏನೂ ನೋಡಲು ಬೇಡ. '

' ಇದೆಲ್ಲ ನಾನು ನೋಡಬೇಕಾದದ್ದೇ ಕಾಕಾ ? ನಾನು ಎಲ್ಲ ಕೆಲಸ ಬಿಟ್ಟು ಸೇವಕಸೇವಕಿಯರನ್ನು ಅಟ್ಟಿಕೊಂಡು ಅಡ್ಡಾಡಲೇ ? ತಂದೆ ಇದ್ದಾಗ ಇದೆಲ್ಲ ಯಾರು ನೋಡುತ್ತಿದ್ದರು ? '

ದಿವಾಣನು ಏನೂ ಹೇಳಲಿಲ್ಲ. ಕಾರಕೂನನು ಹೇಳಿದನು, ' ದೊಡ್ಡ ಸೊಸೆಯವರು ನೋಡುತ್ತಿದ್ದರು. ಅವರ ಶಾಸನದಲ್ಲಿ ಚಾಕರರು ಗಟ್ಟಿಸಿ ಮಾತನ್ನೂ ಆಡುತ್ತಿರಲಿಲ್ಲ. ಕೆಲಸ ಒಂದಿಷ್ಟು ಅತ್ತ ಇತ್ತ ಆಗಲು ಅವಕಾಶ ನಿತ್ತೆ ? ನಿನ್ನೆ— '

ಸುರೇಶನು ನಡುವೆ ಬಾಯಿ ಹಾಕಿ, ' ತಂದೆಯವರೇನೋ ಹೊರಟು ಹೋದರು— ಮೊದಲು ನೋಡಿಕೊಳ್ಳುತ್ತಿದ್ದವರಂತೂ ಇರುವರಲ್ಲವೆ— ಅವರು ಇದನ್ನೆಲ್ಲ ನೋಡುವದಿಲ್ಲವೇಕೆ ? ' ಎಂದನು.

ದಿವಾಣನು ಮೌನವಾಗಿಯೇ ಇದ್ದನು. ಕಾರಕೂನನು ಭಾವಿಸಿ ಕೊಂಡು ಹೇಳಿದನು, ' ಅವರು ಈಗ ಇದನ್ನೆಲ್ಲ ನೋಡುವದಿಲ್ಲ. ಎಷ್ಟೋ ಹಣ ಹೆಚ್ಚು ಕಡಿಮೆಯಾಯಿತೆಂದು ದಿವಾಣಜೀಯವರು ನನ್ನನ್ನು ಬೈದರು— ಅವರಿಗೆ ಗೊತ್ತಿಲ್ಲ, ವಧು ಮಾತೆಯು ಇದೆಲ್ಲ ನೋಡುವದಿಲ್ಲವೆಂದು ಹೆಚ್ಚು ಕಡಿಮೆಯಾದವು. ಇದರಲ್ಲಿ ನನ್ನ ದೋಷವೇನು— '

ಸುರೇಶನು ಕಾರಕೂನನ ಮಾತು ಕೇಳಿ ತುಸು ನಕ್ಕು ಹೇಳಿದನು, ' ನಿಜ, ನೀನು ಹೆಚ್ಚ ಮಾಡಿದಿ, ದೋಷವು ಕಾಕಾ ಅವರದೇ ಸರಿ ! ಕಾಕಾ, ಏನಾದರೂ ಒಂದು ವ್ಯವಸ್ಥೆ ಮಾಡಿರಿ. ಇಲ್ಲದಿದ್ದರೆ ಇಲ್ಲಿ ಪ್ರಾಣ ಹಿಡಿದು ಕೊಂಡಿರುವದು ಪ್ರಾಣಸಂಕಟವೆ ! '

' ನಾನು ಇನ್ನೇನು ವ್ಯವಸ್ಥೆ ಮಾಡಲಿ ಮಗು. ದೊಡ್ಡ ತಾಯಿಯೇ ಇದನ್ನೆಲ್ಲ ನೋಡಿಕೊಳ್ಳುತ್ತಿದ್ದಳು. '

' ಅವರು ಈಗ ಇದನ್ನೆಲ್ಲ ನೋಡಿಕೊಳ್ಳುವದಿಲ್ಲವೇಕೆ ? '

' ನೀನು ಅವರಿಗೆ ಎಂದೂ ಆ ಭಾರವನ್ನು ಒಪ್ಪಿಸಿಲ್ಲವೆಂದು ಇರಬಹುದು. '

ಸುರೇಶನು ಹುಬ್ಬುಗಂಟ್ಟಿಕ್ಕಿ, ' ಇದು ಅನ್ಯಾಯದ ಮಾತು ಕಾಕಾ ! ಇಷ್ಟು ದಿನ ನಾನೇನು ಭಾರವನ್ನು ಒಪ್ಪಿಸಿದ್ದೆನೆ ? ' ಎಂದನು.

' ಆಗ ಯಜಮಾನರಿದ್ದವರು ಒಪ್ಪಿಸಿದ್ದರು. ಈಗ ನೀನೇ ಯಜಮಾನ! '

' ಯಜಮಾನನಾಗುವದರಲ್ಲಿ ಅನೇಕ ದೋಷವೆಂದು ಕಾಣುತ್ತದೆ. ಈಗ ನನಗೇನು ಮಾಡೆಂದಿರಿ ?— ನಾನು ಹೋಗಿ ಅವರಿಗೀಗ ಹೇಳಿ ಕೊಳ್ಳಲೇ ? '

' ಹೇಳುವದು ಉಚಿತ. ಗೃಹಿಣಿ ಇಲ್ಲದೆ ಈ ಎಲ್ಲ ಕೆಲಸ ಸುಸಿಯುಮು ದಿಂದ ಸಾಗವು. ಮನೆತನಕ್ಕೆ ತಕ್ಕಂತೆ ಒಳ್ಳೇ ಗೃಹಿಣಿಯು ಅವಶ್ಯಕತೆ. ಈ

ಎಲ್ಲ ಕೆಲಸ ಪುರುಷರದಲ್ಲ. ಚಿಕ್ಕ ತಾಯಿ ಇನ್ನೂ ಹುಡಿಗಿಯಾಗಿದ್ದಾರೆಂದು ಕಾಣುತ್ತದೆ. ಇಲ್ಲದಿದ್ದರೆ— '

ಸುರೇಶನು ಒಂದು ಕ್ಷಣ ಭಾವಿಸಿ ಹೇಳಿದನು, 'ಅವರು ಹೇಗೇ ಇರಲಿ, ಪ್ರಧಾನರಿದ್ದವರು ಇದೆಲ್ಲ ಮಾಡುವದುಚಿತ. ತಂದೆ ಅವರನ್ನೇ ಅಲ್ಲವೇ ಈ ಸಂಸಾರದ ಪ್ರಧಾನರನ್ನಾಗಿ ಇರಿಸಿ ಹೋದುದು? ಅವರ ಆ ಅಧಿಕಾರ ದಲ್ಲಿ ಯಾರೂ ಹಸ್ತಕ್ಷೇಪ ಮಾಡಲಿಲ್ಲ. ಅನರ್ಥಕವಾಗಿ ಅವರು ಹೀಗೇಕೆ ಮಾಡುತ್ತಾರೆ? '

' ನೀನು ರೇಗಿಕೊಳ್ಳುವದು ಉಚಿತವಲ್ಲ ಸುರೇಶ. ನೀನು ಯಜಮಾನ ನೆಂದಮೇಲೆ ತುಸು ಸಹನ ಮಾಡಿಕೊಂಡು ಸಾವಧಾನದಿಂದ ಅವರ ಭ್ರಮ ನಿರಸನಮಾಡಬೇಕು. '

' ನಾನು ಯಜಮಾನನಾಗಲು ಒಲ್ಲೆ ಕಾಕಾ! — ಇದೆಲ್ಲ ನನಗೆ ರುಚಿಸುವದಿಲ್ಲ. '

ಆಗ ಸುರೇಶನ ನೆನಪಿಗೆ ಬಂತು- ಪಿತನ ಪರಂಧಾಮವಾದಂದಿನಿಂದ ಸುಧೆಯು ತನ್ನ ಹಾಗೂ ಸ್ನೇಹಳ ಸಮೀಪಕ್ಕೆ ಸಹ ಬಂದಿಲ್ಲ. ಪಿತನ ಅಸ್ವಾಸ್ಥ್ಯದ ಸಮಯದಲ್ಲಿ ಸುಧೆಯು ಸ್ನೇಹಳನ್ನು ಸೆಳೆದು ಎದೆಗವಚಿಕೊಂಡ ರೀತಿ ಯನ್ನು ನೋಡಿ ಸುರೇಶನು ಸ್ನೇಹಳಿಗೆ ಸಂಗಲಾಭವಾಯಿತೆಂದು ನಿಶ್ಚಿಂತ ನಾಗಿದ್ದನು. ಮತ್ತು ಸುಧೆಯ ಆ ಸ್ನೇಹಸಹಜ ನಡವಳಿಯಿಂದ ಅವರಿಬ್ಬರ ನಡುವಿದ್ದ ಅಪ್ರೀತಿಕರ ಸಂಬಂಧದ ಉತ್ತಾಪವನ್ನು ಸ್ನೇಹಳು ಅನುಭವಿಸಲೇ ಬೇಕಾಗುವದಿಲ್ಲವೆಂದೂ ತಿಳಿದಿದ್ದನು. ಅಲ್ಲದೆ ಸ್ನೇಹಳ ಹೃದಯ ಅದೆಷ್ಟು ಸರಳವೆಂದು ಸುಧೆಯು ಅರಿತಿದ್ದಳು. ಸುಧೆಯ ವಿಷಯವಾಗಿ ಇದಕ್ಕೆ ಹೆಚ್ಚು ಸುರೇಶನು ಇನ್ನೇನೂ ವಿಚಾರಿಸಿರಲಿಲ್ಲ; ಅದಕ್ಕೆ ಅವನಿಗೆ ಅವಕಾಶವೂ ಇರಲಿಲ್ಲ, ಇಚ್ಛೆಯೂ ಇರಲಿಲ್ಲ. ಜೀವನದ ಗ್ಲಾನಿಕರ ಸಂಗ್ರಾಮವು ಈಗ ಮುಗಿದುಹೋಗಿದೆ. ಪಿತನು ತನ್ನನ್ನು ಮನಸಾ ಕ್ಷಮಿಸಿ ಸ್ವರ್ಗದಲ್ಲಿ ವಿಶ್ರಮಿ ಸುತ್ತಿದ್ದಾನೆ. ಹೀಗೆ ಸಮಾಧಾನಪಟ್ಟುಕೊಳ್ಳುವಾಗ ಇದೇನು ಈ ವಿಶೃಂಖಲೆ? ಪರಕೀಯಳಂತಿದ್ದ ಸುಧೆಯು ಕೆಲವು ತುಚ್ಛಕಾರಣಗಳ ಮೂಲಕ ಇಂದು ಅವನೆದೆಯಲ್ಲಿ ಕಲಕಲವೆಬ್ಬಿಸಿದ್ದಾಳೆ. ಈ ವಿದ್ರೋಹದಲ್ಲಿ ಅವಳದೇನೂ ಅನ್ಯಾಯವಿಲ್ಲವೆಂದೂ ಒಮ್ಮೊಮ್ಮೆ ಅವನಿಗನಿಸುತ್ತಿತ್ತು. ಅವಳಿಗೆ ಆ ಅಧಿಕಾರವಿದೆ. ಆಗ ಅವನಂದುಕೊಂಡನು, ' ಅದೇನೇ ಇರಲಿ, ಒಂದು ಬಾಯಿಮಾತಿನಿಂದ ಈ ಎಲ್ಲ ಜಂಜಾಲದ ಉತ್ಪಾತವನ್ನು ತಪ್ಪಿಸಬಹುದಾದರೆ

ಅದನ್ನು ತಪ್ಪಿಸಿಬಿಡುವದೇ ಲೇಸು. ನಾನಂತೂ ಅವಳ ಅಧಿಕಾರದಲ್ಲಿ ಯಾವ ಬಗೆಯಿಂದಲೂ ಕೈಹಾಕಿಲ್ಲ, ಕೈಹಾಕುವ ಇಚ್ಛೆಯನ್ನೂ ಇಟ್ಟುಕೊಂಡಿಲ್ಲ— ಎಂದು ಅವಳಿಗೆ ತಿಳಿಸಿ ಹೇಳುವುದರಿಂದ ಎಲ್ಲ ಸರಿಹೋಗುತ್ತಿದ್ದರೆ ನಾನು ಅವಳಿಗೆ ತಿಳಿಸಿ ಹೇಳುವದು ಉಚಿತ.'

ಅಂದು ಅವನು ಸುಧೆಯನ್ನು ಕಾಣಲೆಂದು ತನ್ನ `ಕೋಣೆಯಿಂದ ಹೊರಬಿದ್ದು ವರಾಂಡಾದ ವರೆಗೆ ಬಂದು ಮುಂದೆ ಅಡಿಯಿಡಲಾರದೆ ನಿಂತು ಬಿಟ್ಟನು. ದುರ್ನಿವಾರವಾದ ಸಂಕೋಚವು ಅವನನ್ನು ಮುಂದೆ ಬಿಡಲೊಲ್ಲದು. ಬಹುಯತ್ನದಿಂದ ಅದನ್ನು ಗೆಲ್ಲುತ್ತಲೇ ಇನ್ನೊಂದು ಕುತ್ತು,— ಏನೆಂದು ಮಾತು ಮೊದಲಿಸುವದು? ಅಂತೂ ಸಾಧ್ಯವಾದಷ್ಟು ಸಮಜಗತಿಯಿಂದ ಸುರೇಶನು ಸುಧೆಯ ಕೋಣೆಯಲ್ಲಿ ಕಾಲಿಟ್ಟನು. ಆಗ ಅವಳು ಕಿಡಿಕಿಯ ಬಳಿ ಕುಳಿತು ಏನೋ ಹೆಣೆಯುತ್ತಿದ್ದಳು. ಪದಶಬ್ದವನ್ನು ಕೇಳಿ ಚಕಿತಳಾಗಿ ನೋಡುತ್ತಾಳೆ— ಸಮ್ಮುಖದಲ್ಲಿ ಸುರೇಶ! ಸುಧೆಯು ಅಂದುಕೊಂಡಳು— ಹೀಗೆ ಚಕಿತಳಾಗಿ ತಿರುಗಿ ನೋಡಿರದಿದ್ದರೆ ಕೆಲಕಾಲ ಇದೇ ಬಗೆಯಾಗಿ ಸುಮ್ಮನೆ ಕುಳಿತುಕೊಂಡಿರಬಹುದಾಗಿತ್ತು; ನೋಟ ಕೂಡಿದ ಮೇಲೆ ಸುಮ್ಮನೆ ಕುಳಿತರೆ ಆಗದು. 'ಬಾ' 'ಕುಳಿತುಕೊ' ಎಂದೇನಾದರೂ ಒಂದು ಮಾತು ಹೇಳದಿದ್ದರೆ ಅಸಂಗತವೆನಿಸುವದು. ಸುರೇಶನು ನಿಶ್ಚಯ ವಾಗಿ ಮೊದಲು ಮಾತನಾಡುವದಿಲ್ಲ. ಸುಧೆಯೇ ಮೊದಲು ಒಂದು ಏನಾದರೂ ಅಡಿ ಇಲ್ಲವೇ ಮಾಡಿ ಬಿಡಬೇಕಾದ್ದು. ವಿಪದ್ಗ್ರಸ್ತಳಾಗಿ ಸುಧೆಯು ತ್ರಸ್ತಹಸ್ತದಿಂದ ಹೆಣಿಗೆಯ ಸಾಮಾನುಗಳನ್ನು ಪೆಟ್ಟಿಗೆಯಲ್ಲಿ ಇಡುವ ಉದ್ಯೋಗದಲ್ಲಿ ತೊಡಗಿದಳು.

ಸುಧೆಯ ಸುದೈವದಿಂದ ಸುರೇಶನೇ ಮೊದಲು ಮಾತನಾಡಿದನು, 'ಒಂದು ವಿಷಯವನ್ನು ನಿನ್ನೊಡನೆ ಆಲೋಚಿಸಬೇಕೆನ್ನುತ್ತೇನೆ.'

ಸುಧೆಯು ತನ್ನಲ್ಲಿ ತಾನು ನೆನೆದುಕೊಂಡಳು— 'ಅದು ಗೊತ್ತು.' ಆದರೂ ಅವಳು ತುಸು ವಿಸ್ಮಿತಳಾದಳು— ಅವನು ಏನು ಹೇಳಲು ಬಂದಿರು ವನೋ! ಸುಧೆಯು ತನ್ನ ಅಕುಂಠಿತ ಸ್ಥಿರ ದೃಷ್ಟಿಯನ್ನು ಸುರೇಶನ ಮುಖದ ಮೇಲಿರಿಸಿ, ಸ್ಫುಟಕಂಠದಿಂದ, 'ಯಾವುದಾದರೂ ಕೆಲಸದ ಮಾತೇ ಬಹಳ ಮಾಡಿ?' ಎಂದಳು.

ಸುರೇಶನಿಗೆ ಇನ್ನೊಂದು ದಿನದ ಕಥೋಪಕಥನದ ನೆನಪಾಯಿತು. ಅವಳ ಇಂದಿನ ಈ ಮಾತಿನ ಭಂಗಿಯಿಂದಲೂ ಸುರೇಶನ ರಕ್ತವು ತುಸು

ಕಾದುಕೊಂಡಿತು. ಸುಧೆಯು ಗೊತ್ತುಮಾಡಿಟ್ಟುಕೊಂಡಿದ್ದಾಳೆ– ಸುರೇಶನು ಬಂದರೆ ತನಗೆ ಕೇವಲ ಕೆಲಸದ ಮಾತನ್ನೇ ಹೇಳಲು ಬರುವುದೆಂದು. ಇದೆಂಥ ಉಪಹಾಸ ! ಆದರೆ ತನ್ನ ಅಸಂತುಷ್ಟತೆಯನ್ನು ಮನದಲ್ಲಿ ಹತ್ತಿಕ್ಕಿ ಸುರೇಶನು ಹೇಳಿದನು, ‘ ಹುಂ, ಕೆಲಸದ ಮಾತೇ ಸರಿ. ಮಾತು ಬೇಗ ಮುಗಿಯಲಿಕ್ಕಿಲ್ಲ, ತುಸು ಕುಳಿತುಕೊಳ್ಳುವಾ ’ ಎಂದು ಹೇಳಿ, ಸುರೇಶನು ಒಂದು ಖುರ್ಚಿಯನ್ನು ಎಳೆದುಕೊಂಡು ಕುಳಿತುಬಿಟ್ಟನು.

ಸುಧೆಯು ತಿಳಿದುಕೊಂಡಳು– ಸುರೇಶನು ಇಷ್ಟು ಉಪೋದ್ಘಾತದೊಂದಿಗೆ ತನ್ನ ಸಂಕೋಚವನ್ನು ದೂರಗೊಳಿಸಲು ಮತ್ತು ವ್ಯವಹಾರವನ್ನು ಸಹಜವಾಗಿ ಮಾಡಲು ಹೆಣಗುತ್ತಿದ್ದಾನೆಂದು. ತುಸು ನಗೆಯು ಅವಳ ತುಟಿಗಳ ಮೇಲೆ ಮೂಡಿತು. ಅವಳೂ ಸಹಜ ಸ್ವರದಲ್ಲಿ, ‘ ನೀನು ಬೇಗ ಮುಗಿಸಿದರೆ ನಾನೇನು ತಡಮಾಡುವದಿಲ್ಲ ’ ಎಂದಳು.

ಸುರೇಶನು ಒಂದು ನಿಮಿಷ ಸುಮ್ಮನಿದ್ದು, ‘ ಕಾಕಾ ಹೇಳಿದರು- ನೀನು ಸಂಸಾರದ ಸಂಬಂಧವಾಗಿ ಈಗೇನನ್ನೂ ಕೇಳುವದಿಲ್ಲ, ನೋಡುವದಿಲ್ಲವೆಂದು. ಇದು ನಿಜವೇ ? ’ ಎಂದನು.

‘ ಈ ಮಾತು ಯಾರು ಹೇಳಿದರು ? ಕಾಕಾ ತಾವಾಗಿಯೇ ಹೇಳಿರುವರೆಂದು ತೋರುವದಿಲ್ಲ ’

ಸುರೇಶನು ತುಸು ಅಪ್ರತಿಭನಾಗಿ ಹೇಳಿದನು, ‘ ಕಾಕಾ ಹೇಳಿದರೆಂದೇನಲ್ಲ— ನಾನೇ ಅನ್ನುತ್ತೇನೆ. ’

‘ ನೀನು ? ’

‘ ಹುಂ, ಇದು ಆಶ್ಚರ್ಯದ ಮಾತೇನೂ ಅಲ್ಲ—’

ಸುಧೆಯು ತುಸು ಉತ್ತೇಜಿತಳಾಗಿ ಹೇಳಿದಳು, ‘ ತುಸು ಆಶ್ಚರ್ಯದ ಮಾತೇ ಸರಿ. ನಾನು ಏನು ಮಾಡುತ್ತೇನೆ ಅಥವಾ ಮಾಡುತ್ತಿದ್ದೆ ಎಂಬುದನ್ನು ನೀನೇನು ಬಲ್ಲಿ ? ’

‘ ಗೊತ್ತಿಲ್ಲ. ಇಷ್ಟು ದಿನ ಗೊತ್ತುಮಾಡಿಕೊಳ್ಳುವ ಪ್ರಯೋಜನವೂ ಇರಲಿಲ್ಲ. ಆದರೆ ನಿನ್ನ ಬಳಿಗೇ ನಾವು ಆಶ್ರಯಹೊಂದಿ ಇರುವೆವೆಂದಮೇಲೆ ಈ ವ್ಯರ್ಥ ಗೊಂದಲದ ಕಾರಣವೇನು ? ನೀನು ಇದ್ದಹಾಗೆಯೇ ಇರುವಿಯಷ್ಟೇ ? ತಂದೆ ಎಲ್ಲರ ಮೇಲೆ ನಿನಗೆ ಪ್ರಧಾನ ಪಟ್ಟಗಟ್ಟಿದ್ದಾರೆ. ನಾನೂ ನಿನ್ನನ್ನು ಹಾಗೆಯೇ ಕಾಣುವೆ. ನಾನು ನಿನ್ನ ಅಧಿಕಾರದಲ್ಲಿ ಕೈಹಾಕುವ ಗೊಡವೆಗೆ ಹೋಗಿಲ್ಲ; ಮತ್ತು ಆ ಇಚ್ಛೆಯೂ ಇಲ್ಲ. ನೀನು ಎಂದಿನಿಂದಲೂ

ಸಂಸಾರದ ಇನ್ನುಳಿದವರ ಸುಖಶಾಂತಿಯ ವ್ಯವಸ್ಥೆ ಮಾಡಿಕೊಂಡು ಬಂದಂತೆ ಇಂದೂ ಹಾಗೆಯೇ ಮಾಡು, ಮತ್ತು ನಮಗೂ ಶಾಂತಿಯಲ್ಲಿ ಇರಗೊಡು. '

' ನಾನೇ ನಿಮ್ಮ ಶಾಂತಿಗೆ ಭಂಗ ತಂದೆನೆ ? '

' ಭಂಗತಂದಿರಬೇಡ. ನೀನು ನಿನ್ನ ಅಧಿಕಾರ ತ್ಯಾಗ ಮಾಡಿದ್ದರ ಅರ್ಥವಾದರೂ ಏನು ?

ಸುಧೆಯು ಒಳಗೊಳಗೆ ಕುದಿಯುತೊಡಗಿದಳು. ಏನೋ ಒಂದು ಮಾತು ಆಡಬೇಕೆಂದು ಅತಿ ಚಪಲವಾಯಿತು. ಆದರೂ ಆ ಮಾತನ್ನು ನುಂಗಿ ಕೊಂಡು ಹೇಳಿದಳು, ' ಎಲ್ಲ ಕೆಲಸಕ್ಕೂ ಅರ್ಥ ಉಂಟೆ ? ಇದ್ದರೂ ಅದನ್ನು ಯಾರು ಯಾರಿಗೆ ಹೇಳುತ್ತಾರೆ ? '

' ಒಳ್ಳೇದು, ನೀನು ಹೇಳದಿದ್ದರೂ, ನಿನಗೆ ಈ ಮಾತನ್ನು ತಿಳಿಸಿ ಕೊಡುವದು ನನ್ನ ಕರ್ತವ್ಯವಿತ್ತು, ಎಂದೇ ಹೇಳಿದೆ. ಕಾಕಾ ಅವರೂ ಹೇಳಿದ್ದರು- ನಾನು ನಿನಗೆ ತಿಳಿಸಿಕೊಡುವುದು ಕರ್ತವ್ಯವೆಂದು. '

' ಏನು ತಿಳಿಸಿಕೊಡುವಿ ? '

ಸುರೇಶನು ತುಸು ನಿಂತುಬಿಟ್ಟನು. ಆ ಮೇಲೆ ತುಸು ಕೆಮ್ಮಿ ಗಂಟಲು ಸರಿಪಡಿಸಿಕೊಂಡು ಹೇಳಿದನು, ' ನೀನು ತಂದೆಯುವರಿದ್ದಾಗ ಈ ಮನೆತನದ ಗೃಹಿಣೀಪದವನ್ನು ಸ್ವೀಕರಿಸಿದ್ದಿ. ಈಗ ಅದನ್ನು ತ್ಯಾಗಮಾಡುವದೇಕೆ ? ನೀನು ಮೊದಲು ಇದ್ದಂತೆಯೇ ಈಗಲೂ ಇರುವಿಯಷ್ಟೆ ? '

ಈ ಸಲ ಸುಧೆಗೆ, ಕುದಿಗೆ ಬರುವ ಉಕ್ಕು ಹತ್ತಿಕ್ಕಿಕೊಳ್ಳುವದಾಗಲಿಲ್ಲ. ಆದರೂ ಅವಳು ಧೀರಕಂಠದಲ್ಲಿ ಹೇಳಿದಳು, ' ಹಾಗಿಲ್ಲವೆಂದು ನಾನು ಭಾವಿಸಿಕೊಂಡರೆ ? '

' ಕಾರಣವಿಲ್ಲದೇ ಕಾರ್ಯವಾಗದು. ನಿನಗೆ ಯಾರಾದರೂ ಅಸನ್ಮಾನ ಮಾಡಿದರೆ ? '

' ಇಲ್ಲ. '

ಸುರೇಶನು ತುಸು ಮೌನವಾಗಿದ್ದು, ಆ ಮೇಲೆ ಪ್ರಸನ್ನಮುಖದಿಂದ ಸುಧೆಯು ಕಡೆಗೆ ನೋಡಿ ಹೇಳಿದನು, ' ಹಾಗಾದರೆ ? ನಾವು ಯಾವ ಅಪರಾಧ ವನ್ನೂ ಮಾಡಿಲ್ಲವೆಂದು ನೀನೇ ಒಪ್ಪಿಕೊಳ್ಳುವಿಯೆಂದಮೇಲೆ, ನೀನು ನಿನ್ನ ಅಧಿಕಾರಪದವನ್ನು ಮತ್ತೆ ಸ್ವೀಕರಿಸುವಿಯಷ್ಟೆ ? '

'ಇಲ್ಲ.'

ಸುರೇಶನು ನೀರವನಾದನು. ಉತ್ತರವು ಕ್ಷುದ್ರವಾದರೂ ಅದರ ಸ್ಪಷ್ಟತೆಯು ಅವನಿಗೆ ಅಸಮಾನ ಬೋಧೆಯನ್ನುಂಟುಮಾಡಿತು, ಮತ್ತು ಅವನ ಕರ್ಣಮೂಲವು ಆರಕ್ತವಾಯಿತು. ಕ್ರೋಧವನ್ನು ಸಂವರಣಮಾಡಿ ಕೊಳ್ಳುವ ಪ್ರಯತ್ನವನ್ನೂ ಸಹ ಮಾಡದೇ ಅವನು ಸಗರ್ವದಿಂದ ಹೇಳಿ ದನು, 'ಒಳ್ಳೇದು! ಇದರಲ್ಲಿ ವಿಶೇಷವೇನೂ ನನ್ನ ಸ್ವಾರ್ಥವಿಲ್ಲ. ಯಾರು ಹೇಗಿದ್ದರೋ ಅವರನ್ನು ಹಾಗೆಯೇ ಇರಿಸಬಯಸುತ್ತೇನೆ. ಸ್ವಾರ್ಥವು ಕೇವಲ ಇಷ್ಟುಮಾತ್ರ, ನಾನು ನಿನಗೆ ನನ್ನ ಆವೇದನೆಯನ್ನು ನಿವೇದಿಸಲು ಬರಲಿಲ್ಲ. ನನ್ನ ಕರ್ತವ್ಯವನ್ನು ಮಾಡಲು ಬಂದೆ!'

ಸುಧೆಯು, ಸ್ವಲ್ಪ ವಿದ್ರೂಪದ ಸ್ವರದಲ್ಲಿ ಹೇಳಿಬಿಟ್ಟಳು, 'ಅದು ಗೊತ್ತು. ನಿನ್ನ ನಿಃಸ್ವಾರ್ಥ ಕರ್ತವ್ಯದ ಅನುಗ್ರಹದಿಂದ ನಾನು ಸುಖಿಯಾದೆ.'

ಸುರೇಶನು ಸಿಟ್ಟು ಬೆಂಕಿಯಾಗಿ ಅಲ್ಲಿಂದ ಹೊರಹೊರಟು ಉದ್ಯಾನ ದಲ್ಲಿ ತುಸು ಒಬ್ಬನೇ ತಿರುಗಾಡಿದನು. ಆ ಮೇಲೆ ಅಟ್ಟಾಲಿಕೆಯ ಪ್ರತಿ ಕಕ್ಷಗಳಲ್ಲಿಯೂ ದೀಪಹತ್ತಿದ್ದು ನೋಡಿ ಚೇತನಗೊಂಡನು. ಸಹಸಾ ಅವನಿಗೆ ನೆನಪಾಯಿತು— ಸ್ನೇಹಳು ಒಳಗೆ ಒಬ್ಬಳೇ. ಆಗ ಅವನು ಅಂತಃಪುರದ ಕಡೆಗೆ ಹೊರಟನು.

## ೧೧

ಸುರೇಶನು ಹೊರಟು ಹೋದ ಮೇಲೆ ಸುಧೆಯು ಕೆಲಹೊತ್ತು ಸುಮ್ಮನೆ ನಿಂತುಕೊಂಡಳು. ಆ ಮೇಲೆ ಏನೂ ಆಗಿಲ್ಲವೆನ್ನುವ ಹಾಗೆ ಅವಳು ಹೆಣಿಗೆಯ ಉಪಕರಣಗಳನ್ನು ತೆಗೆದುಕೊಂಡು ಮತ್ತೆ ಕಿಡಿಕಿಯ ಹತ್ತರ ಹೋಗಿ ಕುಳಿತಳು. ಒಮ್ಮನಸ್ಸಿನಿಂದ ಹೆಣೆಯಲು ಹವಣಿಸುತ್ತಿದ್ದರೂ ಅನೇಕ ಮಾತುಗಳು ಅವಳಿಗೆ ನೆನಪಾದವು. ಇನ್ನೊಂದು ದಿನ ಇದೇ ನಿರ್ಜನಕಕ್ಷದಲ್ಲಿ ಆಗಿಹೋದ ಕಥೋಪಕಥನದ ಒಂದೊಂದು ಮಾತೂ ನೆನಪಿಗೆ ಬರತೊಡಗಿದವು. ಅಂದೂ ಮಾತಿನ ಉಪಸಂಹಾರವಾಗಿತ್ತು–ಕಲಹ ದಲ್ಲಿ ಇಂದೂ ಅದೇ ರೀತಿ. ಪತಿಪತ್ನಿಯರ ಮೊದಲ ಆಲಾಪಗಳು ಅತಿ

ಮಧುರವಂತೆ! ಚಿರನವೀನ ಸುಂದರವಂತೆ! ಹೆಣೆಯುವದು ಸಾಗದಾಯಿತು. ಅಧರ ಸಂಪುಟವು ಅಲುಗಿ ನಿಃಶಬ್ದ ನಿಷ್ಠುರ ಹಾಸ್ಯರೇಖೆಯು ಮೂಡಿ ಅವಳ ವ್ಯಂಗ್ಯ – ವ್ಯಂಜಕ ಮನದ ರೀತಿಯನ್ನರುಹಿತು. ಅವಳಃ ನೆನದಿರಬೇಕು, 'ಪತಿಪತ್ನಿಯರು! ಹೌದು, ಒಳ್ಳೆ ಚನ್ನಾಗಿದೆ!'

ಪತಿಯ ಅಂದಿನ ಅವಜ್ಞಾವಾಕ್ಯಗಳು ಮನದಲ್ಲಿ ಒಂದೊಂದಾಗಿ ತೇಲಿ ಬಂದವು. ಅಂದು ಅವಳು ಏನನ್ನೂ ಅರಿಯದೇ ವಿಶ್ವಸ್ತಹೃದಯದಿಂದ ತನ್ನ ಸ್ವಾಮಿಯ ಬಳಿಸಾರಿ ನಿಂತಿದ್ದಳು. ಸ್ವಾಮಿ ಅವಜ್ಞೆಯಿಂದ ಅಟ್ಟಿ ಬಿಟ್ಟಿದ್ದನು. ಆ ಅಪಮಾನವು ಅವಳ ಮನದಲ್ಲಿ ಬಹುದಿನ ಜಾಗೃತವಾಗಿತ್ತು. ಆದರೆ ಇಂದು! ಇಂದು ತಾನೇ ಅವಳೊಡನೆ ಸಂಧಿಸ್ಥಾಪನೆಗಾಗಿ ಬಂದಿ-ದ್ದಾನೆ. ಈಗವನಿಗೆ ಮನದಟ್ಟಾಗಿಹೋಗಿದೆ, ಸುಧೆಯು ಅಷ್ಟು ಕ್ಷುದ್ರಳಲ್ಲ ನೆಂದು! ಅವಳು ಕಾರ್ಯರಂಗದಿಂದ ಒಂದರಗಳಿಗೆ ನ್ಯೈದೆಗೆದರೂ ಅನ್ಯರ ಕ್ಷಯವೃದ್ಧಿಯ ಕಾರಣಳಾಗುವಳೆಂದು! ಈ ಸಂಸಾರದಲ್ಲಿ ಅವಳಿಗೂ ಒಂದು ಸ್ಥಾನವಿದೆ, ಮಾನವಿದೆ!

ಸುರೇಶನ ಅವಜ್ಞೆಯ ಮೂಲಕ ಬಿಸುಟಿಬಿಟ್ಟ ಸ್ಥಾನವನ್ನೇ ಇಂದವನು ತಾನಾಗಿಯೇ ಅವಳ ಮನವೊಲಿಸಿ ಕೊಡಬಂದಿದ್ದಾನೆ! ಸುರೇಶನಿಗೆ ತಾನೂ ಇಂದು ಅವಜ್ಞೆತೋರಿ ಹಿಂದಕ್ಕಟ್ಟಿದ್ದನ್ನು ನೆನೆದು ಅವಳ ಹೃದಯವು ವಿಜಯಾನಂದದಿಂದ ಉಬ್ಬಿಕೊಂಡಿತು. ಅವಳಿಗೆ ಅನಿಸುತ್ತಿತ್ತು—ಅವನನ್ನು ಇನ್ನೂ ಉತ್ಪೀಡಿತನನ್ನಾಗಿ ಮಾಡಿ, ಇನ್ನೂ ಚಂಚಲಗೊಳಿಸಿ, ಇನ್ನೂ ಪರಾಜಿತನನ್ನಾಗಿಸಬಹುದಾದರೆ ತನಗೆ ಇನ್ನೂ ಅದೆಷ್ಟು ಆನಂದ ವಾಗುತ್ತಿತ್ತೊ!

ಮನಸ್ಸು ವ್ಯಗ್ರವಾಗಿ ಶ್ರಾಂತವಾಗಿ ಹೆಣಿಗೆಯನ್ನು ಬದಿಗೆ ಸರಿಸಿ ಸುಧೆಯು ವರಾಂಡಾದಲ್ಲಿ ಬಂದು ನಿಂತಳು. ಈ ಕೆಲವು ದಿನ ಕೇವಲ ಹೆಣಿಗೆಯ ಮನೆಗಳನ್ನು ಗುಣಿಸಿ – ಎಣಿಸಿ, ಸೂಜಿಯಿಂದ ಎಳೆ ತುಂಬಿತುಂಬಿ ಅವಳ ಆಕ್ರಾಂತ ಕರ್ಮರತ ಹೃದಯವು ಕ್ಲಿಷ್ಟವಾಗಿಹೋಗಿತ್ತು. ಎಂದೇ ಅದನ್ನು ಬಿಟ್ಟು ಬೇಸರಗೊಂಡು ಅನ್ಯಮನಸ್ಕಳಾಗಿ ವರಾಂಡಾದ ರೇಲಿಂಗು ಹಿಡಿದು ನಿಂತುಕೊಂಡಳು.

ಸಮ್ಮುಖದಲ್ಲಿಯೇ ತನ್ನ ಬಹುಯತ್ನ – ನಿಯಂತ್ರಿತ ಗೃಹಸ್ಥಾಲಿಯು. ಈ ಕೆಲದಿನ ಅದರ ಕಡೆಗೆ ಕಣ್ಣೆತ್ತಿ ಸಹ ಅವಳು ನೋಡಿಲ್ಲ. ಇಂದು ಸುರೇಶನ ಆಹ್ವಾನದ ಮೂಲಕ, ತನ್ನಿಂದ ಸುರಚಿತವಾದ ಗೃಹಸ್ಥಾಲಿಯು

ತಾನಿಲ್ಲದಾಗ ಹೇಗೆ ಅರಾಜಕವಾಗಿದೆ ಎಂದು ನೋಡಲು, ಅವಳ ಕಂಣು ಗಳು ಆತುರಪಟ್ಟವು.

ಸುಧೆಯು ಕತ್ತಲಲ್ಲಿ ನಿಂತು ನಿಂತು ದುಃಖದಿಂದಲೂ, ಆನಂದದಿಂದಲೂ ನೋಡತೊಡಗಿದಳು---ನಾಲ್ಕೂಕಡೆ ಅವ್ಯವಸ್ಥೆ. ನಾಲ್ಕೂಕಡೆ ವಿಶೃಂಖಲೆ ! ಹೊಸದಾಗಿ ನಿಯೋಜಿತನಾದ ಭಾಂಡಾರಿಯು, ನಿಯಮದಂತೆ ಕೆಲವು ಸಾಮಾನುಗಳನ್ನು ಹೊರಗಿಟ್ಟು, ಕೀಲಿಯ ಕೈ ತೆಗೆದುಕೊಂಡು ಎಲ್ಲಿಯೋ ತಿರುಗಲು ಹೋಗಿಬಿಟ್ಟಿದ್ದಾನೆ. ಮಹಲಿನಿಂದ ಪಾಕಶಾಲೆಗೆ ತಂದ ವಿಧವಿಧದ ಕಾಯಿಪಲ್ಯಗಳು ಒಂದು ಬದಿ ಗುಂಪು ಗುಂಪಾಗಿ ಬಿದ್ದಿವೆ. ಪರಿಚಾರಿಕೆಯರಲ್ಲಿ ಒಬ್ಬಳು ನಗುತ್ತಿದ್ದಾಳೆ. ಒಬ್ಬಳು ಇನ್ನೊಬ್ಬಳಿಗೆ ತಿರಸ್ಕಾರವಾಗಿ ಮಾತನಾಡುತ್ತಾಳೆ. ಒಬ್ಬಳು, ‘ ಕಾಯಿಪಲ್ಯವೆಲ್ಲ ಕೊಳೆತುಹೋಯಿತು. ಹೆಚ್ಚುವಿಯೋ ಇಲ್ಲವೋ ? ’ ಇನ್ನೊಬ್ಬಳು ಝೇಂಕರಿಸಿ ಹೇಳಿದಳು, ‘ ನಾನೇ ನನ್ನ ಜಂಜಾಲದಲ್ಲಿ ಸತ್ತು ಸುಣ್ಣವಾಗಿದ್ದೇನೆ--- ಕಾಯಿಪಲ್ಯ ಹೆಚ್ಚಬೇಕಂತೆ ! ಹೆಚ್ಚಿಕೋ ಬೇಕಾದರೆ ! ಹೆಚ್ಚಿಯೂದರೂ ಮಾಡುವದೇನು ? ಹೊಸ ಅಡಿಗೆಯವನು ಕುಚ್ಚಿಟ್ಟಿದ್ದು ಕಂಣೆತ್ತಿ ನೋಡುವ ಹಾಗಿರುವದಿಲ್ಲ ! ಭೂತಗಳೂ ತಿನ್ನಲು ಹಿಂದೆಗೆಯುವವು ! ಒಂದಿಷ್ಟು ಹಸಿಬಿಸಿ. ಉಳಿದಷ್ಟು ಹೊತ್ತಿ ಕರಕು. ಅಲ್ಲದೇ ಎಂಣೆ ತೆಗೆದುಕೊಡುವವರಾವದೂ ಯಾರು ? ಭಾಂಡಾರಿ ಹೋಗಿದ್ದಾನೆ ಯಾವದೋ ಸುಡುಗಾಡಿಗೆ ! ’

ಮೂರನೆಯವಳು ಹೇಳಿದಳು, ‘ ಎಲ್ಲಿಯೋ ತಮಾಸೆ ನಡೆದಿದ್ದೀತು, ಹೋಗಿದ್ದಾನೆ ಇರುಳೆಲ್ಲ, ತಿರುಗದಹಾಗೆ. ’

ಕುದುರೆಯ ಮಾಗಾದವನು ಹೊರಬಾಗಿಲಲ್ಲಿ ನಿಂತು ಒದರಿದನು, ‘ ಕಂಯಿಸ್ ರೋಜ್ ಸೇ ದಾನಾಮೇ ಸ್ರೇಫ್ ಕಮ್‌ತಿ ಪಡ್ತಾ ಹೈಂ ಔರ್ ಪಾಚ್ ಸೇರ್ ದಾನಾ ದೇನಾ--- ಹೋ ಭಾಂಡಾರೀಜೀ ! ’

ಒಬ್ಬ ಪರಿಚಾರಿಕೆ ಚೀತ್ಕಾರ ಮಾಡಿ ಹೇಳಿದಳು, ‘ ಸುಡುಗಾಡಿಗೆ ಹೋಗು ! ಭಾಂಡಾರೀ ಇಧರ್ ಕಹಾಂ ? ಹುಡಿಕಿ ನೋಡಿಕೋ, ಯಹಾಂ ಓ ನಹೀ ಹೈ. ಕಳ್ಳನ್ನ ತಂದು ! ದಾನಾ ಕೆಂವ್ ? ಕದಿಯಲಿಕ್ಕೆ ? ’

‘ ಹಾಂ ಹಾಂ, ಹಮ್‌ಲೋಗ್ ದಾನಾ ಚೋರಿ ಕರ್‍ತೆ ಹೈಂ. ಔರ್ ತುಮ್ ಖಾಲಿ ಪೂಜಾ ಪರ್ ರಹತೇ ಹೋ ? ದೇಖೋತೊ ಕ್ಯಾ ಮುಷ್ಕಿಲ್ ! ಹರ್‌ರೋಜ್ ಐಸಾ ಹೋತಾ ಹೈ. ’ ಕುದುರೆಯವನು ಬಯ್ಯುತ್ತ ಬಯ್ಯುತ್ತ ಹೊರಟು ಹೋದನು.

ಖಾನಸಾಮಾ ರಾಮಚರಣನು ಬಂದು ಗದ್ದರಿಸಿ ಕಂಣು ಗೋಣು ತಿರುಗಿಸಿ ಹೇಳಿದನು, ' ರಂಡೇರು ಇಲ್ಲದ ಕಾರಭಾರ ಮಾಡುತ್ತಾರೆ ! ಇಂದು ಧನಿಯರು ಎಷ್ಟು ಬೈದರು. ದಿವಾಣಜೀಯವರೂ ನನಗೆ ಬೈದರು. ಮುಂಡೇರು ಮೇಲಂತಸ್ತಿನ ಕಸಗಿಸ ಅದೇಕೆ ಗುಡಿಸುವದಿಲ್ಲ ? '

ಪರಿಚಾರಿಕೆಯರು ಆಗ ಎಲ್ಲರೂ ಚೀರಿ ಹೇಳಿದರು, ' ಇರಲಿ, ಹಾದೀ ಹಿಡಿ ! ಸರ್ದಾರಗಿರಿ ತೋರಿಸಲಿಕ್ಕೆ ಬಂದಾನಪ್ಪ ! ನಾವು ಕೆಳಗಿನ ಮನಿ ಕೆಲಸ ಮಾಡೋದು. ಅದಕ್ಕೇ ನಮಗೆ ಹೊತ್ತು ಸಿಕ್ಕುವದಿಲ್ಲ. ಓಡಿ ಹೋದವರೇ ಮೇಲಿನ ಕೆಲಸ ನೋಡಿಕೊಳ್ಳುತ್ತಿದ್ದರು. '

' ಅವರನ್ನು ನೀವೇ ಬಡಿದಾಡಿ ಓಡಿಸಿದಿರಿ ! ಹೊಸ ತೊತ್ತಿಗೆ ಎಲ್ಲ ಹೇಳಿ ಯಾಕೆ ಕೊಟ್ಟಿಲ್ಲ ? ಚಿಕ್ಕ ತಾಯಿ ಇದ್ದಾರೆ, ನನಗೆ ಮೇಲೆ ಹೋಗಲು ಬರುವಂತಿಲ್ಲ ! ಏನೂ ಮಾಡಲಿಲ್ಲ ಮುಟ್ಟಲಿಲ್ಲ, ಬರೀ ಬಡಿದಾಟ ! '

' ಹೌದೋ ಹೌದು. ನೀನು ಮಾತ್ರ ಭಾರಿ ಮಾಡುವಿ. ಅವರನ್ನು ನಾನು ಓಡಿಸಿದೆನೆ ? ತಾ ಬಡದಾಡಿ ಹೋದಳು. ಅಪಕೀರ್ತಿ ನನ್ನ ಮೇಲೆ ? ಇಕಾ ನಾನೂ ಹೊರಟೆ. ಇಷ್ಟು ಮೂಗು ಮುರಿಮುರಿದು ಮಾತಾಡೋದೇಕೆ ? ವಿಚಾರವಿಲ್ಲದ ಮನೆಯಲ್ಲಿ––ಯಜಮಾನ ಯಜಮಾನಿ ಇಲ್ಲದಲ್ಲಿ ಕೆಲಸದ ಜನ ನಿಲ್ಲುವರೆ ? '

' ಹೋಗು ಭಂಡೇ, ಹೋಗು. ನಿನ್ನಂಥವಳು ಸಾವಿರ ಜನ ಸಿಕ್ಕಾರು. ಭಾಂಡಾರಿಕಾಕಾ ಒಳ್ಳೇ ಮೋಜು ಮಾಡಿದ. ಕಾರಕೂನನನ್ನು ಕರೆಸಿ ಕೀಲಿ ಮುರಿಯಬೇಕೆಂದು ತೋರುತ್ತದೆ. ಇಲ್ಲದಿದ್ದರೆ ಎಲ್ಲರೂ ಏನು ತಿನ್ನಬೇಕು ? ನನಗೂ ಸಾಕಾಯಿತು. ಮನೆಯ ಹಾದಿ ಹಿಡಿಯುವದೇ ಸುಖ. '

ಸುಧೆಯು ವರಾಂಡಾದಿಂದ ಸರಿದುಕೊಂಡಳು. ಸುರೇಶನು ಇದನ್ನೆಲ್ಲ ನಿಂತು ನೋಡಿದ್ದರೆ ಆವಳಿಗಿನ್ನೂ ಆನಂದವಾಗುತ್ತಿತ್ತು. ತಾನು ಸಂಸಾರ ದಿಂದ ದೂರ ಸರಿದದ್ದು ಅವನ ಕ್ಷೋಭೆಗಾಗಿ. ಅವನೇ ಇದನ್ನೆಲ್ಲ ನೋಡಿ ಇನ್ನೂ ಕ್ಷೋಭೆಗೊಳ್ಳದಿದ್ದರೆ ಈ ಆಯೋಜನವೆಲ್ಲ ವ್ಯರ್ಥ; ವ್ಯರ್ಥ ಪ್ರಯತ್ನವು ಮಾಡಿದವರನ್ನೇ ಪೀಡಿಸುವದು !

ಆಗ ರಾತ್ರಿಯಾಗಿದೆ. ಎದುರಿಗೆ ಸುರೇಶನ ಶಯ್ಯಾಗ್ರಹದ ಬಾಗಿಲಲ್ಲಿ ಸ್ನೇಹಳು ನಿಂತಿದ್ದಾಳೆ. ಸ್ನೇಹಳು ಸುಧೆಯನ್ನು ನೋಡಿ ತುಸು ಮುಂದರಿದು ಬಂದಳು. ಸುಧೆಯು ನೋಡಿ, ಕೂಡಲೆ ತಿರುಗಿ, ಏನೋ ಕೆಲಸ ಮರೆತವರ

ಹಾಗೆ ತ್ವರಿತ ಗತಿಯಿಂದ ತನ್ನ ಕೋಣೆಗೆ ಹೋದಳು. ಅವಳ ಭಾವನೆ–ಸ್ನೇಹಳು ತಿರಸ್ಕಾರ ಮಾಡಲೆಂದೇ ಬರುತ್ತಿದ್ದಾಳೆ. ಸುಧೆಯು ಮತ್ತೆ ತಿರುಗಿ ನೋಡಲಿಲ್ಲ

ಎದುರಿಗೇ ಮೇಲಿನ ಅಂತಸ್ತಿಗೆ ಹೋಗುವ ಪ್ರಶಸ್ತ ಸೋಪಾನಶ್ರೇಣಿ. ಯಾರೋ ಮೇಲಕ್ಕೆ ಹತ್ತುತ್ತ ಹತ್ತುತ್ತ ಕತ್ತಲಲ್ಲಿ ಎಡವಿ ತ್ರಸ್ತಸ್ವರದಲ್ಲಿ 'ಅಃ!' ಎಂದರು. ಸುಧೆಯು ತಿಳಿದುಕೊಂಡಳು–ಅವನು ಸುರೇಶ. ಬೇಗ ಬೇಗ ಸುಧೆಯು ಒಂದು ಕೋಣೆಯಲ್ಲಿ ಹೊಕ್ಕಳು. ಆ ಮೇಲೆ ಕೇಳಿಸಿತು–ಸುರೇಶನು ನಿರುಪಾಯನಾಗಿ ಉಚ್ಚಕಂಠದಲ್ಲಿ ಆವರಿವರನ್ನು ಕೂಗಿದನು. ಬಹಳ ಕೂಗಿ ಕೂಗಿ ಕರೆದ ಮೇಲೆ ಪರಿಚಾರಕನು ಬಂದು ಬೆಳಕು ತೋರಿಸಲು ಸುರೇಶನು ತನ್ನ ಕೋಣೆಯ ಕಡೆಗೆ ಹೋದನು. ಆ ಮೇಲೆ ಕೇಳಿಸಿತು–ಹೊಸದಾಸಿಗೆ ಪರಿಚಾರಕನು ಬಹು ಕಲರವ ಮಾಡಿ ಎಲ್ಲಿ ಎಲ್ಲಿ ದೀಪ ಹಚ್ಚ ಬೇಕೆಂಬ ಬಗ್ಗೆ ಉಪದೇಶ ಮಾಡುತ್ತಿದ್ದನು. ತುಸು ಹೊತ್ತಿನ ಮೇಲೆ ಹೊಸದಾಸಿಯು ದೀಪದೊಂದಿಗೆ ಬಂದು ತನ್ನ ಕೋಣೆಯ ಬಾಗಿಲನ್ನು ತಟ್ಟಲು ಸುಧೆಯು ಉತ್ತರ ಕೊಡಬೇಕಾಗಿ ಬಂದದ್ದರಿಂದ ಇಂದು ತನಗೆ ದೀಪದ ಆವಶ್ಯಕತೆ ಇಲ್ಲವೆಂದು ಹೇಳಿ ಕಳಿಸಿದಳು.

ಸುಧೆಯು ಮುಂಜಾನೆ ನಿದ್ದೆಯಿಂದೆದ್ದಾಗ ಹೊರಗೆ ಆಗಲೇ ಬಿಸಿಲು ಬಿದ್ದಿತ್ತು. ಎದ್ದು ಕುಳಿತು ಚಕಿತಳಾಗಿ, ಅಭ್ಯಾಸ ವಶದಿಂದ, 'ಓಃ! ಎಷ್ಟು ಹೊತ್ತಾಗಿ ಹೋಗಿದೆ!' ಎಂದುಕೊಳ್ಳುತ್ತಲೇ ಮತ್ತೆ, 'ಹೊತ್ತು ಎಷ್ಟಾದರೇನು? ಆಗದಿದ್ದರೇನು? ಎಲ್ಲಾ ಒಂದೇ' ಎಂದು ಅವಳಿಗೆನಿಸಿತು. ಅವಳು ತನಗೆ ಬೇಕಾಗಿ ತನ್ನನ್ನು ಈ ಅಲಸ ಜೀವನದಲ್ಲಿ ನೂಕಿಕೊಂಡಿದ್ದಾಳೆ. ಇಲ್ಲದಿದ್ದರೆ ಅವಳ ರುದ್ಧದ್ವಾರದ ಮೇಲೆ ಇಷ್ಟು ಹೊತ್ತಿಗೆ ಅದೆಷ್ಟು ಸಲ ಕರಾಘಾತವಾಗುತ್ತಿತ್ತೊ? ಈ ಕರ್ಮಹೀನ ಪ್ರಭಾತವು ಅವಳಿಗೆ ಅತ್ಯಂತ ಆನಂದಹೀನವೆನಿಸಿತು.

ಸುಧೆಯು ಎದ್ದು ಹೊರಬಂದು ವರಾಂಡಾದಲ್ಲಿ ನಿಂತುಕೊಂಡು ಭಾವಿಸ ತೊಡಗಿದಳು–ಕೆಲಸವಿಲ್ಲದೇ ಆಲಸ್ಯದಲ್ಲಿ ದಿನ ಕಳೆಯುವ ಬಗೆ ಹೇಗೆ? ಏನಾದರೂ ಒಂದು ಮಾಡಬೇಕು. ಆದರೆ ಏನು ಕೆಲಸ, ಮತ್ತು ಎಲ್ಲಿಂದ ಅದರ ಪುನರಾರಂಭ ಎಂಬುದಿನ್ನೂ ನಿಶ್ಚಯವಾಗಲೊಲ್ಲದು. ಕೆಳಗೆ ನೋಡಿದಳು–ದಾಸಿಯರ ಮಹಲಿನಲ್ಲಿ ಆಗ ಅದೇ ನಸುಕು! ಇನ್ನೂ ಕುಳಿತಲ್ಲಿಯೇ ಕುಳಿತು ಕೆಲವರು ಆಕಳಿಸುತ್ತಾರೆ, ಹಲವರು ಕಣ್ಣು ತಿಕ್ಕುತ್ತಿದ್ದಾರೆ. ಕೆಲವರು

ಕಾಲು ಚಾಚಿ ಕುಳಿತು ಕಳೆದ ರಾತ್ರಿ ಹುಳದ ದೌರಾತ್ಮ್ಯದಿಂದಾದ ನಿದ್ರಾ ಭಂಗದ ವರ್ಣನೆ ಮಾಡುತ್ತಿದ್ದಾರೆ. ಹಾಸಿಗೆ ಬಿಟ್ಟು ಅದೇ ಏಳಬೇಕೆನ್ನು ತ್ತಾರೆ. ತಂಗಳ ಕೆಲಸವೆಲ್ಲ ಹಾಗೆಯೇ ಬಿದ್ದುಕೊಂಡಿದೆ. ಅತ್ಯಂತ ರೇಗಿ ಹೋಗಿ ಸುಧೆಯು ರೇಲಿಂಗಿನ ಮೇಲಿಂದ ಬಾಗಿ ತುಸು ಉಚ್ಚ ಸ್ವರದಲ್ಲಿ ' ಬಿಂದಿ ! ' ಎಂದು ಕೂಗಿದಳು. ಒಡನೆಯೇ ದಾಸಿಯರ ಮಹಲಿನಲ್ಲಿ ಇಲ್ಲದ ಚಟುವಟಿಕೆ ತಲೆದೋರಿತು. ಬಿಂದಿಯು ಹೆದರುತ್ತ ಮೇಲ್ಗಡೆಗೆ ನೋಡಿ ' ಮೇಲೆ ಬರಹೇಳಿದಿರೇನು ? ' ಎಂದು ಕೇಳಿದಳು. ಸುಧೆಯು ಉತ್ತರವಾಗಿ, ' ಇಲ್ಲ, ನಾನೇ ಕೆಳಗೆ ಬರಬೇಕೇನು ಎಂದು ಕೇಳತಕ್ಕವಳಿದ್ದೆ ' ಎಂದಳು. ಹಿಂದೆ ಹೆಜ್ಜೆಯ ಸಪ್ಪಳ ಕೇಳಿ ಸುಧೆಯು ಚಮಕಿತಳಾಗಿ ನೋಡುತ್ತಾಳೆ—ಸುರೇಶ ! ನಾಚಿಕೆಯಿಂದ ಅವಳಿಗೆ ಗೋಡೆಯೊಳಗೆ ಕೂಡಿ ಹೋಗಬೇಕೆಂದೆನಿಸಿತು,—ಛಿ, ಛಿ, ಸುರೇಶನು ತನ್ನ ಈ ದುರ್ಬಲತೆಯನ್ನು ನೋಡಿಬಿಟ್ಟನು !

ಸುರೇಶನು ಏನೂ ಮಾತನಾಡದೆ ಹಾಗೇ ಕೆಳಗೆ ಹೊರಟು ಹೋದನು. ತಾನೂ ತಿರುಗಿ ಹೋಗತಕ್ಕವಳು. ಅಷ್ಟರಲ್ಲಿ ಆ ಬದಿಯ ಶಯ್ಯಾಗ್ರಹದಿಂದ ' ಅವ್ವಾ ! ಆಃ ' ಎಂಬ ನರಳುವ ಶಬ್ದವು ಕೇಳಿಸಿತು. ಸುಧೆಯು ಹೋಗ ಬೇಕೆಂದವಳು ತಟ್ಟನೆ ನಿಂತುಕೊಂಡಳು. ಮನಸ್ಸಿನಲ್ಲಿಯೇ, ' ಸ್ನೇಹಳಿಗೆ ಮೈಯ್ಯಲ್ಲಿ ನೆಮ್ಮದಿಯಿಲ್ಲವೆಂದು ತೋರುತ್ತದೆ. ಹೋಗಿ ನೋಡುವದುಚಿತ ವಲ್ಲವೇ ? ನೋಡಿಯಾದರೂ ಮಾಡುವದೇನು ? ಅವಳ ಪತಿಗಿಂತ ಹೆಚ್ಚಿ- ಗಿನ್ನಾರು ನೋಡುವರು ! ಆದ್ದರಿಂದ ಇನ್ನೇನಾದರೂ ಕೆಲಸಕ್ಕೆ ಹೋಗುವಾ. ಆದರೆ ಕೆಲಸವಾದರೂ ನನಗೆ ಏನಿದೆ ? ಅವಳ ಪತಿಯಂತೂ ಹೊರಗೆ ಹೋದನು. ಉದ್ವಿಗ್ನವಾದ ಹಾಗೂ ಕಾಣಲಿಲ್ಲ, ಅವರಿಗೆ ಗೊತ್ತಿಲ್ಲವೋ ಏನೋ !— ಇಲ್ಲ ನೋಡಿಯೇ ಬರುವಾ ' ಎಂದು ನಿರ್ಧರಿಸಿಕೊಂಡಳು.

ಸುಧೆಯು ನಿಃಶಬ್ದಪದದಿಂದ ಒಳಗೆ ಹೋಗಿ ಪರ್ಯಂಕದ ಬಳಿ ನಿಂತಳು. ಸ್ನೇಹಳು ಮ್ಲಾನಮುಖಳಾಗಿ ಮಲಗಿದ್ದಾಳೆ. ಯಾತನೆಯ ಚಿನ್ಹವು ಅವಳ ಕ್ಷುದ್ರಲಲಾಟದಲ್ಲಿ ಒಡೆದು ಕಾಣುತ್ತಿದೆ. ಅವಳ ದೊಡ್ಡ ದೊಡ್ಡ ತೂಗುಗಣ್ಣುಗಳ ಕೆಳಗೆ ಕಪ್ಪು ಕಲೆ. ರುಕ್ಷ ಅಯತ್ನರಕ್ಷಿತ ಕೂದಲು ಕೆದರಿ ನಾಲ್ಕೂ ದಿಕ್ಕಿಗೆ ಹರವಿಕೊಂಡಿವೆ. ಮುಖವು ಮುಗ್ಧ ಶಿಶುವಿನಂತೆ. ನೋಡಿದರೆ ಪ್ರೀತಿ ಬರುವ ಹಾಗಿದೆ. ಸುಧೆಯು ಅವಳನ್ನು ಅಕ್ಕರೆಯಿಂದ ನೋಡಿ, ' ಆಹಾ ನೆಮ್ಮದಿಯಿಲ್ಲ ' ಎಂದುಕೊಂಡಳು.

ಮತ್ತೆ ಸ್ನೇಹಳು ಮುಖ ಕಿವಿಚಿ 'ಅವ್ವಾ-ಅವ್ವಾ-ಓಃ' ಎಂದೆನ್ನುತ್ತಲೇ ತನ್ನ ಕೈ ಒಂದು ಅವಳ ಹಣೆಯನ್ನು ತಟ್ಟಿತು. ಈ ಸುಖಸ್ಪರ್ಶಕ್ಕೆ ಚಕಿತಳಾಗಿ ಕಣ್ದೆರೆದು ನೋಡುತ್ತಾಳೆ-ಸುಧೆಯು! ಕಣ್ಣರಳಿಸಿ ಮತ್ತೆ ನೋಡುತ್ತಾಳೆ-ಅವಳೇ. ಸಂಕಟಕಾತರಳಾಗಿ ಸ್ನೇಹಳು ಇಷ್ಟು ಹೊತ್ತು ತನ್ನ ತಾಯಿಯನ್ನು ನೆನೆದುಕೊಳ್ಳುತ್ತಿದ್ದಳು. ಕಣ್ದೆರೆದಾಗ ಮೊದಲವಳಿಗೆ ತಾಯಿಯೆಂದೇ ಭಾಸವಾಗಿತ್ತು. ತಟ್ಟಿದ ಕೈಯಲ್ಲಿ ನೋಡುವ ಕಂಗಳುಗಳಲ್ಲಿ ತನ್ನ ತಾಯಿಯ ನೇಹವಿತ್ತು; ಅವಳ ಕರುಣೆಯಿತ್ತು. ಮತ್ತೆ ಚೆನ್ನಾಗಿ ನೋಡಿಕೊಂಡಾಗ ಅಕ್ಕನೆಂದು ತಿಳಿಯಿತು. 'ಅಕ್ಕ' ಎಂದು ಮೃದುವಾಗಿ ಉಸುರಿ ಅವಳ ಕೈ ಹಿಡಿದು ಎಳೆದುಕೊಳ್ಳುತ್ತಲೇ ಸುಧೆಯು ಸ್ನೇಹಳ ಮಗ್ಗುಲಿಗೆ ಕುಳಿತಳು. ಸ್ನೇಹಳು ಇನ್ನೂ ಅವಳ ಹತ್ತಿರ ಹೋಗಿ ಹೆಗಲ ಮೇಲೆ ಮೊಗವಿಟ್ಟು ಅವಳ ಕಿವಿಯಲ್ಲಿ 'ಅಕ್ಕ' ಎಂದಳು.

ಸುಧೆಯು ಪುಲಕಿತಳಾದಳು. ನಂಬಿ ಬಂದ ಮಗುವನ್ನು ಮೈದಡವಿ ಎದೆಗವಚಿಕೊಳ್ಳಬೇಕೆಂದು ಎನಿಸುವಂತೆ, ಕೂಸಿನಂತಹ ಸ್ನೇಹಳ ಈ ನಡವಳಿಯಿಂದ ಅವಳ ಎದೆ ಜುಮ್ಮೆಂದಿತು. ಕೂಡಲೇ ಸುಧೆಯು ಅವಳ ತಲೆಯನ್ನು ತೊಡೆಯಮೇಲಿರಿಸಿಕೊಂಡು ಮಲಗಿಸಿ ಮೆಲ್ಲಮೆಲ್ಲಗೆ ಮೈದಡವಿ ಹಣೆ ತಟ್ಟುತ್ತ, 'ಎಷ್ಟು ಜ್ವರ ಬಂದಿದೆ? ತಲೆ ನೋಯುವದೇ ನಿನ್ನದು?' ಎಂದು ಕೇಳಿದಳು.

ಸ್ನೇಹಳು ಕಾತರನೇತ್ರಗಳಿಂದ ನೋಡಿ, 'ಓಃ, ಭಯಂಕರ' ಎಂದಳು. ಸುಧೆಯು ಹಾಗೇ ತಲೆತಟ್ಟುತ್ತ, 'ಈಗ ತುಸು ಆರಾಮವೆನಿಸುವದೇ?' ಎಂದಳು.

'ಆಃ! ನಿನ್ನ ಕೈ ಬಹಳ ತಂಪು ಅಕ್ಕ! ಬಹಳ ಆರಾಮವಾಗುತ್ತಿದೆ.' ತುಸು ಹೊತ್ತಿನ ಮೇಲೆ ಸುಧೆಯು ಅವಳ ಗದ್ದವನ್ನು ಹಿಡಿದು, 'ಯಾವಾಗಿನಿಂದ ಮೈಗೆ ನೆಮ್ಮದಿಯಿಲ್ಲ ಸ್ನೇಹಾ?' ಎಂದು ಕೇಳಿದಳು.

'ಜ್ವರ ಬಂದದ್ದು ರಾತ್ರಿ. ನಿನ್ನೆ ಮಧ್ಯಾಹ್ನದಿಂದಲೇ ಅತಿ ತಲೆ ನೋವು.'

'ತಲೆ ನೋಯುತ್ತಿದ್ದರೆ ನಿನ್ನೆ ನೀನೇಕೆ ನನ್ನ ಹತ್ತಿರ ಬರಲಿಲ್ಲ? ಕರೆಯಲಿಲ್ಲವೇಕೆ?'

'ನಿನ್ನೆ ಸಂಜೆ ನೀನು ಹೊರಗೆ ವರಾಂಡಾದಲ್ಲಿ ನಿಂತಾಗ ನಿನ್ನ ಬಳಿಗೆಂದೇ ಹೊರಟಿದ್ದೆ. ನೀನು ನನ್ನನ್ನು ನೋಡಲಿಲ್ಲ ಅಕ್ಕ, ಹಾಗೇ ಹೊರಟು ಹೋದೆ.'

ಅನುತಾಪದ ಆವೇಗದಲ್ಲಿ ಸುಧೆಯು ಹೇಳಿಬಿಟ್ಟಳು, ' ನೋಡದೆ ಏನು ? ನೋಡಿಯೂ ನೋಡದಂತೆ ಹೋಗಿಬಿಟ್ಟೆ— ನನಗೆ ಆಗ ಹೇಳದಷ್ಟು . . . . ' ಎಂದೇನೋ ಹೇಳಬೇಕೆಂದವಳು ಅಷ್ಟಕ್ಕೆ ತಡೆದಳು.

' ನನಗೆ ನೆಮ್ಮದಿಯಿಲ್ಲವೆಂದು ನಿನಗೆ ಆಗ ತಿಳಿದಿರಲಿಲ್ಲ. ತಿಳಿದಿದ್ದರೆ ನನ್ನನ್ನು ನೋಡದೇ ಹೋಗಬಹುದಿತ್ತೆ ?— ಎಂದಿಗೂ ಇಲ್ಲ. '

ಸುಧೆಯು ತನ್ನಲ್ಲಿಯೇ ತಾನೆಂದುಕೊಂಡಳು, ' ನನಗೆ ಹಾಗೆ ವಿಶ್ವಾಸ ವಿಲ್ಲ. ನಾನು ರೇಗಿಕೊಂಡಾಗ ಪುಣ್ಯಕ್ಕೆ ಸ್ನೇಹಳು ಹೆಚ್ಚು ಸಾಹಸ ಮಾಡಿ ನನ್ನ ಬಳಿ ಬರಲಿಲ್ಲ. ಬಂದಿದ್ದರೆ ಏನು ಹೇಳಿಬಿಡುತ್ತಿದ್ದೆನೊ ! '

ಸ್ನೇಹಳು ಸುಧೆಯ ಕೈ ಎತ್ತಿ ಹಣೆಗೆ ಹಚ್ಚಿಕೊಂಡು, ' ಆಃ ಎಷ್ಟು ತಂಪು ! ' ಎಂದಳು.

' ಈಗಲೂ ತಲೆ ನೋಯುವದು ಹಾಗೇ ಇದೆಯೇ ಸ್ನೇಹಾ ? '

' ಹುಂ, ಹೌದು. '

' ಒಂದಿಷ್ಟು ಓ-ಡಿ-ಕೋಲನ್ ಹಣೆಗೆ ಹಚ್ಚಿದರೆ ನೆಟ್ಟಗಿತ್ತು '– ಎಂದೆನ್ನುತ್ತ ಸುಧೆಯು ಎದ್ದಳು. ಟೇಬಲ್ಲಿನ ಮೇಲೆ, ಸೆಲ್ಫಿನ ಮೇಲೆ ಅಲ್ಲಿ ಇಲ್ಲಿ ಹುಡಿಕಿ ಕಡೆಗೆ ಗ್ಲಾಸ್‌ಕೇಸಿನ ಕಡೆಗೆ ನೋಡುತ್ತ ಸಿಡುಕಿನ ದನಿಯಲ್ಲಿ ' ಹೋಯಿತೆಲ್ಲಿ ? ಅಲ್ಮರಿಯಲ್ಲಿ ಟೇಬಲ್ಲಿನಲ್ಲಿ ಮೂರು ನಾಲ್ಕು ಸೀಸೆ ಇದ್ದವಲ್ಲ ? '

' ನಡುನಡುವೆ ತಲೆ ನೋಯುವದು, ಎಂದೇ ತೀರಿಹೋಗಿರಬಹುದು.'

' ನಡುನಡುವೆ ಯಾರ ತಲೆ ನೋಯುವದು ? '

ಸ್ನೇಹಳು ಹಾಸಿಗೆಯಲ್ಲಿ ಮುಖ ಮುಚ್ಚಿಕೊಂಡು, ' ಅವರದು ' ಎಂದು ಮೃದುವಾಗಿ ಉಸುರಿದಳು.

' ತೀರಿದರೆ ಮತ್ತೆ ತರಿಸಿ ಇರಿಸಬಾರದೇನು ? ಮತ್ತೆ ಎಂದೂ ಅದು ಬೇಕಾಗಲಿಕ್ಕಿಲ್ಲ, ಅಲ್ಲವೆ ? ಒಳ್ಳೇ ಎಣಿಕೆಯ ಮನುಷ್ಯರು. ಏನೇ ಆಗಲಿ ! ಸೀಸೆಗಳು ಸಹ ಹಾರಿ ಹೋದವೇನು ? '

' ಪೆಟ್ಟಿಗೆಯ ಬಳಿಗೆ ಗಿಳಿಗೆ ಬಿದ್ದಿರಬಹುದು. '

' ಈಗ ಬೇಕಾಗಿದೆಯಲ್ಲ. ಬಿಂದಿಯನ್ನು ಕರೆದು ತರಿಸುವೆ. '

' ಬೇಡ ಅಕ್ಕ ನೀನು ಹೋಗಬೇಡ. ನಿನ್ನ ತಂಪುಕೈಯಿಂದೇ ತಲೆ ನೋವು ನಿಂತುಬಿಡುವದು, ಹೋಗಬೇಡ. '

' ಹುಚ್ಚಿ ! ಏಳಬೇಡ, ನಾನು ಈಗ ಬಂದುಬಿಟ್ಟೆ. '

ಸುಧೆಯು ಹೋಗಿ ಕೂಡಲೇ ಒಂದು ಸೀಸೆ ಓ-ಡಿ-ಕೋಲನ್ ಮತ್ತು ಒಂದು ತುಣುಕು ಸ್ವಚ್ಛ ಅರಿವೆಯನ್ನು ತೆಗೆದುಕೊಂಡು ಬಂದಳು. ಸ್ನೇಹಳು ಪ್ರತ್ಯಾಶಿತ ನಯನಗಳಿಂದ ಬಾಗಿಲ ಕಡೆಗೇ ನೋಡುತ್ತಿದ್ದಾಳೆ. ಸುಧೆಯು ಅವಳ ಬಳಿ ಬಂದು ಮೆತ್ತಗೆ ಅವಳ ಗಲ್ಲಗಳೆರಡನ್ನು ಹಿಚುಕಿದಳು. ಆಲ್ಹಾದದಿಂದ ಬಾಯ್ತುಂಬ ನಕ್ಕು ಸ್ನೇಹಳು, ' ನೀನು ಬರಲಿಕ್ಕಿಲ್ಲವೆಂದು ಹೆದರಿದ್ದೆ-' ಎಂದಳು.

ಆ ಮಾತಿಗೆ ಉತ್ತರ ಕೊಡದೆ ಸುಧೆಯು, ' ಕಾಜಿನ ಗ್ಲಾಸು ಇಲ್ಲವೇ ಬಟ್ಟಲು ಏನೂ ಕಾಣುವದಿಲ್ಲ; ಯಾವದು ಎಲ್ಲಿಯೋ ಅಲ್ಲಿ ಎಲ್ಲವನ್ನೂ ಇರಿಸಿತ್ತು. ಈಗ ಒಂದೂ ಕೈಗೆ ಸಿಗುವ ಹಾಗಿಲ್ಲ ! ಅಲ್ಮರಿಯ ಕೀಲಿಯ ಕೈ ಎಲ್ಲಿ ? ' ಎಂದಳು.

' ಕೀಲಿಯಕೈ ನನಗೆ ಗೊತ್ತಿಲ್ಲ ಅಕ್ಕ! ಹಾಸಿಗೆಯ ಬುಡಕ್ಕೇನಾದರೂ-'

' ನೀನು ತೊಂದರೆಪಟ್ಟುಕೊಳ್ಳಬೇಡ, ನಾನೇ ಹುಡುಕಿಕೊಳ್ಳುವೆ. '

ಸುಧೆಯು ಹಾಸಿಗೆಯ ನಾಲ್ಕು ಬದಿಗೂ ಹುಡುಕಿದಳು. ಕೀಲಿಯ ಕೈ ಸಿಗಲಿಲ್ಲ. ಇದರಿಂದ ಅವಳು ಸಿಡಿಮಿಡಿಗೊಂಡಳು. ಅದು ಸುರೇಶನ ಮೇಲೆಯೇ ಇರಬೇಕು. ಮನುಷ್ಯನು ಇಷ್ಟೊಂದು ಲಕ್ಷ್ಯಹೀನನಾಗಿ ಅದು ಹೇಗಿರಬಲ್ಲನೋ ? ಸಹಸಾ, ಈಗಿನ ತನ್ನ ಇರುವಿಕೆಯ ರೀತಿಯೇ ನೆನಪಿಗೆ ಬರಲು, ಮನುಷ್ಯನ ಮನಸ್ಸು ವಿಕ್ಷಿಪ್ತವಾಯಿತೆಂದರೆ ಅತಿ ಕಾರ್ಯಕುಶಲಿಯು ಸಹ ಹೀಗೆ ನಿಷ್ಕರ್ಮನಾಗುವದುಂಟು ಎಂದುಕೊಂಡಳು.

ಹಣೆಗೆ ಓ-ಡಿ-ಕೋಲನ್ನಿನ ಪಟ್ಟಿಯನ್ನು ಹಾಕಿಯಾಯಿತು. ಸ್ನೇಹಳ ತಲೆನೋವು ತುಸು ಕಡಿಮೆಯಾಗುತ್ತಲೇ ಅವಳ ತಲೆಯನ್ನು ತಲೆಗಿಂಬಿಗಿಟ್ಟು ಮೆಲ್ಲಗೆ ಗಾಳಿ ಹಾಕುತ್ತ ಸುಧೆಯು, ' ಈಗ ತುಸು ಮಲಗು ನೋಡುವಾ. ಡಾಕ್ಟರನನ್ನು ಕರೆಕಳಿಸಿದ್ದೇನೆ. ಒಮ್ಮೆ ಔಷಧ ತೆಗೆದುಕೊಳ್ಳುತ್ತಲೇ ಜ್ವರ ಇಳಿದು ಬಿಡುವದು. ಈಗ ಮಲಗು ' ಎಂದು ಹೇಳಿದಳು.

' ನಾನಂತೂ ಕಹಿ ಔಷಧ ಕುಡಿಯುವವಳಲ್ಲ ಅಕ್ಕ ! ನರೇಶ ಡಾಕ್ಟರನ ಔಷಧ ಬಹಳ ಕೆಟ್ಟದು. '

' ನರೇಶ ಡಾಕ್ಟರನು ಕಲಕತ್ತೆಯವನೇನು ? ಇಲ್ಲಿಯ ನಮ್ಮ ಡಾಕ್ಟರ್ ಹೋಮಿಓಪೆಥಿ ಗುಳಿಗೆ ಕೊಡುವನು. ತಿನ್ನಲೂ ಸವಿಯಾಗಿದೆ. ಮಲಗು ಮಾತಾಡಬೇಡ. '

ಸ್ನೇಹಳು ಅಕ್ಕನ ಆಜ್ಞೆಯಂತೆ ಮಲಗಲು ಯತ್ನಿಸಿದಳು. ಸ್ವಲ್ಪ ಹೊತ್ತು ಸುಮ್ಮನೆ ಮಲಗಿ, 'ಬರಲೊಲ್ಲದು ಅಕ್ಕ, ನಿದ್ದೆ ಬರಲೊಲ್ಲದು. ಮಾತಾಡೋಣ ಬಾ.'

'ಈಗ ಹರಟೆಯೆ ? ಮಲಗು. ಒಳ್ಳೇದು, ನಿನಗೆ ಜ್ವರ ಬಂದದ್ದು ಅವರಿಗೆ ಗೊತ್ತಿಲ್ಲವೆ ?'

'ಗೊತ್ತಿರಲಿಕ್ಕಿಲ್ಲ. ಬಹಳ ರಾತ್ರಿಯಾದ ಮೇಲೆ ಜ್ವರ ಬಂದದ್ದು. ಆದಕ್ಕೇ.'

'ಮುಂಜಾನೆ ಎದ್ದು ಹೋಗುವಾಗಲೂ ಗೊತ್ತಾಗಲಿಲ್ಲವೆ ?'

'ಆಗ ನಾನು ಮಲಗಿದ್ದೆ.'

'ತಲೆನೋವಂತೂ ನಿನ್ನೆ ಮಧ್ಯಾಹ್ನದಿಂದಲೂ ಇದೆ. ಅದನ್ನೂ ಅರಿಯರೇ ?'

'ಅದು ಗೊತ್ತಿರಬೇಕು. ಹೌದು, ಸಂಜೆಯಲ್ಲಿ ಕೇಳಿದ್ದರು ಹೇಳಿದ್ದೆ.'

'ಎಂದ ಮೇಲೆ ಅದಕ್ಕೆ ಏನಾದರೂ ಮಾಡುವದು ಮುಟ್ಟುವದು ಇಲ್ಲ ವೇನು ? ಕಲಕತ್ತೆಯಲ್ಲಿ ಹೀಗೆಯೇ ಕಾಲಹಾಕುತ್ತಿದ್ದರೇನು ? ಅಲ್ಲಿ ಜಾಡ್ಯ ವಾದಾಗ ಯಾರು ಯಾರನ್ನು ನೋಡುತ್ತಿದ್ದರು ?'

'ಕಾಲೀಪದ ಇದ್ದರಲ್ಲ. ಬಹಳ ಜಾಡ್ಯವಾದಾಗ ಅವರೇ ನೋಡು ತ್ತಿದ್ದರು.'

'ಹೆಚ್ಚು ಹರಟುವದು ಬೇಡವಿನ್ನು; ಸ್ವಲ್ಪ ಮಲಗು.'

ಸ್ನೇಹಳು ಸುಮ್ಮನಿದ್ದು ಕೊನೆಗೆ ನಿದ್ದೆಹೋದಳು.

ಒಂದಿಷ್ಟು ಹೊತ್ತಿನ ಮೇಲೆ ಹೊರಗೆ ಕಾಲುಸಪ್ಪಳ ಕೇಳಿಸಿತು. ಬಂದ- ವರು ಸುರೇಶನೇ ಎಂದುಕೊಂಡು ಸುಧೆಯು ಲಗುಬಗೆಯಿಂದ ಒಳಗಿದ್ದ ಇನ್ನೊಂದು ಬಾಗಿಲಿನಿಂದ ಮತ್ತೊಂದು ಕೋಣೆಯು ಒಳಹೊಕ್ಕಳು. ಸುರೇಶನು ಯಾತಕ್ಕೋ ಒಳಗೆ ಬಂದು ನೋಡುತ್ತಾನೆ—ಸ್ನೇಹಳು ಪಲ್ಲಂಗದ ಮೇಲೆ ಮಲಗಿದ್ದಾಳೆ. ಈ ವೇಳೆಯಲ್ಲಿ ಆದೇಕೆ ಮಲಗಿರುವಳು ಎಂದು ಕೊಂಡು ಮೆಲ್ಲಗೆ ಆವಳ ಹಣೆ ಮುಟ್ಟಿ ನೋಡಿದನು. ಇಷ್ಟರಲ್ಲಿ ಓರ್ವ ದಾಸಿಯು, ಡಾಕ್ಟರನು ಬಂದಿರುವದಾಗಿ ತಿಳಿಸಿದಳು. ಸುರೇಶನು ಆವಸರದ- ಸರದಿಂದ ಆದರೂ ಸದ್ದು ಮಾಡದೆ ಹೊರಗೆ ಬಂದು ಡಾಕ್ಟರನನ್ನು ಒಳಗೆ ಕರೆತಂದನು.

ಡಾಕ್ಟರನು ಸ್ನೇಹಳ ಕೈ ನೋಡಿ, ‘ ಜ್ವರ ಯಾವಾಗ ಬಂದದ್ದು ? ’ ಎಂದು ಕೇಳಿದನು.

ಸುರೇಶನು ಅತ್ತಿತ್ತ ನೋಡುತ್ತ ಅನುಮಾನಿಸುತ್ತ ‘ ಇಷ್ಟೇ ಹೊತ್ತಿಗೆ ಎಂದು ಗೊತ್ತಿಲ್ಲ, ನಿನ್ನೆಯೇ ಇರಬೇಕು. ಎಚ್ಚರಿಸಿ ಕೇಳಲೇನು ? ’ ಎಂದನು.

‘ ಕಾರಣವಿಲ್ಲ. ಸಾಧಾರಣ ಜ್ವರ. ಆದರೆ ಸ್ವಲ್ಪ ಹೆಚ್ಚಾಗಿಯೇ ಬಂದಿದೆ. ಚಿಂತೆಯ ವಿಷಯವೇನೂ ಇಲ್ಲ. ಹೋಗಿ ಔಷಧ ಕಳಿಸುವೆ. ಬೇಗ ನೆಟ್ಟಗಾಗುವದು. ’

ಡಾಕ್ಟರನು ಹೊರಟು ಹೋದನು. ಅಷ್ಟರಲ್ಲಿ ಸ್ನೇಹಳು ಎಚ್ಚತ್ತು ಕಣ್ಣು ತೆರೆಯುತ್ತಲೇ ‘ ಅಕ್ಕ ’— ಎಂದು ಕರೆದಳು.

ಸುರೇಶನು ನೇಹದಿಂದ ಅವಳ ತಲೆಯ ಮೇಲೆ ಕೈಯಿಟ್ಟು ‘ ಇಷ್ಟು ಜ್ವರ ಯಾವಾಗ ಬಂದದ್ದು ? ’ ಎಂದು ಕೇಳಿದನು.

‘ ನೀನು? ನೀನು ಯಾವಾಗ ಬಂದೆ ? ಅಕ್ಕ ಎಲ್ಲಿ ಹೋದರು? ‘ಅಕ್ಕ!’

ಸುರೇಶನು ಬೆರಗಾಗಿ ‘ ಯಾರನ್ನು ಕರೆಯುತ್ತಿರುವೆ ? ಮಲಗು ಇನ್ನಷ್ಟು. ಇಷ್ಟು ಜ್ವರ. ಆದರೂ ಮುಂಜಾನೆ ಏನೂ ಹೇಳಲಿಲ್ಲವೇಕೆ ? ’ ಎಂದನು.

‘ ಆಗ ನಾನು ಮಲಗಿದ್ದೆ. ನಿನ್ನೆ ರಾತ್ರಿ ಜ್ವರ ಬಂದಿತು. ನಿನಗೆ ಯಾರು ಹೇಳಿದರು ? ’

‘ ನೀನು ಅಡ್ಡಹೊತ್ತಿನಲ್ಲಿ ಮಲಗಿದ್ದು ನೋಡಿ ಮೈಗೆ ಕೈಹಚ್ಚಿ ನೋಡಿದೆ. ಮೈ ಕಾವ ಹಂಚಾಗಿತ್ತು. ಅಷ್ಟರಲ್ಲಿ ಡಾಕ್ಟರನೂ ಬಂದನು. ಡಾಕ್ಟರನನ್ನು ಕರೆಕಳಿಸುವಾಗ ನನಗೆ ಏಕೆ ತಿಳಿಸಲಿಲ್ಲ ಸ್ನೇಹಾ ? ’

ಸ್ನೇಹಳು ಬೆರಗಾಗಿ, ‘ ಎಲ್ಲಿ, ನಾನಂತೂ ಡಾಕ್ಟರನನ್ನು ಕರೆಕಳಿಸಲಿಲ್ಲ ವಲ್ಲ ? ’ ಎಂದಳು.

‘ ನೀನು ಕರೆಕಳಿಸಲಿಲ್ಲವೆ ? ಹಾಗಾದರೆ ಇನ್ನಾರು ? ಬಹುತರವಾಗಿ ಊಳಿಗದವರಾದರೂ ತುಸು ತಲೆ ಉಪಯೋಗಿಸಿದಂತೆ ತೋರುತ್ತದೆ. ಮುಂಜಾನೆ ನನಗೆ ಹೇಳಿಕಳಿಸಿ ಜ್ವರದ ಮಾತನ್ನು ನೀನು ತಿಳಿಸುವದು ಉಚಿತವಿತ್ತು, ಸ್ನೇಹಾ ! ’

ಸ್ನೇಹಳು ಅಪ್ರತಿಭಳಾಗಿ, ‘ ಯಾರೊಡನೆ ಹೇಳಿ ಕಳಿಸಲಿ ?--- ಅಕ್ಕ ಮತ್ತೆ ಮತ್ತೆ ಮಲಗಲು ಹೇಳಿದರು--- ’

ಸುರೇಶನು ತಡೆದು, ‘ ಅಕ್ಕ ಯಾರು ? ಮತ್ತೆ ಮತ್ತೆ ನೀನು ಯಾರನ್ನು ಕರೆಯುತ್ತಿದ್ದೆ ? ’

ಸ್ನೇಹಳು ವಿಸ್ಮಿತಳಾಗಿ, ‘ ಅಕ್ಕ ಮತ್ತಿನ್ನಾರು ? ನನ್ನ ಅಕ್ಕ ! ಅವರು ಇಲ್ಲಿಯೇ ಇದ್ದರಲ್ಲ ! ’

ಸುರೇಶನಿಗೆ ಈಗ ತಿಳಿಯಿತು. ಒಂದು ಕ್ಷಣ ಬಿಟ್ಟು, ‘ ಎಲ್ಲಿ ? ಇಲ್ಲ-ವಲ್ಲಾ ! ಯಾರೂ ಇರಲಿಲ್ಲ, ನೀನೊಬ್ಬಳೇ ಮಲಗಿದ್ದೆ ’ ಎಂದನು.

‘ ಹಾಗಾದರೆ ನೀನು ಬರುವ ಮುನ್ನವೇ ಅವರು ಹೋಗಿರಬೇಕು. ’

‘ ನೀನು ಕನಸು ಕಂಡಿರಬೇಕು. ತಲೆ ನೋಯುವದೇ ? ಓ-ಡಿ-ಕೋಲನ್ ಹಾಕಿದ್ದಿಯಾ ? ’

‘ ಈಗ ಕಡಿಮೆಯಾಗಿದೆ. ನಿಂತಿದೆ ಎಂದರೂ ಸರವಿಲ್ಲ. ನೀನೆಂದೆ-ಅಕ್ಕ ಇರಲಿಲ್ಲವೆಂದು, ಕನಸು ಕಂಡೆನೆಂದು. ಇದೋ, ಅವರೇ ಇದನ್ನು ಹಣೆಗೆ ಹಾಕಿದ್ದರು. ಎಷ್ಟೊಂದು ಗಾಳಿ ಹಾಕಿದರು. ಆ ಮೇಲೆ ತಲೆ ನೋವು ಕಡಿಮೆಯಾಯಿತು. ಇಲ್ಲದಿದ್ದರೆ ತಲೆ ನೋವು ಇಷ್ಟಿತ್ತು---ಓಃ ’

ಬದಿಯ ಕೋಣೆಯಲ್ಲಿ ಸುಧೆಯು ಸ್ನೇಹಳ ಮೇಲೆ ಸಿಡಿಮಿಡಿಗೊಂಡು ಸಿಡಿಸಿಡಿದು ಬೀಳುತ್ತಿದ್ದಳು. ‘ ಅಃ, ತಿಳಿಗೇಡಿ ಸ್ನೇಹಾ ! ಇಷ್ಟು ಪೆದ್ದಳನ್ನಂತೂ ನೋಡಲಿಲ್ಲ ! ಛಿ, ಛಿ, ಹೀಗೆ ಹೇಳಬೇಡವೆಂದು ಹೇಳಲಿಕ್ಕೂ ಮರೆತುಬಿಟ್ಟೆನು. ’

ಸುರೇಶನು, ‘ ಇದ್ದೀತು, ಈಗ ಇನ್ನಷ್ಟು ಮಲಗು ನೋಡುವಾ ’ ಎಂದನು.

## ೧೨

ಅಂದಿನ ದಿನ ಸುಧೆಯು ಮತ್ತೆ ಸ್ನೇಹಳ ಸಮೀಪಕ್ಕೇ ಸುಳಿಯಲಿಲ್ಲ. ಸಂಜೆಯಲ್ಲಿ ಸ್ನೇಹಳು ಚಡಪಡಿಸುತ್ತ ಪತಿಗೆ, ‘ ಯಾಕೋ ಅಕ್ಕ ಮತ್ತೆ ಬರಲೇ ಇಲ್ಲವಲ್ಲ ? ನೀನು ಅವರನ್ನು ಒಂದು ಸಲ ಕರೆಕಳಿಸಬಾರದೆ ? ’ ಎಂದಳು.

' ಯಾಕೆ ? ನಿನಗೆ ಏನಾದರೂ ಅನನುಕೂಲವಾಯಿತೇ ಸ್ನೇಹಾ ? ನಾನಂತೂ ಇಂದು ಇಡೀ ದಿನ ಹೊರಗೆ ಹೋಗಿಲ್ಲ; ಇಲ್ಲಿಯೇ ಇದ್ದೇನೆ. ಏನು ಬೇಕು ಹೇಳಬಾರದೆ ? '

ಸ್ನೇಹಳು ಅಪ್ರತಿಭಳಾಗಿ ' ಅಲ್ಲ ಹಾಗಲ್ಲ, ಎಲ್ಲಿ ? ನನಗೆ ಏನೂ ಬೇಕಾಗಿಲ್ಲವಲ್ಲ ! '

' ಒಂದು ಪುಸ್ತಕ ಗಿಸ್ತಕ ಏನಾದರೂ ಓದಲೇನು ? '

' ಬೇಡ, ನೀನು ಹಾಗೇ ಮಾತನಾಡು. '

ರಾತ್ರಿ ಸ್ನೇಹಳ ಜ್ವರ ಇಳಿದವು. ಇರುಳೆಲ್ಲ ಅವಳು ಚೆನ್ನಾಗಿ ಮಲಗಿ ನಿದ್ದೆಮಾಡಿದಳು. ಮುಂಜಾನೆ ಸುರೇಶನು, ' ಈಗಂತೂ ನೆಟ್ಟಗಿರುವೆಯಲ್ಲ ? ಈ ಪುಸ್ತಕವನ್ನು ಮಲಗಿದಲ್ಲಿಯೇ ಓದು, ಹೊತ್ತು ಹೋಗುವದು. ನಾನು ಹೊರಗೆ ಹೊರಟೆ. ಹತ್ತು ಗಂಟೆಯ ಸುಮಾರಿಗೆ ಬಂದು ಮತ್ತೆ ಒಂದು ಗುಳಿಗೆ ಕೊಡುವೆ. ಸೊಗಸೆನಿಸದಿದ್ದರೆ ಹೇಳಿ ಕಳಿಸು. '

ಸ್ನೇಹಳು ಸೆಡವಿನಿಂದ ' ನಾನೇನು ನಿನ್ನೆ ಇಡೀ ದಿನವೆಲ್ಲ ನಿನ್ನನ್ನು ಹಿಡಿದು ಕೂಡಿಸಿದ್ದೆನೆ ? ಹೋಗಲಿಲ್ಲವೇಕೆ ಹೊರಗೆ ? ನಾನಂತೂ ಕರೆದಿರಲಿಲ್ಲ ' ಎಂದಳು.

ಸೆಡವಿನಿಂದುಬ್ಬಿದ ಸ್ನೇಹಳ ಗಲ್ಲದ ಮೇಲೊಂದು ಮೆಲ್ಲನೆಯ ಪೆಟ್ಟು ಹಾಕಿ ಸುರೇಶನು ಹೊರಟು ಹೋದನು. ಸ್ನೇಹಳು ಮಲಗಿದಲ್ಲಿಯೇ ಬೇಸರ ಬರುವ ವರೆಗೆ ಓದಿದಳು. ನಡುನಡುವೆ ಒಮ್ಮೊಮ್ಮೆ ಉತ್ಕಂಠಿತಳಾಗಿ ಬಾಗಿಲ ಕಡೆಗೆ ನೋಡುವಳು—ಯಾರಾದರೂ ಬಂದರೆ ?

ಬಹಳ ಹೊತ್ತು ಓದಿ ಓದಿ ಅವಳ ತಲೆ ಚಿಟ್ಟುಹಿಡಿಯಿತು. ಆಗ ಪುಸ್ತಕ ಒಗೆದು ಸ್ನೇಹಳು ನಾಲ್ಕೂ ಕಡೆ ನೋಡತೊಡಗಿದಳು. ಸಮೀಪದಲ್ಲಿ ಯಾರೂ ಇಲ್ಲ. ತನಗೆ ಸಾಧ್ಯವಾದಷ್ಟು ಉಚ್ಚ ಕಂಠದಲ್ಲಿ ಒಮ್ಮೆ ಕೂಗಿದಳು, ' ಅಕ್ಕ ! ' ಯಾರೂ ಬರಲಿಲ್ಲ. ಸ್ನೇಹಳು ಮುನಿಸಿನಿಂದ ಮುಸುಗುಟ್ಟಿದಳು. ಕಂಣು ಕೆರೆಯಾಯಿತು.

ಒರ್ವ ವಯಸ್ಕ ತೊತ್ತು ಒಳಗೆ ಬಂದು ಕೇಳಿದಳು, ' ಚಿಕ್ಕ ತಾಯಿ, ಕರೆದೆಯೇನು ? ಈಗ ಬಾರ್ಲಿ ತಂದುಕೊಡಲೇನು ? ' ಇದನ್ನು ಕೇಳಿ ಸ್ನೇಹಳು ತುಸು ಬೆರಗಾದಳು. ಯಾಕೆಂದರೆ ದಾಸಿಯರ ಈ ಬಗೆಯ ಕರ್ತವ್ಯಬುದ್ಧಿಯನ್ನು ಇಷ್ಟು ದಿನ ಅವಳು ಕಂಡಿರಲಿಲ್ಲ. ' ನಾನು ಬಾರ್ಲಿ ತೆಗೆದುಕೊಳ್ಳುವದಿಲ್ಲ '. ಎಂದು ಹೇಳಿದಳು.

' ತೆಗೆದುಕೊಳ್ಳುವದಿಲ್ಲ? ಅದೇನು? ತೆಗೆದುಕೊಳ್ಳದಿದ್ದರೆ ಹೇಗೆ? ತರುತ್ತೇನೆ. '

' ಇಲ್ಲ—ಇಲ್ಲ, ತೆಗೆದುಕೊಳ್ಳುವದಿಲ್ಲ. ಹೋಗು ನೀನು, ನನ್ನ ಹತ್ತಿರ ಯಾರೂ ಬರುವ ಕಾರಣವಿಲ್ಲ. '

ಅವಳು ಸಿಟ್ಟಾಗಿ ಹೊರಟು ಹೋದಳು. ಸ್ನೇಹಳು ಪುಸ್ತಕವನ್ನು ಮತ್ತೆ ಎಳೆದುಕೊಂಡು ಓದತೊಡಗಿದಳು. ಆಗಲಿಲ್ಲ. ಈಗ ತಲೆ ನೋಯು-ತ್ತಿದೆ. ಒಂದು ಕೈಯಿಂದ ತಲೆ ಒತ್ತಿಕೊಳ್ಳುತ್ತ ಇನ್ನೊಂದರಿಂದ ಪುಸ್ತಕ ತೆರೆದು ಹಿಡಿದು ಓದಲು ಯತ್ನಿಸಿದಳು; ಇನ್ನೇನು ಮಾಡುವದು? ಒಬ್ಬಳಿಗೇ ಹೊತ್ತು ಹೋಗಲೊಲ್ಲದು. ' ತಲೆ ನೋಯುತ್ತದೆ, ಆದರೂ ಪುಸ್ತಕ ಓದುವದಾಗುತ್ತದೆಯೆ?' ಸ್ನೇಹಳು ಚಕಿತಳಾಗಿ ನೋಡುತ್ತಾಳೆ-ಬಾರ್ಲಿಯ ಬಟ್ಟಲನ್ನು ಕೈಯಲ್ಲಿ ಹಿಡಿದುಕೊಂದು ಗಲ್ಲದ ತುಂಬ ನಗೆ ಇರಿಸಿಕೊಂಡು ಸುಧೆಯು ನಿಂತಿದ್ದಾಳೆ. ಅವಳನ್ನು ನೋಡಿದೊಡನೆ ಸ್ನೇಹಳ ಮುನಿಸು ದುರ್ದಮನೀಯವಾಯಿತು. ಪುಸ್ತಕವನ್ನು ಎರಡೂ ಕೈಗಳಿಂದ ಹಿಡಿದುಕೊಂಡು, ಅದರ ಮರೆಗೆ ಮುಖ ಮುಚ್ಚಿಕೊಂಡಳು.

' ಮತ್ತೆ ಓದುತ್ತೀಯಾ? ಇಟ್ಟುಬಿಡು. ಅದರಿಂದ ಇನ್ನೂ ತಲೆ ನೋಯುವದು. '

ಆದರೂ ಸ್ನೇಹಳು ಪೂರ್ವವತ್! ಸುಧೆಯು ರಹಸ್ಯವರಿತು ಅವಳ ಹತ್ತಿರ ಹೋಗಿ ಪುಸ್ತಕ ಕಸಿದು ' ಸಿಟ್ಟಾದೆಯೇನು? ಬಾರ್ಲಿ ತುಸು ತಕ್ಕೊಳ್ಳು ನೋಡುವಾ ' ಎಂದಳು.

' ಒಲ್ಲೆ, ನಾನೊಲ್ಲೆ. '

' ಇನ್ನು ಸಿಟ್ಟಾಗುವುದು ಒಳಿತಲ್ಲ. ಏಳು. ಆರಿ ಅಂಗಾರವಾಗುವದು. ಏಳು—'

ಸ್ನೇಹಳು ಎದ್ದು ಕುಳಿತು ಒಳ್ಳೇಯವಳ ಹಾಗೆ ಸುಧೆಯ ಅಪ್ಪಣೆಯಂತೆ ನಡೆದುಕೊಂಡಳು. ಬಾಯಿಗೆ ನೀರು ಹಚ್ಚಿ ಒರೆಸಿ, ಸುಧೆಯು ಅವಳ ಕಡೆ ನೋಡಿ ಸಸ್ನೇಹ ಹಾಸ್ಯದಿಂದ, ' ಇಷ್ಟೇಕೆ ಸಿಟ್ಟಾಗಿದ್ದೆ? ಏನಾಗಿದೆ?' ಎಂದು ಕೇಳಿದಳು.

ಸ್ನೇಹಳು ಗಡಿಗೆಯ ಹಾಗೆ ಮುಖ ಮಾಡಿಕೊಂಡು ಕುಳಿತಳು.

' ಮಾತಾಡುವದಿಲ್ಲವೆ?'

'ನಿನ್ನಿನ ದಿನವೆಲ್ಲ ನೀನು ಬರಲಿಲ್ಲವೇಕೆ ?'

'ಓ ! ಅದಕ್ಕಾಗಿಯೆ ? ನಾನು ಇನ್ನೇನೋ ಮಹಾ ಎಂದಿದ್ದೆ !'

ಸುಧೆಯು ಏಳಿಸಿ ನಕ್ಕ ನಗೆಯಿಂದ ಸ್ನೇಹಳ ಮುನಿಸು ಇನ್ನೂ ಎಲ್ಲೆ ಮೀರಿತು. ನೋಡನೋಡುವಷ್ಟರಲ್ಲಿ ಅವಳ ತುಂಬುಗಣ್ಣುಗಳು ಹರಿಯುವ ಹಳ್ಳವಾದವು. ಸುಧೆಯು ಎರಡೂ ಕೈಗಳಿಂದ ಅವಳ ಮುಖವೆತ್ತಿಕೊಂಡು ಬೆರಗಾಗಿ ಬಸವಳಿದು, 'ನಿಜವಾಗಿಯೂ ಅಳುವೆಯಲ್ಲ ಸ್ನೇಹಾ ?' ಎಂದು ದನಿ ನಡುಗಿಸಿದಳು.

ಸ್ನೇಹಳು ಮುಖ ಸರಿಸಿಕೊಂಡು ಕಂಣೊರೆಸತೊಡಗಿದಳು. ಬೆರಗಿನ ಕೆಲ ನಿಮಿಷಗಳು ಕಳೆದ ಮೇಲೆ, ಸುಧೆಯು ಒಂದು ದೀರ್ಘ ನಿಶ್ವಾಸ ಬಿಟ್ಟು ಪಲ್ಲಂಗದ ಮೇಲೆ ಸ್ನೇಹಳ ಮಗ್ಗುಲಿಗೆ ಕುಳಿತುಕೊಂಡಳು. ಅನ್ಯಮನಸ್ಕಳಾಗಿ ತನ್ನ ಉಜ್ವಲ ಆಯತ ನೇತ್ರಗಳಿಂದ ಕಿಡಿಕಿಯ ಹೊರಗೆ ಶೂನ್ಯವಾಗಿ ನೋಡುತ್ತ ಏನೇನು ಭಾವಿಸಿಕೊಂಡಳೋ ಆವಳೇ ಬಲ್ಲಳು. ಒಮ್ಮೆ ಅಸ್ಫುಟವಾಗಿ, 'ಆದರೆ ಹೀಗಂತೂ ನಾನೆಂದೂ ನೋಡಲಿಲ್ಲ--ಇದು ಕಲ್ಪನೆಗೂ ಸಿಲುಕದ್ದು !' ಎಂದಳು.

ಸ್ವಲ್ಪ ಹೊತ್ತು ಕಳೆದು ಹೋಯಿತು. ಯಾರೂ ಯಾರೊಡನೆಯೂ ಮಾತಾಡಲಿಲ್ಲ. ಸ್ನೇಹಳು ಕೆಲ ಸಲ ಕಂಣೆತ್ತಿ ನೋಡಿಯೇ ನೋಡಿದಳು--ಸುಧೆಯು ಮ್ಲಾನಳಾಗಿ ಗಂಭೀರ ಮುಖದಿಂದ ಕಿಡಿಕಿಯ ಹೊರಗೆ ಸುಮ್ಮನೆ ನೋಡುತ್ತಿದ್ದಾಳೆ. ಅವಳಿಗೆನಿಸಿತು--ಅಕ್ಕ ನಿಜವಾಗಿ ಸಿಟ್ಟಾಗಿದ್ದಾಳೆಂದು. ಮೆಲ್ಲಮೆಲ್ಲಗೆ ಅವಳ ಹತ್ತಿರ ಸರಿದು ಹೋಗಿ, ಮೆತ್ತಗೆ, 'ಅಕ್ಕ' ಎಂದು ಕರೆದಳು.

ಅನ್ಯಮನಸ್ಕಳಾಗಿಯೇ ನಿಶ್ವಾಸಬಿಟ್ಟು ಸುಧೆಯು, 'ಯಾಕೆ ?' ಎಂದಳು.

'ಸಿಟ್ಟಾದೆಯಾ ಅಕ್ಕ ?'

ಸುಧೆಯು ಮುಖ ತಿರುಗಿಸಿ ತನ್ನ ಉಜ್ವಲ ದೃಷ್ಟಿಯಿಂದ ಅವಳನ್ನು ನೋಡುತ್ತ ಉತ್ತೇಜಿತಳಾಗಿ ಹೇಳಿದಳು, 'ಯಾಕಾಗಬಾರದು ? ಈ ರೀತಿ ನನ್ನನ್ನು ಅಪದಸ್ಥಳನ್ನಾಗಿ ಮಾಡುವದು ನಿನಗುಚಿತವೆ ? ನೀನು ತುಸು ತಿಳಿದು ನೋಡಬೇಡವೆ ? ಇದೇನು ಹುಡುಗಾಟಿಕೆ ನಿನ್ನದು--ಇದು ಗೊಂಬೆಯ ಆಟವೆ ? ನಾನು ನಿನಗೆ ಯಾರು ಎಂಬುದು ತಿಳಿಯದೆ ನಿನಗೆ ? ನನ್ನನ್ನು--' ಸಹಸಾ ಸುಧೆಯ ಉತ್ತೇಜಿತ ಸ್ವರವು ನಿಂತು ಹೋಯಿತು.

ನೋಡುತ್ತಾಳೆ- ಸ್ನೇಹಳ ಮುಗ್ಧ ಮುಖಶ್ರೀಯು, ಮ್ಲಾನವಾಗಿ ಬಿಳುಪೇರಿ ಹೋಗಿದೆ. ಸ್ನೇಹಳು ಹೆದರಿ ಹೌಹಾರಿ ಒಂದು ಕೈಯಿಂದ ಪಲ್ಲಂಗದ ರೇಲಿಂಗು ಬಲವಾಗಿ ಹಿಡಿದುಕೊಂಡು, ಇನ್ನೊಂದರಿಂದ ಸುಧೆಯು ಹೆಗಲನ್ನೇ ಅವಲಂಬಿಸಿ ಅವಳ ಮುಖವನ್ನೆ ನೋಡುತ್ತ ಗದಗದ ನಡುಗುತ್ತಿದ್ದಾಳೆ. ಒಡನೆಯೇ ಸುಧೆಯು ಅವಳನ್ನು ಹಿಡಿದು ಮಲಗಿಸಿದಳು. ಬೀಸಣಿಕೆ ಎತ್ತಿಕೊಂಡು ತ್ರಸ್ತಹಸ್ತದಿಂದ ಗಾಳಿ ಹಾಕುತ್ತ ಹಾಕುತ್ತ ಭೀತಕಂಠದಿಂದ ಕರೆದಳು, ' ಸ್ನೇಹಾ, ತಂಗಿ ? '

ಸ್ನೇಹಳು ತುಸು ಸಾವರಿಸಿಕೊಂಡು, ಕಂಣು ಮುಚ್ಚಿಕೊಂಡೇ 'ಅಕ್ಕ' ಎಂದು ಉತ್ತರಕೊಟ್ಟಳು

' ನಾನು ಒಳ್ಳೆಯವಳಲ್ಲ. ಮತ್ತೆ ಬೆದರಿಸುವದಿಲ್ಲ ಸ್ನೇಹಾ. ಇನ್ನು ನಿನಗೇನೂ ಅನ್ನುವದಿಲ್ಲ. '

ಬಾಲಿಕೆಯಂತೆ ಅತ್ತುಬಿಟ್ಟಳು ಸ್ನೇಹಾ. ' ನೀನು ಸಿಟ್ಟಾದೆಯೇಕೆ ಅಕ್ಕ ? ನಾನಂತೂ ಯಾವ ತಪ್ಪೂ ಮಾಡಲಿಲ್ಲ. '

ಸ್ನೇಹಳ ಕಂಣೊರೆಸುತ್ತ ಸುಧೆಯು ರುದ್ಧಸ್ವರದಲ್ಲಿ ಹೇಳಿದಳು, ' ಸುಮ್ಮನಾಗು---ಸುಮ್ಮನಾಗಕ್ಕಾ !--- ನಿನ್ನ ತಪ್ಪೆ ? ತಪ್ಪು ಎಂದಿಗೂ ನಿನ್ನ ಎಡಬಲಕ್ಕೂ ಸುಳಿಯಲಾರದು. ತಪ್ಪು ನನ್ನದು--- ಇನ್ನಾರದೆನ್ನಲಿ ? ಅಲ್ಲದಿದ್ದರೆ ನಿನ್ನೊಡನೆ ನನ್ನ ಈ ಸಂಬಂಧವೇಕಾಯಿತು ! '

' ಯಾವ ಸಂಬಂಧ ಅಕ್ಕಾ ? '

' ಯಾವದೂ ಇಲ್ಲ. ನೀನು ಈಗ ತುಸು ಮಲಗು ನೋಡೋಣ. '

' ಮಲಗಿದರೆ ನೀನು ಹೋಗುವದಿಲ್ಲವೆ ? '

' ಇಲ್ಲಾ. ನಿನ್ನೊಡನೆ ಕೆಲವು ದಿವಸ ನಾನು ಇರಬೇಕಾದ ಆವಶ್ಯಕತೆ ಎನಿಸುತ್ತಿದೆ. ನಿನ್ನಬಳಿ ಇದ್ದರೆ, ನನ್ನ ಮನಸ್ಸಿನ ಈ ಕಪ್ಪು ಕಲೆಯು ತೊಳೆದು ಬೆಳ್ಳಗಾಗಿ ತೊಳಗಬಹುದು. ಆದಾಗದ ವರೆಗೂ, ನಿನಗೊಂದು ಮಾತು ಹೇಳುವೆ, ಅದನ್ನು ನಡೆಸಿದೆಯಾದರೆ ನಾನು ಯಾವಾಗಲೂ ನಿನ್ನ ಹತ್ತಿರ ಇರುವೆನು--- ಹೇಳು ನಡೆಸುವಿಯಾ ? '

' ನಡೆಸುವೆನು. '

' ನಿಜವಾಗಿಯೂ ? '

' ಹುಂ, ನಿಜವಾಗಿಯೂ. '

ಸುಧೆಯು ತುಸು ತಡೆದು, ಒಮ್ಮೆ ತನ್ನನ್ನು ಸಾವರಿಸಿಕೊಂಡು ಹೇಳಿದಳು, ' ಎಂದೂ ಪತಿಯ— ನಿನ್ನ ಪತಿಯ ಹತ್ತಿರ ನನ್ನ ಸಂಬಂಧವಾಗಿ ಯಾವ ಮಾತನ್ನೂ ಆಡಬಾರದು. '

' ನಿನ್ನ ಸಂಬಂಧವಾಗಿ ಯಾವ ಯಾವ ಮಾತು ? '

' ಅದು ನನಗೆ ಸಂಬಂಧಿಸಿದ ಯಾವ ಮಾತೇ ಇರಲಿ. ತಿಳಿ—ನಾನು ನಿನ್ನೊಡನೆ ಮಾತಾಡಿದ್ದು, ಏನಾದರೂ ಮಾಡಿದ್ದು, ನಿನ್ನ ಹತ್ತಿರ ಬಂದದ್ದು, ಅಥವಾ ನೀನು ನನ್ನ ಹತ್ತಿರ ಇದ್ದದ್ದು, ಇದೆಲ್ಲ ಬಂತು. '

ಸ್ನೇಹಳು ಬಹಳ ಬೆರಗಾಗಿ, ' ಅದೇಕೆ ಅಕ್ಕಾ ? ' ಎಂದಳು.

' ಅದೇಕೇ ಇರಲೊಲ್ಲದೇಕೆ—ನೀನೀಗ ನನ್ನ ಮಾತು ನಡೆಸುವವಳೋ ಅಲ್ಲವೋ ? '

ಉಪಾಯಗಾಣದೆ ಸ್ನೇಹಳು ' ಆಗಲಿ ' ಎಂದಳು. ಆ ಮೇಲೆ ತುಸು ಬಿಟ್ಟುಕೊಂಡು ಕೇಳಿದಳು, ' ಅವರಾಗಿಯೇ ಕೇಳಿದರೆ ? '

ಸುಧೆಯು ಕೇಳಿದಳು, ' ಎಂದಾದರೂ ಹಾಗೆ ಕೇಳಿರುವರೇನು ? ' ಕೇಳುತ್ತ ಕೇಳುತ್ತ ಅವಳ ಕಂಗಳು ಉಜ್ವಲವಾದವು.

ಸ್ನೇಹಳು ಭೀತಳಾಗಿ, ' ಇಲ್ಲ ' ಎಂದಳು.

' ಎಂದ ಮೇಲೆ ಎಂದೂ ಕೇಳುವದಿಲ್ಲ. ಎಂದಾದರೂ ಕೇಳಿದರಾದರೆ, ಏನು ಮಾಡಬೇಕೆಂದು ಆಗ ನೋಡಲು ಬಂದೀತು. ಅದಿರಲಿ, ಈಗ ನೀನು ಮಲಗು, ನಾನು ಹೋಗುತ್ತೇನೆ. '

ಸ್ನೇಹಳು ವಿಚಲಿತಳಾಗಿ, ' ಬೇಡ ಅಕ್ಕ, ಕೂಡುವದಿಲ್ಲವೇಕೆ ? ' ಎಂದಳು.

' ನಿನ್ನ ವರನು ಈಗಲೇ ಬರಬಹುದು. '

' ಬಂದರೇನಾಯಿತು ? ಬಂದರೆ ಬರಲಿ. '

' ಇದೇ ಏನು ನಾನು ಇಷ್ಟು ಹೊತ್ತು ತಿಳಿಸಿ ಹೇಳಿದ್ದು ? ಅದೋ ಬಂದರು ! '

ಸ್ನೇಹಳು ವಿಚಲಿತಳಾಗಿ ಕೇಳಿದಳು, ' ಹತ್ತಿರ ಯಾರು ಇದ್ದರೆಂದು ಕೇಳಿದರೆ ? '

ಸುಧೆಯು ಇನ್ನೊಂದು ಕೋಣೆಯಲ್ಲಿ ಹೋಗುತ್ತ ಮೆಲ್ಲಗೆ ಹೇಳಿದಳು, ' ಬಿಂದಿ ಎಂದು ಹೇಳು. ಇಲ್ಲದೆ ಹೋದರೆ ಏನೂ ಹೇಳಬೇಡ. ಅವರು ಕೇಳುವದಿಲ್ಲ. '

' ಕೇಳಿದರೆ ? ಏ–ಅಕ್ಕಾ, ಹೇಳಿ ಹೋಗು––ಅಕ್ಕಾ––'

ಅವಳ ಅಕ್ಕ ಇಷ್ಟು ಹೊತ್ತಿಗೆ ಆ ಮಹಲು ಬಿಟ್ಟು ಹೋಗಿಬಿಟ್ಟಿದ್ದಳು.

ಸುರೇಶನು ಒಳಗೆ ಬಂದು ಕೇಳಿದನು, ' ಯಾರೊಡನೆ ಮಾತಾಡುತಿದ್ದೆ ? '

ಸ್ನೇಹಳು ಸುಮ್ಮನೆ ಕುಳಿತಳು. ' ಪತಿ ಇನ್ನೊಮ್ಮೆ ಕೇಳಿದರೆ ? ' ಎಂಬು ಹೆದರಿಕೆ.

' ಹೇಗಿರುವೆ ? ಮತ್ತೆ ತಲೆ ನೋಯುತ್ತಿಲ್ಲವಷ್ಟೆ ? ' ಎಂದು ಕೇಳುತ್ತ ಕೇಳುತ್ತ ಅವಳ ಹಣೆ ಮುಟ್ಟಿ ನೋಡಿದನು. ' ಇಲ್ಲ, ಹಣೆ ತಂಪಾಗಿದೆ ' ಎಂದು ಒಂದು ಗುಳಿಗೆ ಕೊಟ್ಟು ನುಂಗಿಸಿ, ' ನಾನು ಈಗ ಸ್ನಾನಕ್ಕೆ ಹೋಗುತ್ತೇನೆ. ಬಿಂದಿಯನ್ನು ಕಳಿಸಿಕೊಟ್ಟು ಹೋಗಲೇನು ? ' ಎಂದನು.

ಸುರೇಶನು ಹೆಚ್ಚಿಗೆ ಕೆದರಿ ಕೇಳದ್ದಕ್ಕೆ ಮುಕ್ತಿ ನಿಶ್ವಾಸ ಬಿಟ್ಟು ಸ್ನೇಹಳು ಹೇಳಿದಳು, ' ಬಿಂದಿ ದಾಸಿಯನ್ನೆ ? ಒಳ್ಳೇದು ಕಳಿಸು. '

ಸುರೇಶನು ಹೋದ ಮೇಲೆ ಕೂಡಲೇ ಬೃಂದಾವಲೀ ಬಂದು ಹತ್ತಿರ ನಿಂತಳು. ' ಗಾಳಿ ಹಾಕಲೇ ? '

' ಬೇಡ, ನೀನು ಕೂಡು. ಮಾತಾಡೋಣ. ಅಕ್ಕ ಎಲ್ಲಿಗೆ ಹೋದರು ಗೊತ್ತೆ ? '

' ಅಡಿಗೆಯ ಮನೆಯ ಕಡೆಗೆ ಹೋಗಿದ್ದಾರು. '

' ಯಾವಾಗ ಬರುವರು ?–– ನೀನು ಆ ವರೆಗೆ ಏನಾದರೂ ಹೇಳು ಬಿಂದಿ. '

' ಏನು ಹೇಳಲಿ ? ಶ್ಲೋಕ ? '

' ಅಲ್ಲ, ನಿಮ್ಮ ಊರ ಸುದ್ದಿ ಹೇಳು. '

' ನಮ್ಮೂರಿನ ಸುದ್ದಿಯಾದರೂ ಏನಿದೆ ಹೇಳುವ ಹಾಗೆ ? ಅದಕ್ಕಿಂತ ನಿಮ್ಮ ಕಲಕತ್ತೆಯ ಸುದ್ದಿ ಹೇಳು. ನೀವು ಕಲಕತ್ತೆಯ ಜನ. ಇಲ್ಲಿ ನಿಮಗೆ ಬೇಸರ ಬರುವದೇ ? ಇಲ್ಲ, ಸರಿಹೋಗುವದೆ ? '

‘ ಬೇಸರ ಬರುವದಿಲ್ಲ ಬೃಂದಾವಲೀ---ಅಲ್ಲಿಗಿಂತ ಇಲ್ಲಿಯೇ ಸರಿ ಎನಿಸುವದು. ಅಲ್ಲಿ ಇದ್ದವರಾದರೂ ಯಾರು ? ಅಲ್ಲಿ ನೆಟ್ಟಗೆನಿಸುವ ಹಾಗೆ ಏನೂ ಇರಲಿಲ್ಲ. ’

‘ ಅವ್ವಾ ! ಅದೇನು ? ಅಂಥ ದೊಡ್ಡ ಪಟ್ಟಣ. ಜನರಿಲ್ಲವೆ ? ಇದೇ ಈ ನಮ್ಮ ಹಳ್ಳಿಯಲ್ಲಿ ಇಳಿಹೊತ್ತು ಎಷ್ಟು ಜನ ಹೆಂಣು ಮಕ್ಕಳು ಬಂದು ದೊಡ್ಡ ತಾಯಿಯವರ ಬಳಿ ಕುಳಿತು ಮಾತುಕಥೆಯಾಡುತ್ತಿದ್ದರು, ಇಸ್ಪೇಟು ಆಡುತ್ತಿದ್ದರು ! ’

‘ ಎಲ್ಲಿ, ನಾನು ಬಂದಮೇಲೆಯಂತೂ ನೋಡಿಲ್ಲವಲ್ಲ ? ಅವರೀಗ ಬರುವದಿಲ್ಲವೆ ? ’

‘ ಇನ್ನಾರ ಬಳಿ ಬರಬೇಕು ? ಯಾರ ಬಳಿ ಬರುತ್ತಿದ್ದರೋ ಅವರು ಈಗ ಇದೆಲ್ಲದರಿಂದ ಮೈದೆಗೆದಿದ್ದಾರೆ. ಎಂದೇ ಬರುವದಿಲ್ಲ. ’

‘ ಯಾಕೆ ಮೈದೆಗೆದಿದ್ದಾರೆ ? ನೀನು ಅವರಿಗೆ ಬರಹೇಳು, ಅಂದರೆ ನಾನೂ ಅಕ್ಕನೊಡನೆ ಮತ್ತು ಅವರೊಡನೆ ಕುಳಿತು ಆಡುವೆನು. ಅವರು ಬರುವದಿಲ್ಲವೆ ? ’

ಬಿಂದಿಯು ಹೆಗಲು ಓರೆಮಾಡಿ ಹೇಳಿದಳು, ‘ ಬಾರದೇನು ? ಕರೆದರೆ ಬಂದೇ ಬರುವರು. ’

‘ ಅಕ್ಕನನ್ನು ನೀವು ಬಹಳ ಸೇರುವಿರಿ ಅಲ್ಲವೆ ? ಅವರು ನನಗೆ ಬಹಳ ವಾತ್ಸಲ್ಯ ತೋರಿಸುತ್ತಾರೆ. ಅದೆಷ್ಟು ಪ್ರೀತಿಸುತ್ತಾರೆಂದಿ ಬಿಂದೀ ! ಅವರು ಬಹಳ ಒಳ್ಳೇ ಮನುಷ್ಯಳು ಅಲ್ಲವೇ ಬೃಂದಾವಲೀ ? ’

ಬಿಂದಿಯು ಆಗ ಸಾಡಂಬರವಾಗಿ ಆರಂಭ ಮಾಡಿದಳು, ‘ ದೊಡ್ಡ ತಾಯಿಯವರ ಮಾತೇ ನೀವು ಹೇಳುವದು ಚಿಕ್ಕತಾಯಿ ? ಅವರದೇನು--- ಎಷ್ಟು ಬಲ್ಲಿರಿ ನೀವು ? ನಾವು ಅವರ ಮದುವೆ ಮಾಡಿ ಮನೆಗೆ ತಂದಂದಿನಿಂದ ಅವರ ಬುದ್ಧಿ, ದಯಾದಾಕ್ಷಿಣ್ಯದ ಮಾತನ್ನು ಒಂದು ಬಾಯಿಂದ ಇನ್ನೆಷ್ಟು ಹೇಳಲಿ ? ಯಜಮಾನರಿಗಂತೂ ಪ್ರಾಣದಂತಿದ್ದರು. ಅವರು ‘ ತಾಯಿ ’ ‘ ತಾಯಿ ’ ಎಂದು ಕರೆಕರೆದು ಕರಗಿ ಹೋಗುತ್ತಿದ್ದರು. ಇವರದಾದರೂ ಯಜಮಾನರ ಮೇಲೆ ಅದೆಷ್ಟು ಭಕ್ತಿ ! ತಂದೆಯನ್ನು ಮಗುವಿನ ಹಾಗೆ ಆರೈಕೆ ಮಾಡುತ್ತಿದ್ದರು. ಹೀಗೆ ಯಾರಿಗೂ ಸಾಧ್ಯವಿಲ್ಲ. ’ ಈ ಬಗೆಯ ಮಾತು ಬಹಳ ಹೊತ್ತು ಸಾಗಿತು. ಸ್ನೇಹಳಿಗೂ ಅವಳ ಸುದೀರ್ಘ ವರ್ಣನೆ ಕೇಳಿ ಸುಖವೆನಿಸುತ್ತಿತ್ತು. ಸುಧೆಯು ತನ್ನೊಡನೆ, ಒಮ್ಮೆ ಅತಿ ಶಾಂತಳಾಗಿ

ಸ್ನೇಹಪೂರ್ಣಳಾಗಿರುವದನ್ನೂ, ಇನ್ನೊಮ್ಮೆ ಅತಿ ತೀವ್ರಳಾಗಿ ತೇಜಃಪುಂಜ ಳಾಗಿರುವದನ್ನೂ, ಮಗುದೊಮ್ಮೆ ಅತ್ಯಂತ ನಿಃಸಂಪರ್ಕಳಹಾಗೆ ಇರುವದನ್ನೂ ನೋಡಿ, ನಡುನಡುವೆ ಸ್ನೇಹಳು ಚಕಿತಳಾಗುತ್ತಿದ್ದಳು. ಸುಧೆಯ ಉದಾರ ಕರುಣಾಮಯ ಕಂಣುಗಳನ್ನೂ ಸಲಿಗೆಯನ್ನೂ ನೋಡಿ, ಸ್ನೇಹಳಿಗೆ ಒಮ್ಮೊಮ್ಮೆ ತನ್ನ ಜೀವನದ ಶ್ರೇಷ್ಠ ಸುಹೃದಳಂತೆ ಅವಳನ್ನು ಅವಚಿ-ಕೊಳ್ಳುವಹಾಗೆನಿಸುವದು; ಮತ್ತೊಮ್ಮೆ ಅವಳ ಗಂಭೀರ ಭಾವವನ್ನೂ, ಕಂಣಿನಲ್ಲಿಯ ಅಸಹನೀಯ ಜ್ಯೋತಿಯನ್ನೂ ಕಂಡು ಅಕಾರಣವಾಗಿ ಭೀತಿ ಗೊಳ್ಳುವಳು. ಈ ಒಡಪು ಅವಳಿಗೆ ತೀರ ಹೊಸದು. ಒಂದು ವ್ಯಕ್ತಿ ಹೀಗೆ ಕ್ಷಣಕ್ಕೊಂದು ವಿಧವಾಗಿ ಪರಿವರ್ತಿತವಾಗಬಹುದೆಂಬುದು ಅವಳ ಸಂಸ್ಕಾರ ಬಾಹ್ಯವಾದ ಮಾತು. ಯಾರೇ ಆಗಲಿ ಅಸಂತುಷ್ಟರಾದರೆ ಬಹಳ ವೆಂದರೆ ಮುಖ ಮುದುಡಿಸಿಕೊಂಡೋ ಇಲ್ಲವೇ ಗಡಿಗೆಯ ಹಾಗೆ ಮಾಡಿ-ಕೊಂಡೋ ಮೂಲೆ ಹಿಡಿದು ಕುಳಿತುಬಿಡುವದು ಎಂದೇ ಅವಳ ಎಣಿಕೆ. ಸಿಟ್ಟಾಗದಾಗಲೂ ಆದೆಂತು ಹೀಗೆ ಗಂಭೀರವಾಗಿರುವದು, ಅಥವಾ ಗಂಭೀರ ವಾಗಬೇಕಾದರೂ ಏಕೆ ಎಂಬುದು ಅವಳ ಬುದ್ಧಿಗೆ ನಿಲುಕದ್ದು. ಸುರೇಶ ನನ್ನುಳಿದು ಸ್ನೇಹಳಿಗೆ ತನ್ನವಳೆಂದರೆ ಸುಧೆ. ಮಾವನವರು ಹೋಗುವಾಗ ತನ್ನನ್ನು ಅವಳಿಗೊಪ್ಪಿಸಿ ಹೋಗಿದ್ದಾರೆ. ಅವಳ ದಯೆ, ಸ್ನೇಹ, ವಾತ್ಸಲ್ಯ, ಕಾರ್ಯಕೌಶಲ್ಯ ಇವನ್ನೆಲ್ಲ ನೋಡಿ, ಮಾವನವರು ಅವಳಿಗೆ ಕೊಡುತ್ತಿದ್ದ ಮಾನ ಗೌರವವನ್ನರಿತು ಅವಳನ್ನು ಕಂಡಂದಿನಿಂದಲೂ ಸ್ನೇಹಳು ಸುಧೆಯನ್ನು ದೇವಿಯ ಆಸನದಲ್ಲಿ ಕೂರಿಸಿದ್ದಾಳೆ. ಇಂಥ ದೇವತಾಸಮಳು ತನ್ನವಳೆಂದು ನೆನೆದುಕೊಂಡಾಗಳೆಲ್ಲ ಅವಳಿಗೆ ಹಿಡಿಸಲಾರದ ಹಿಗ್ಗು. ಎಂದೇ, ಹೊತ್ತಿಲ್ಲದ ಹೊತ್ತಿನಲ್ಲಿ, ಕೆಲಸವಿರಲಿ ಇರದಿರಲಿ, ಅಕಾರಣವಾಗಿ ಅತ್ಯಂತ ಹರ್ಷನಿರ್ಭರ ಳಾಗಿ ಆಗಾಗ ಅವಳು ಕೂಗುವಳು—'ಅಕ್ಕಾ' ಎಂದು.

ಆದರೆ ಶ್ವಶುರನ ದೇಹಾಂತವಾದ ಮೇಲೆ ಸುಧೆಯ ವ್ಯವಹಾರದಿಂದ ಸ್ನೇಹಳು ಅಚ್ಚರಿಗೊಂಡಿದ್ದಾಳೆ. ಇದೇನು ? ನಿನ್ನೆ ಹಾಗೆ ನೇಹವಾಗಿದ್ದ ವಳು ಇಂದು ಇದೇನು ಹೀಗಿದ್ದಾಳೆ! ಯಾಕೆ ಹೀಗಾಯಿತು ಎಂದು ಯೋಚಿಸಿ ಸ್ನೇಹಳು ಆಕುಲಳಾದಳು. ನಡುನಡುವೆ ಪತಿಗೆ ಅವಳು ಕಾರಣ ಕೇಳುತ್ತಿದ್ದಳು. ಪತಿಯು ಗಂಭೀರ ಮುಖನಾಗಿ ಕುಳಿತುಬಿಡುತ್ತಿದ್ದನು. ಸ್ನೇಹಳು ದಾರಿಗಾಣದೆ ತಾನೂ ನೀರವವಾಗಿ ಬಿಡುತ್ತಿದ್ದಳು ಮತ್ತು ಸುಧೆಯ ಬೇಸಿಗೆಯ ಮೋಡದಂತಹ ಮುಖವನ್ನು ಕಂಡು ಅವಳ ಬಳಿಸಾರಲು ಸಾಹಸ ಗೊಳ್ಳುತ್ತಿದ್ದಿಲ್ಲ.

ಇಂದು ಸ್ನೇಹಳು ಅದಕ್ಕಾಗಿಯೇ ತನ್ನ ಅಕ್ಕನನ್ನು ಚೆನ್ನಾಗಿ ಅರಿಯಲೋಸುಗ ವ್ಯಾಕುಲಳಾಗಿದ್ದಾಳೆ. ಸುಧೆಯು ಇಂದಿನ ರೀತಿಯಂತೂ ಇನ್ನೂ ಹೊಸದು. ಇಷ್ಟೊಂದು ಸ್ನೇಹವು ಅವಳಲ್ಲಿ ಇರಬಹುದೆಂದು ಸ್ನೇಹಳು ತಿಳಿದಿರಲಿಲ್ಲ. ಆದುದರಿಂದಲೇ ಅವಳ ಬಗ್ಗೆ ಪುಂಖಾನುಪುಂಖವಾಗಿ ಚರ್ಚೆ ಮಾಡುವುದರಲ್ಲಿಯೂ ಸ್ನೇಹಳಿಗೆ ಅತ್ಯಂತ ತೃಪ್ತಿಯೆನಿಸುತ್ತಿತ್ತು. ಬಿಂದಿಯ ಬಾಯಿಂದ ತನ್ನ ಮಾವನವರ ಕಾಲದ ಸಂಸಾರದ ಸಮಸ್ತ ಸಮಾಚಾರವನ್ನು ಕೇಳುತ್ತ ಕೇಳುತ್ತ ಅವಳ ಮಾನಸಪಟಲದಲ್ಲಿ ಮೂಡುತ್ತಿದ್ದ ಒಂದು ಬಗೆಯ ಚಿತ್ರವು ಅವಳಿಗೆ ಅತಿ ಸುಂದರವೆನಿಸಿತು. ಸುಖಮಯ, ಸ್ನೇಹಮಯ, ಶಾಂತಿಮಯವೆನಿಸಿತು. ಸ್ನೇಹಳು, ತಿಳುವಳಿಕೆ ಬಂದಾಗ ತನ್ನ ತಂದೆಯನ್ನು ಕಂಡಿಲ್ಲ. ಮತ್ತು ತಂದೆ ಮಗಳನ್ನು, ಮಗಳು ತಂದೆಯನ್ನು ಅದೆಷ್ಟು ಪ್ರೀತಿಸುವದುಂಟೆಂಬುದನ್ನೂ ಅವಳು ಅರಿಯಳು. ಎಂದೇ ಈ ಚಿತ್ರವು ಅವಳಿಗೆ ಬಹು ಸೊಗಸೆನಿಸಿತು. ಅದರಲ್ಲಿಯೂ ಈ ಚಿತ್ರದ ಪ್ರಧಾನ ವಸ್ತುವು ತನ್ನ ಅಕ್ಕ ಸುಧೆ. ಸ್ನೇಹಳು, ಹೆಮ್ಮೆಯಿಂದ ಆನಂದದಿಂದ ಉಬ್ಬುಬ್ಬಿ ಹೇಳಿದಳು, ' ಅಕ್ಕ ನನ್ನನ್ನೂ ಬಹಳ ಪ್ರೀತಿಸುತ್ತಾರೆ, ಬೃಂದಾವಲೀ. '

ಇಷ್ಟು ಹೊತ್ತಿಗೆ ಸುರೇಶನು ಬರಲು ಸ್ನೇಹಳು ತಲೆಯ ಮೇಲಿನ ಸರಗೆಳೆದುಕೊಂಡಳು. ಬಿಂದಿ ತನ್ನ ವಾಕ್ಯಸ್ರೋತವನ್ನು ನಿಲ್ಲಿಸಿ ಬೀಸಣಿಕೆ ಬರಿಸಿ ಎದ್ದುಹೋದಳು. ಸುರೇಶನು ಹಾಸ್ಯಮುಖದಿಂದ, ' ಇಷ್ಟೊಂದು ಮಾತುಕಥೆ ಯಾರ ಬಗ್ಗೆ ? ಬಿಂದಿಯ ಕೂಡ ಬಹಳ ಗೆಳೆತನ ಕೂಡಿದಂತಿದೆಯಲ್ಲ ! ' ಸ್ನೇಹಳು ಉಬ್ಬಿದ ಎದೆಯಿಂದ ಉತ್ಸುಕಳಾಗಿ ಹೇಳಿದಳು, ' ನಮ್ಮ ಅಕ್ಕನ ಮಾತುಕಥೆ ಆಡುತ್ತಿದ್ದೆವು. ' ಸುರೇಶನು ಮೊದಲು ಮೌನ ತಾಳಿದನು. ಆದರೆ ಮತ್ತೆ ಮತ್ತೆ ಒಬ್ಬರ ಮಾತನ್ನೇ ಎತ್ತಿದರೆ ಉದಾಸೀನವಾಗಿರುವದೂ ಸಾಧ್ಯವಿಲ್ಲ. ಅದಕ್ಕಾಗಿ ಮನಸ್ಸಿಲ್ಲದಿದ್ದರೂ ಸುರೇಶನು ಕೇಳಿದನು, ' ಕಥೆಮಾಡಿ ಹೇಳಿಕೊಳ್ಳುವಷ್ಟು ಒಳ್ಳೆಯ ಮಾತೇನು ಅದು ? '

' ಅದು ಕಥೆಯಲ್ಲ. ಹೀಗೇ ಆ ಮಾತು ಈ ಮಾತು. ಅಕ್ಕ ಬಹಳ ಒಳ್ಳೆಯವಳು ಅಲ್ಲವೆ ? '

ಸುರೇಶನು ನಕ್ಕು, ' ನಾನು ಹೇಗೆ ಅದನ್ನರಿಯಬೇಕು ? ' ಎಂದನು.

' ಎಲ್ಲರೂ ಬಲ್ಲರು, ನಿನಗೆ ಗೊತ್ತಿಲ್ಲವೆ ? ಅಕ್ಕನೆಂದರೆ ಎಲ್ಲರಿಗೂ ಸೇರಿಕೆ. ತಂದೆಯವರು ಬಹಳ ಪ್ರೀತಿಸುತ್ತಿದ್ದರು. ಅಕ್ಕನಿಗೆ ಅವರು ಮಾತಾ ಎಂದು ಕರೆಯುತ್ತಿದ್ದರು. '

ಸುರೇಶನು ತುಸು ಸುಮ್ಮನಿದ್ದು ಆ ಮೇಲೆ [illegible] ಗೊತ್ತು' ಎಂದನು.

'ಅಕ್ಕನ ತಂದೆ ಅಕ್ಕನನ್ನು ಕರೆದೊಯ್ಯಲು ಎಷ್ಟೋ ಸಲ ಬಂದಿದ್ದರೂ, ತಂದೆಯವರಿಗೆ ತೊಂದರೆಯಾಗುವದೆಂದು ಮತ್ತು ಸಂಸಾರವು ವಿಶೃಂಖಲ ವಾಗುವದೆಂದು, ಅಕ್ಕ ಎರಡು ದಿನ ಕೂಡ ಎಲ್ಲಿಯೂ ಹೋಗುತ್ತಿರಲಿಲ್ಲ.'

ಸುರೇಶನು ಮನಸ್ಸಿಲ್ಲದಿದ್ದರೂ ನಕ್ಕು ಹೇಳಿದನು, 'ನಾನು ತಿಳಿದಿದ್ದೆ–ನೀನು ಎಷ್ಟೋ ಅಟ್ಟಂಬಟ್ಟಂಬಾರಣ್ಯಗಳಲ್ಲಿ ಹಾದು, ಸಪ್ತಸಮುದ್ರಗಳನ್ನು ದಾಟಿ ದೇಶ ದೇಶಾಂತರ——'

ಸ್ನೇಹಳು ಆ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳದೇ ನಡುವೇ ಬಾಯಿ ಹಾಕಿ ಮೊದಲಿನಂತೆ ಹೇಳುತ್ತಾ ಹೊರಟಳು, 'ಅಕ್ಕ ದಾಸದಾಸಿಯ ರನ್ನು ಸಹ ಪ್ರೀತಿಸುವರು. ಬಿಂದು ಅವೆಷ್ಟು ಹೊಗಳಿ ಹೇಳಿದಳು. ಮತ್ತು ಅವರಂತೆ ಸಂಸಾರದ ಲೆಕ್ಕಪತ್ರ ಇಡಲು, ಎಲ್ಲರನ್ನೂ ಜತನದಿಂದ ನೋಡಲು, ಎಲ್ಲ ಕೆಲಸವನ್ನೂ ಸಮರ್ಪಕವಾಗಿ ಮಾಡಲು ಇನ್ನಾರೂ ಅರಿಯರು.'

ಸುರೇಶನು ಹುಸಿನಗೆ ನಕ್ಕು, 'ಹಾಗಾದರೆ ನನಗಿಂತಲೂ ನೀನು ಹೆಚ್ಚು ಬಲ್ಲೆಯೆಂದು ಹೇಳಬೇಕು. ಯಾಕಂದರೆ ನಾನಂತೂ ತೀರ ವಿಪರೀತವಾಗಿ ನೋಡುತ್ತಿದ್ದೇನೆ. ಈಗ ನೀನು ಹೇಗಿರುವೆ ಹೇಳು ನೋಡುವಾ? ಈಗೇನೂ ಜಾಡ್ಯವೆನಿಸುವದಿಲ್ಲವಷ್ಟೇ ಮೈಯಲ್ಲಿ?' ಎಂದನು.

'ಇಲ್ಲ, ನೆಟ್ಟಗಿರುವೆ. ನೀನೇನು ವಿಪರೀತ ನೋಡಿದೆ?'

'ಸಾಕು, ಆ ಎಲ್ಲ ಮಾತಿನಿಂದ ಪ್ರಯೋಜನವಿಲ್ಲ. ಏನು ಓದಿದೆ ನೋಡೋಣ?'

'ಇಲ್ಲ ಆದಾಗದು. ಯಾರನ್ನು ವಿಪರೀತ ನೋಡಿದೆ ನೀನು?'

'ಇದೇ, ನಿನ್ನ ಅಕ್ಕನ ಮಾತು ಹೇಳಿದೆಯಲ್ಲ? ಮೊದಲು ಅವರು ಹಾಗೆಯೇ ಇದ್ದರು—— ಎಲ್ಲರ ಬಾಯಿಂದಲೂ ಕೇಳುತ್ತೇನೆ ಆದರೆ ನನ್ನ ಕಂಣಿನಿಂದ ಈಗ ನೋಡುವದೆಲ್ಲ ವಿಪರೀತವೇ.'

'ಕಂಣಿನಿಂದ ಏನು ನೋಡುತ್ತಿರುವೆ? ಹೇಳಬಾರದೆ? ಹೇಳಲೇ-ಬೇಕು ನೀನು. ಇಲ್ಲದಿದ್ದರೆ ಪುಸ್ತಕ ಕಸಿದುಕೊಳ್ಳುವೆ.'

ಸುರೇಶನು ಪುಸ್ತಕದಲ್ಲಿ ಮನಸ್ಸುಹಾಕಲು ಪ್ರಯತ್ನಿಸುತ್ತಿದ್ದನು. ಪುಸ್ತಕದಿಂದ ಮುಖವೆತ್ತದೇ ಹೇಳಿದನು, 'ಅವರು ಈಗಂತೂ ಯಾವುದನ್ನೂ

ನೋಡುತ್ತಿಲ್ಲ! ಸಂಸಾರದಿಂದ ಸಂಪರ್ಕವನ್ನೇ ಬಿಟ್ಟುಕೊಟ್ಟಿದ್ದಾರೆ. ಆದ್ದರಿಂದ ಸಂಸಾರವು ಬಹಳ ವಿಶ್ರಂಖಲವಾಗಿ ಹೋಗಿದೆ. ಕಾಕಾ, ಅವರಿಗೆ ತಿಳಿಸಿ ಹೇಳಲು ಹೇಳಿದ್ದರಿಂದ ನಾನು ಆ ದಿನ ಹೇಳಲು ಹೋಗಿದ್ದೆ. ಆದರೆ–'

'ಆದರೆ—ಏನು ? ಅಕ್ಕ ಏನೆಂದರು ? '

'ಅದನ್ನೆಲ್ಲ ನೀನು ಹುಡಿಗಿ ತಿಳಿಯಲಾರೆ. ಒಟ್ಟಿನ ಮೇಲೆ ಮಾತಿಷ್ಟು. ಈಗ ಅವರೊಡನೆ ಯಾರದೂ— ಅರ್ಥಾತ್ ಸಂಸಾರದ ಯಾವ ಸಂಪರ್ಕವೂ ಇಲ್ಲವೆಂದು ಅವರು ತಿಳಿದಿದ್ದಾರೆ. ಇದ್ದರೂ ಸಂಪರ್ಕವನ್ನಿಟ್ಟುಕೊಳ್ಳುವದು ಅವರಿಗೆ ಬೇಡ. '

ಸ್ನೇಹಳು ವಿಸ್ಮಿತಳಾಗಿ ನೋಡುತ್ತ ಕುಳಿತಳು. ಸುಧೆಯು ಮತ್ತೆ ಅವಳಿಗೆ ಒಡೆಯದ ಒಗಟವಾಗಿ ಹೋದಳು. ಆ ಭಾವವನ್ನು ಪ್ರಯತ್ನ ಪೂರ್ವಕವಾಗಿ ಮನದಿಂದ ತಳ್ಳಿ ಸ್ನೇಹಳು ಹೇಳಿದಳು, 'ಅದೇನೇ ಇರಲಿ. ಆದರೆ ಅವರು ನನ್ನನ್ನು ಅತ್ಯಂತ ಪ್ರೀತಿಸುತ್ತಾರೆ. '

ಸುರೇಶನು ಕ್ಷಣಹೊತ್ತು ಸ್ತಂಭಿತನಾದನು. ಸ್ನೇಹಳ ಮಾತು ಅವನಿಗೆ ಅತಿ ಅಸಂಗತವೆನಿಸಿತು. ಕೊನೆಗೆ ವ್ಯಂಗ ವ್ಯಂಗವಾಗಿ ಹೇಳಿದನು, 'ಇರಬಹುದು. '

ಸ್ನೇಹಳಿಗೆ ಇದು ತಿಳಿಯಲಿಲ್ಲ. ತನ್ನ ಉಬ್ಬಿನ ಭರದಲ್ಲಿಯೇ ತನ್ನ ಮಾತು ಮುಂದರಿಸಿದಳು, 'ನನಗೆ ತಲೆ ನೋವೆಂದು ಆದೆಷ್ಟು ತಲೆ ಹಿಚುಕಿದರು. ಬಲು ಮೆತ್ತನೆಯ ಕೈ. ಮತ್ತು ಕೈ ಅದೆಷ್ಟು ತಂಪು! ಅವರ ತೊಡೆಯ ಮೇಲೆ ತಲೆಯಿಟ್ಟು ಮಲಗುತ್ತಲೇ ನನ್ನ ತಲೆನೋವು ನಿಂತು ಹೋಯಿತು. ನಾನೂ ನನ್ನ ಅಕ್ಕನನ್ನು ಬಹಳ ಬಹಳ ಪ್ರೀತಿಸುತ್ತೇನೆ. '

ಸುರೇಶನು ಮನಸ್ಸಿನಲ್ಲಿ ನಿಜವಾಗಿಯೂ ಅತಿ ವಿಸ್ಮಿತನಾಗತೊಡಗಿದನು. ಇದೆಂಥ ರಹಸ್ಯ ಚಿತ್ರವು ಅವನೆದುರಿಗೆ ಮೂಡುತ್ತಿದೆ! ಇದು 'ಅರಬ್ಯ ರಾತ್ರಿಯ' ಕಥೆಯಂತಿದೆ ಕೇಳಲು! ಸುರೇಶನು ನಕ್ಕು, 'ನಿನ್ನ ಕಂಣಿ–ಗಂತೂ ನನ್ನಂಥವನೂ ಸಹ ಬಹಳ ಬಹಳ ಪ್ರೀತಿಸುವವನೇ. ನಿನ್ನಂಥವಳಿಗೆ ಪ್ರೀತಿಯನ್ನು ತಿಳಿಸಿ ಕೊಡುವದು ಎಷ್ಟು ಕಠಿಣವೆಂಬುದು ನನಗೆ ಗೊತ್ತು. '

'ಯಾಕೆ ನನಗೇನೂ ತಿಳಿಯುವದಿಲ್ಲವೇ ? ಇಷ್ಟು ಮತಿಮೂಢಳೇ ನಾನು ?—ಒಳ್ಳೇದು. ನಿಜವಾಗಿಯೂ ನೀನು ನನ್ನನ್ನು ಬಹಳ ಪ್ರೀತಿಸುವದಿಲ್ಲವೆ ? ನಿಜವಾಗಿ ಹೇಳು. '

ಸುರೇಶನು ತುಸು ಗಂಭೀರನಾದನು. ಆ ಮೇಲೆ ಸಪ್ರೇಮ ಹಾಸ್ಯದಿಂದ ಸ್ನೇಹಳ ಗಲ್ಲಗಳೆರಡನ್ನು ಹಿಚುಕಿ ಹಿಡಿದು ಹೇಳಿದನು, ' ಇದೇನು ಬಹಳ ಬುದ್ಧಿ ಬಂದಂತಿದೆ ? ಮಾತಾಡಲೂ ಕಲಿತು ಬಿಟ್ಟಿರುವೆ. '

' ನಾನು ಪ್ರೀತಿಯನ್ನೂ ಅರಿಯೆನೆ ? ನಾನಿಷ್ಟು ಪೆದ್ದಳೆಂದು ತಿಳಿದೆಯಾ ನೀನು ? ನಾನು ನಿಶ್ಚಯವಾಗಿ ಹೇಳಬಲ್ಲೆ- ಅಕ್ಕನೂ ನನ್ನನ್ನು ಬಹಳ ಪ್ರೀತಿಸುವಳು. '

' ನಿನ್ನಂಥವರೇ ನಿಜವಾದ ಸುಖಿಗಳು ಸ್ನೇಹಾ ! ನಿನಗೆಂದೂ ದುಃಖವಾಗುವದಿಲ್ಲ ನೋಡು. '

' ಯಾಕೆ ? '

' ಅತಿ ಸಹಜವಾಗಿ ಎಲ್ಲರನ್ನೂ ನಿನ್ನವರನ್ನಾಗಿ ಮಾಡಿಕೊಳ್ಳಬಲ್ಲೆ ನೀನು. '

' ಮತ್ತೆ ಹಾಗೆ ಹೇಳುವೆಯಾ ? ನಾನು ತಿಳಿದುಕೊಳ್ಳಬಲ್ಲೆನೋ ಇಲ್ಲವೋ ನಿನಗೆ ತೋರಿಸುತ್ತೇನೆ ನಿಲ್ಲು. ಹಾಂ, ಇನ್ನೊಂದು ಮಾತು-ಅಕ್ಕ ಮಾತ್ರ ನಿನ್ನ ಮೇಲೆ ತುಸು ಸಿಟ್ಟಾಗಿದ್ದಾರೆ. '

ಸುರೇಶನು ಗಹಿಗಹಿಸಿ ನಕ್ಕು ಹೇಳಿದನು, ' ನಿಜವಾಗಿಯೂ ? ಏನೇ ಆಗಲಿ ಬಹಳ ದೊಡ್ಡ ಆವಿಷ್ಕಾರ ಮಾಡಿದೆ ನೋಡು. ಇನ್ನು ನಿನಗೆ ಬುದ್ಧಿ ಇಲ್ಲದೆ ಇಲ್ಲ ಎಂಬುದನ್ನು ಒಪ್ಪಿಕೊಳ್ಳಲೇಬೇಕಾಯಿತು. '

' ಕೇವಲ ಚೇಷ್ಟೆಯೇ ನಿನ್ನದು. ಅಲ್ಲದಿದ್ದರೆ ಅಕ್ಕ ನಿನಗೆ ಹಾಗೇಕೆ ಹೇಳಿದರು, ಹೇಳಬಲ್ಲೆಯಾ ?—' ಎಂದು ಹೇಳುತ್ತಲೇ ಒಮ್ಮಿಗೇ ಅವಳಿಗೆ ನೆನಪಾಯಿತು—ಸುಧೆಯು ಅವಳಿಗೆ ಏನು ನಿಷೇಧಿಸಿ ಹೇಳಿದ್ದಳೆಂಬುದು. ಒಂದು ದಿನವೂ ಅವಳು ತನ್ನ ಅಕ್ಕನ ಮಾತು ನಡೆಸಲಿಲ್ಲ ! ಇದರಿಂದ ಸ್ನೇಹಳಿಗೆ ಬಹಳ ಕೆಡಕೆನಿಸಿತು ಹಾಗೂ ಹೆದರಿಕೆಯಾಯಿತು.

ಸುರೇಶನು ಒಂದು ಕ್ಷಣ ಅವಳ ಉತ್ತರ ನಿರೀಕ್ಷಿಸಿ ಕೇಳಿದನು, ' ಏನು ಹೇಳಿದಳು ? '

ಸ್ನೇಹಳು ಭೀತ ಸ್ವರದಲ್ಲಿ ಹೇಳಿದಳು, ' ಇನ್ನು ಹೇಳುವದಿಲ್ಲ. ಅಕ್ಕ ಕೇಳಿದರೆ ನನ್ನ ಮೇಲೆ ಬಹಳ ಸಿಟ್ಟಾಗಬಹುದು. '

' ಸಿಟ್ಟಾಗುವದೇ ಸರಿ. ಅವರು ನನಗೆ ಏನಾದರೂ ಅಂದಿದ್ದರೆ ಅದನ್ನು ಕೇಳುವ ಕುತೂಹಲ ಒಂದಿನಿಸೂ ಇರಲಿಲ್ಲ ನನಗೆ. ಆದರೆ ಇಂದು ನೀನು ಅವರ ಮಾತನ್ನಲ್ಲದೇ ಇನ್ನೇನಾದರೂ ಆಡುವೆಯೆಂದೂ ತೋರಲೊಲ್ಲದು. '

ಸ್ನೇಹಳು ನಡುವೆ ಬಾಯಿಹಾಕಿದಳು, ‘ ಅಲ್ಲ, ಹಾಗಲ್ಲ, ಅಕ್ಕ ನಿನಗೆ ಏನೂ ಅಂದಿಲ್ಲ, ಅವರು ತಮ್ಮ ಮಾತನ್ನೇ—’

ಸುರೇಶನು ಬೇಸರ ದನಿಯಲ್ಲಿ ಹೇಳಿದನು, ‘ ಇನ್ನು ಸಾಕುಮಾಡು ಸ್ನೇಹಾ, ಕೇಳಿ ಕೇಳಿ ನನಗಂತೂ ಬೇಜಾರವಾಯಿತು. ಇನ್ನೇನಾದರೂ ಒಂದೆರಡು ಮಾತಾಡುವದಾದರೆ ಆಡು. ಒಂದು ಹಾಡು ಬೇಕಾದರೆ ಹಾಡಿ ತೋರಿಸುತ್ತೇನೆ ಕೇಳು. ’

## ೧೩

ಸುರೇಶನಿಗೆ ತನ್ನ ಸಂಸಾರವನ್ನು ಸರಿಪಡಿಸುವದಾಗಲಿಲ್ಲವಾಗಿ, ಮತ್ತು ಸುಧೆಯ ಮೇಲೆ ಸಿಡಿಮಿಡಿಗೊಂಡವನಾಗಿ ಕಾಲೀಪದನನ್ನು ಕರೆದು ಸಂಸಾರದ ಭಾರವನ್ನೊಪ್ಪಿಸಿದನು. ಕಾಲೀಪದನ ಕಾರ್ಯಕೌಶಲ್ಯದ ಬಗ್ಗೆ ಅವನ ಅಗಾಧ ವಿಶ್ವಾಸ. ಕಾಲೀಪದನು ಬಂದು ಯಜಮಾನನ ಶಾಲಕನೆಂಬ ರೀತಿಯಲ್ಲಿ ತನ್ನ ಅಧಿಕಾರದ ಜಾಲವನ್ನು ಪಸರಿಸತೊಡಗಿದನು. ಇದರ ಫಲವಾಗಿ ತುಸು ದಿನಗಳಲ್ಲಿಯೇ ಆಳುಹೋಳುಗಳು ಆಪ್ತರಿಷ್ಟರು ಅತಿ ಉದ್ವಿಗ್ನರಾಗಿ ಹೋದರು. ಏಕೆಂದರೆ, ಕಾಲೀಪದನು ಗಂಭೀರ ಪ್ರಕೃತಿಯ ಮನುಷ್ಯ. ಕರ್ತವ್ಯಪರಾಯಣ ಮತ್ತು ಕತ್ತರಿಯ ಪೇಚಿನವ.

ಒಳಗೆ ಹೀಗೆ ಗೊಂದಲವಿರಲು, ಒಂದು ದಿನ ಸುಧೆಗೆ ತಿಳಿದು ಬಂತು— ವೃದ್ಧ ದಿವಾಣನು ಲೆಕ್ಕಪತ್ರವನ್ನೆಲ್ಲ ಒಪ್ಪಿಸಿ ಸುರೇಶನಿಂದ ಅಪ್ಪಣೆ ಪಡೆದು ಕಾಶೀವಾಸಕ್ಕೆ ಹೊರಟು ಹೋದನೆಂದು. ಸುಧೆಯನ್ನು ಕಂಡು ಕೂಡ ಹೋಗಲಿಲ್ಲ. ಇದೆಲ್ಲ ಕೇಳಿ ಸುಧೆಗೆ ನಾವಿಕನಿಲ್ಲದ ಹಡಗ ಇನ್ನು ಮುಣುಗಲು ತಡವಿಲ್ಲವೆಂದು ಎನಿಸತೊಡಗಿತು.

ಸುರೇಶನಿಗೆ ಮುಂದೇನು ಮಾಡಬೇಕೆಂಬುದು ತೋಚದಾಗಲು ಕಾಲೀಪದನಿಗೆ ಶರಣು ಹೋದನು. ಅವನು, ‘ ಹೆದರಿಕೆ ಏತರದು ? ನಾನಿದ್ದೇನೆ. ಹಳೆಯ ಜನರನ್ನೆಲ್ಲ ಒಂದು ನಿಟ್ಟಿನಿಂದ ಹೊರಗೆ ಹಾಕಿ ಬಿಡಬೇಕು. ಬಹಳ ದಿನದಿಂದ ಕೈಯಲ್ಲಿ ಅಧಿಕಾರ ಸಿಕ್ಕುಬಿಟ್ಟದ್ದರಿಂದ ಅವರ ಉರವಣಿಗೆ ಹೆಚ್ಚಿಹೋಗಿದೆ ’ ಎಂದನು.

ಸಂದಿಗ್ಧಚಿತ್ತನಾಗಿ ಸುರೇಶನು 'ಅದೂ ನಿಜವೇ' ಎಂದನು. ಆದರೆ ಮರುದಿನ ಮುಂಜಾನೆ ಕಾಲೀಪದನು ಬಂದು ದೂರು ಹೇಳಿದನು. 'ತಾನು ಹೊಸ ವ್ಯವಸ್ಥೆಯನ್ನು ಅಮಲಿನಲ್ಲಿ ತರಲು ಹೋಗಿ ನೋಡುತ್ತೇನೆ, ಪ್ರತಿ ವಿಷಯದಲ್ಲೂ ದೊಡ್ಡ ವಧುವಿನ ಹೆಸರಿನ ಪತಾಕೆಯು ತಲೆಯೆತ್ತಿನಿಂತಿದೆ. ಸಹಸಾ ಇಂದು ದೊಡ್ಡ ವಧುವು ಸಂಸಾರದ ಸಮಸ್ತಭಾರವನ್ನೂ ತನ್ನ ವಶಕ್ಕೆ ತೆಗೆದುಕೊಂಡಿದ್ದಾರೆ. ಎಂದಮೇಲೆ ಇನ್ನು ನನ್ನ ಅವಶ್ಯಕತೆಯೆಲ್ಲಿ ?'

ಆದರೆ ಈ ಆವೇದನದ ಫಲವು ವಿಪರೀತವಾಯಿತು. ಸುರೇಶನು ಕೇಳಿ ಉತ್ಸುಕನಾಗಿ ಹೇಳಿದನು, 'ನಿಜವಾಗಿಯೂ ? ಅವರು ಭಾರವಹಿಸಿರುವರೆ ? ಅಃ ಬದುಕಿಕೊಂಡೆ. ಗಂಡಸರಿಗೆಲ್ಲ ಗ್ರುಹಸ್ಥಾಲಿಯ ಜಂಜಾಲ ಬಗೆಹರಿದೀತೆ ಕಾಲೀ ?–– ಅದರಲ್ಲಿಯೂ ನೀನು ಹೊಸ ಮನುಷ್ಯ.'

ಕಾಲೀಪದನು ಮನದಲ್ಲಿ ಸಿಡಿಮಿಡಿಗೊಂಡು, 'ಹಾಗಾದರೆ ವಿಷಯ ಸಂಪತ್ತಿನ ಬಗ್ಗೆಯೂ ಅದೇ ಮಾತು ?' ಎಂದನು.

ಇದೇ ಸಮಯಕ್ಕೆ ಅಲ್ಲಿ ಸುಧೆಯು ಬಂದದ್ದು ನೋಡಿ ಅವನು ಅತ್ಯಂತ ಸಂಕುಚಿತನಾದನು. ಅವಳು ಅಸಂಕೋಚವಾಗಿ ಅವನನ್ನುದ್ದೇಶಿಸಿ ಹೇಳಿದಳು, 'ನೀನು ಹೊಸಬ. ಇಲ್ಲಿಯದನ್ನು ನೀನು ನಿಜವಾಗಿಯೂ ಏನೂ ಅರಿಯೆ. ಆದರೂ ನೀನು ನಮ್ಮವನು. ನೀನು ಸ್ವಚ್ಛಂದವಾಗಿ ದಿವಾಣನ ಅಧಿಕಾರ ತೆಗೆದುಕೊ. ಏನಾದರೂ ಸಹಾಯದ ಅವಶ್ಯಕತೆಯೆನಿಸಿದಾಗೆಲ್ಲ ನಾನು ತಿಳಿಸಿ ಹೇಳಿಕೊಡಬಲ್ಲೆ. ತಂದೆ ಮತ್ತು ಕಾಕಾ, ನನಗೆ ವಿಷಯಸಂಪತ್ತಿನ ಬಗ್ಗೆ ಎಲ್ಲವನ್ನೂ ಹೇಳಿಕೊಡುತ್ತಿದ್ದರು. ಆದ್ದರಿಂದ ನಾನು ಎಲ್ಲ ಬಲ್ಲೆ.'

ಒಬ್ಬ ಸ್ತ್ರೀಯ ಅಧಿಕಾರದ ಕೆಳಕೆ ತಾನು ದಿವಾಣನಾಗುವದೆ ? ಕಾಲೀಪದನು ಮತ್ತೆ ಸಿಡಿಮಿಡಿಗೊಂಡು ಸುರೇಶನ ಕಡೆಗೆ ನೋಡಿದನು. ಆದರೆ ಸುರೇಶನು ಅತ್ಯಧಿಕ ವಿಸ್ಮಿತನಾಗಿ, ಆನಂದಿತನಾಗಿ ಮತ್ತು ತುಸು ಲಜ್ಜಿತನೂ ಆಗಿ, 'ಹಾಗಾದರೆ ಕಾಲೀ ನಿನ್ನ ಅಸಮ್ಮತಿಯಿಲ್ಲವಷ್ಟೇ ?' ಎಂದು ಕೇಳಿದನು.

ಸುಧೆಯೂ ಕಾಲೀಪದನಿಗೆ ಕೇಳಿದಳು, 'ಇದಕ್ಕೆ ನಿನ್ನ ಅಸಮ್ಮತಿ ಏನಾದರೂ ಇದ್ದರೆ ಹೇಳು–' ಎಂದು.

ಕಾಲೀಪದನು ತಲೆಬಾಗಿಸಿ 'ಇಲ್ಲ' ಎಂದನು. ಆದರೆ ಮನದಲ್ಲಿಯೇ, 'ನಿನ್ನ ಯೋಗ್ಯತೆಯನ್ನು ತುಸು ಕಡಿಮೆ ಮಾಡುವದು ಅವಶ್ಯ' ಎಂದು ಕೊಂಡನು.

ಸುಧೆಯು ಹೊರಟು ಹೋದಳು. ಕಾಲೀಪದನೂ ತನ್ನ ಕೆಲಸಕ್ಕೆಂದು ಹೋದನು. ಸುಧೆಯ ಈ ಅನಿರೀಕ್ಷಿತ ಪರಿವರ್ತನದಿಂದ ಸುರೇಶನು ಚಕಿತನಾಗಿ 'ಇದರರ್ಥವೇನು ?' ಎಂದು ಎಂದುಕೊಂಡನು.

ಸಂಸಾರವು ಮತ್ತೆ ಸುನಿಯಂತ್ರಿತವಾಗಿ ಸಾಗತೊಡಗಿತು. ಕಾಲೀ-ಪದನು ತನ್ನ ಕೆಲಸದಲ್ಲಿ ಯಾವ ಸಹಾಯವನ್ನೂ ಕೋರುತ್ತಿದ್ದಿಲ್ಲ. ಆದರೂ ಸುಧೆಯು, ಅಯಾಚಿತವಾಗಿ ಅವನಿಗೆ ಉಪದೇಶ ಕೊಡುತ್ತಿದ್ದಳು. ಕಾಲೀ-ಪದನು ನಿರುಪಾಯನಾಗಿ ಸಹಿಸಿಕೊಂಡನು.

ಸ್ನೇಹಳು ಈಗ ಬದಲಾಗಿ ಹೋಗಿದ್ದಾಳೆ. ಅವಳ ಉಡುಪು ತೊಡಪು ಮೊದಲುಮಾಡಿ ಗೃಹಯೋಜನೆಯ ಪರ್ಯಂತ ಎಲ್ಲದರಲ್ಲಿಯೂ ಒಂದು ಬಗೆಯ ರುಚಿಯ ಪರಿಚಯವಿದೆ ! ಹೊಸ ಹೊಸ ಶಿಲ್ಪಶಿಕ್ಷೆಯಲ್ಲಿ, ಓದು ಬರೆಹದಲ್ಲಿ, ತನ್ನನ್ನು ತಾನು ಸಂಪೂರ್ಣ ತೊಡಗಿಸಿಕೊಂಡಿದ್ದಾಳೆ. ಸುರೇಶನು ಚಿಕಿತ್ಸಾ ದಾನಮಾಡಿ, ತಾನು ಕಲಿತ ವಿದ್ಯೆಯನ್ನು ಸಾರ್ಥಕಗೊಳಿಸುತ್ತ ನಡುನಡುವೆ ತನ್ನ ಬಂದೂಕಿಗೂ ಕೆಲಸ ಕೊಡಲೆಂದು ಬೇಟೆಗೆ ಹೋಗುತ್ತ ಇನ್ನುಳಿದ ಹೊತ್ತಿನಲ್ಲಿ ಸ್ನೇಹಳ ಹತ್ತಿರ ಬಂದು ಅವನು ಕುಳಿತಾಗಲೆ ಸ್ನೇಹಳಿಗೆ ತನ್ನ ಕೆಲಸದಿಂದ ತುಸು ವಿಶ್ರಾಂತಿ ಸಿಗಬೇಕಾದರೆ. ಸುಧೆಯು ಸಹ ಸುರೇಶನೊಡನೆ ಮೊದಲಿನಂತೆ ನಿಃಸಂಪರ್ಕಳಾಗಿ ವ್ಯವಹರಿಸುತ್ತಿಲ್ಲ. ಸ್ನೇಹಳ ಬಳಿ ಅವಳು ಬೀಸಾಗಿ ಇರುವಂತೆ ಅವನ ಬಳಿ ಇರುತ್ತಿಲ್ಲ. ತುಸು ಕುಂಠಿತಳಾಗಿ-ರುವಳು. ಸಂಸಾರದಲ್ಲಿ ಇಲ್ಲವೇ ವಿಷಯ ಸಂಪತ್ತಿನಲ್ಲಿ ಏನಾದರೂ ವಿಶೃಂಖಲತೆ ತೋರಿದರೆ ಸುರೇಶನೊಡನೆ ಆ ಬಗ್ಗೆ ಪರಾಮರ್ಶಿಸಬೇಕಾದ ಆವಶ್ಯಕತೆಯೆನಿಸಿದರೆ ಅವಳು ಅಕುಂಠಿತವಾಗಿ ಅವನೊಡನೆ ವಿಚಾರ ವಿನಿಮಯ ಮಾಡುತ್ತಾಳೆ. ಇಲ್ಲದಿದ್ದರೆ ಸಂಸಾರದ ಹಾಗೂ ಸ್ನೇಹಳ ಸಮಾಚಾರದಲ್ಲಿಯೇ ಅವಳ ಹೊತ್ತು ಹೋಗುತ್ತದೆ. ವಿಷಯಸಂಪತ್ತಿನಲ್ಲಿ ದಿನದಿನ ಉನ್ನತಿಯೇ ತೋರುತ್ತಿತ್ತು. ಸಂಸಾರದ ಉಚ್ಛೃಂಖಲ ಗತಿಯನ್ನು ನಿಪುಣ ಕರ್ಣಧಾರನಂತೆ ಒಂದು ಕ್ಷಣದ ಸ್ನಿಗ್ಧದೃಷ್ಟಿಯಿಂದ ತಿರುಗಿಸ ಬಲ್ಲವಳ ಯೋಗ್ಯತೆಯನ್ನು ಹೃದಯಂಗಮ ಮಾಡಿಕೊಳ್ಳುವವರಾರು ? ಸುರೇಶನು ಈಗ ಸುಧೆಯನ್ನು ಅತಿ ಮಾನವಾಗಿ ಕಾಣುವನು. ಅವಳ ಬಗೆ-ಗಿದ್ದ ತನ್ನ ಮೊದಲಿನ ಗ್ರಹಿಕೆಯು ನೆನಪಿಗೆ ಬಂದರೂ ಈಗ ಅವನು ಅತ್ಯಂತ ಕುಂಠಿತನಾಗುವನು.

ಮಧ್ಯಾಹ್ನದ ವಿರಾಮಸುಖದ ಸಮಯದಲ್ಲಿ ಸ್ನೇಹಳು ಮತ್ತು ಸುಧೆಯು

ಇಬ್ಬರೂ ಕುಳಿತು ಶಿಲ್ಪಕಾರ್ಯದಲ್ಲಿ ನಿರತರಾಗಿದ್ದರು. ಬದಿಗೆ ತೊಟ್ಟಿಲಲ್ಲಿ ಅರಳಿದ ಹೂವಿನಂತಿದ್ದ ಕೂಸೊಂದು ಮಲಗಿ ನಿದ್ದೆಮಾಡುತ್ತಿತ್ತು. ಈಗ ನಾಲ್ಕು ತಿಂಗಳಾಯಿತು, ಸ್ನೇಹಳಿಗೆ ಪುತ್ರಲಾಭವಾಗಿದೆ.

ಸುಧಾ, ' ಇನ್ನು ನನ್ನಿಂದಾಗದು ಸ್ನೇಹಾ, ಇದಿಷ್ಟು ನೀನೇ ತುಂಬು ' ಎಂದಳು.

' ನನ್ನಿಂದ ಆಗದು. ನಾನು ತುಂಬಿದರೆ ನೆಟ್ಟಗಾಗಲಿಕ್ಕಿಲ್ಲ. '

' ನೆಟ್ಟಗಾಗದೇನು ? ಮಗು ಎದ್ದಿದೆ, ನಾನು ಅದನ್ನು ಎತ್ತಿ-ಕೊಳ್ಳುತ್ತೇನೆ. '

' ಆಃ, ತುಸು ಅಳಲಿಬಿಡು ಅಕ್ಕಾ, ಮುಗಿಯುಬಂದಾಗಲೇ ಇಲ್ಲದ ಆಲಸ್ಯ ನಿನ್ನದು. '

ಸುಧೆಯು ಮಗುವನ್ನು ತೊಡೆಯ ಮೇಲೆ ತೆಗೆದುಕೊಂಡು ಕುಳಿತಳು. ಸ್ನೇಹಳು ಮುನಿಸುಗೊಂಡು, 'ಹಾಗಾದರೆ ನಾನೂ ತುಂಬುವದಿಲ್ಲ' ಎಂದಳು.

' ಒಳ್ಳೇದು ಇಟ್ಟುಬಿಡು. ನಾಳೆ ತುಂಬಿದರಾಯ್ತು. ಮಗುವಿಗೆ ತುಸು ಹೊಟ್ಟೆಗೆ ಕೊಡು, ನೋಡುವಾ. '

' ನನಗಾಗಿ ನಿನ್ನದು ಒಂದಿಲ್ಲ ಒಂದು ಆದೇಶವಿದ್ದದ್ದೇ. '

' ಒಳ್ಳೇದು ಹಾಗಾದರೆ ಹೇಳುವದಿಲ್ಲ, ಹೋಗು, ನಿನ್ನ ಕೋಣೆಗೆ ಹೋಗು. '

ಸ್ನೇಹಳು ನಕ್ಕುಬಿಟ್ಟಳು. ನಕ್ಕು, ' ಹಾಂ, ಹೀಗೋ ? ಅವರು ಬೇಟೆಗೆ ಹೋಗಿದ್ದಾರೆ—' ಎಂದಳು.

ಸುಧೆಯೂ ಮುಗುಳು ನಗೆ ನಕ್ಕು ' ಒಮ್ಮೆ ಬೇಟೆಗೆ ಹೋಗಿಯಂತೂ ಈ ಹರಿಣಿಯನ್ನು ತಂದರು ಮನೆಗೆ; ಈ ಸಲ ಇನ್ನೇನು ಹಿಡಿದು ತರುವರೋ?' ಎಂಧಳು.

' ಅಂದರೆ ನಾನು ಹರಿಣಿಯೆ ? ಹಾಗಾದರೆ ಈ ಸಲ ಒಂದು ಹುಲಿ ಹಿಡಿದು ತರಬಹುದು. '

ತನ್ನ ಮಾತಿನಿಂದ ಸ್ನೇಹಳು ತಾನೇ ಬಿದ್ದು ಬಿದ್ದು ನಗತೊಡಗಿದಳು. ಸುಧೆಯು ತುಸು ಗಂಭೀರಳಾಗಿ ಹೇಳಿದಳು, ' ಹುಲಿಯಂತೂ ಮನೆಯಲ್ಲಿಯೇ ಇದೆ, ಒಂದು ತೋಳವಾಗಿದ್ದರೆ ಚೆನ್ನಾಗಿತ್ತು. '

ಸ್ನೇಹಳಿಗೆ ಇಂಗಿತ ತಿಳಿಯಲಿಲ್ಲ. ' ಹುಲಿ ? ಓ—ನಮ್ಮ ಪ್ರಾಣಿ ಶಾಲೆ

ಯೊಳಗಿನ ಹುಲಿಯೇನು ? ಆದರೆ ತೋಳವೇಕೆ ? ಆ ಹುಲಿಯಂತೂ ಯಾರಿಗೂ ಏನನ್ನೂ ಮಾಡುವದಿಲ್ಲ. ಮನುಷ್ಯನನ್ನೂ ಜೀವಜಂತುಗಳನ್ನೂ ಎಚ್ಚರಿಸುವದಕ್ಕಾಗಿಯೇ ಅಲ್ಲವೇ ದೇವರು ತೋಳವನ್ನು ಹುಟ್ಟಿಸಿದ್ದು ? '

' ಅದನ್ನು ಪಂಜರದಲ್ಲಿರಿಸಿದೆಯೆಂದು ಪರಿಣಾಮ— ಇಲ್ಲದಿದ್ದರೆ ಆದು ಬೇಟೆಗಾರನ ಗೋಣು ಮುರಿಯುತ್ತಿತ್ತೇನೊ ? '

' ಆದರೆ ಆ ಹುಲಿಯನ್ನು ನಮ್ಮ ಬೇಟೆಗಾರನು ಹಿಡಿದಿಲ್ಲ. ಅದು ಕೊಂಡ ಹುಲಿ. '

' ಅದೂ ನಿಜ ' ಎಂದು ಸುಧೆಯು ಮಗುವನ್ನು ಸ್ನೇಹೆಯ ವಶಕೊಡ-ಗಿದಳು. ಸ್ನೇಹಳು ಆಲಸ್ಯದಿಂದ ಮಲಗಿ, ' ಯಾವದಕ್ಕೂ ಮನಸ್ಸಾಗ ಲೊಲ್ಲದು ಅಕ್ಕಾ ! ನಸುಕಿನಲ್ಲಿಯೇ ಹೋಗಿದ್ದಾರೆ, ಬೇಟೆ ಮುಗಿದಿರ-ಲಿಕ್ಕಿಲ್ಲವೆ ? ' ಎಂದಳು.

ಸುಧೆಯು, ಮಲಗಿದ ಮಗುವನ್ನು ಮತ್ತೆ ಹಾಸಿಗೆಯಲ್ಲಿ ಮಲಗಿಸಿ, ' ಇನ್ನೂ ಈಗೇನು ? ಮೊದಲು ಸಂಜೆಯಾಗಲಿ, ಹೊಟ್ಟೆ ಹಸಿದು ಕಕ್ರಾಂತ ವಾಗಲಿ, ತಿರುಗಿ ತಿರುಗಿ ಮುಖವೆಲ್ಲ ಕಪ್ಪಿಡಲಿ, ಆಮೇಲೆ ಅಲ್ಲವೇ ಬರುವದು ? '

' ನೋಡು ಅಕ್ಕ, ಇದು ಅನ್ಯಾಯವಲ್ಲವೆ? ನೀನು ತುಸು ಬೇಡವೆನ್ನುವ ದಿಲ್ಲವೇಕೆ ? '

' ಒಳ್ಳೇ ನರಿಯಾದ ಮಾತನ್ನೇ ಹೇಳಿದೆ—ನಾನೆಂದರೆ ಹಾಕಿದ ಗೆರೆ ದಾಟುವದಿಲ್ಲ ನೋಡು ! '—ಎಂದು ಸುಧೆಯು ಮತ್ತೆ ಹೆಣಿಗೆಯನ್ನು ಎತ್ತಿ ಕೊಂಡಳು. ಈ ಸಲ ಸುಧೆಯ ಕೊನೆಯ ಮಾತಿನ ಇಂಗಿತವನ್ನರಿತು ಸ್ನೇಹಳು ಒಳಒಳಗೇ ದುಃಖಿತಳಾದಳು. ಆದರೆ ಏನು ಹೇಳುವದೆಂದು ಉತ್ತರ ತೋಚದೆ ಸುಮ್ಮನಿದ್ದು ಬಿಟ್ಟಳು. ಸ್ನೇಹಳು ಸುಮ್ಮನಾದದ್ದು ನೋಡಿ ಸುಧೆಯು ನಗುತ್ತ, ' ಸಿಟ್ಟಾದೆಯಾ ? ' ಎಂದಳು.

' ನೀನು ನಡುನಡುವೆ ಹೀಗೆ ದುಃಖಕೊಡುವ ಒಂದೊಂದು ಮಾತನ್ನೇಕೆ ಆಡುವೆ ಅಕ್ಕ ? '

' ಯಾಕೊ ? ಅದು ನನ್ನ ಸ್ವಭಾವ ಸ್ನೇಹಾ ! ನಾನು ಯಾವಾಗಲೂ ಜಗಳಗಂಟಿ. '

' ನಾನು ಹಾಗೆಂದೆನೆ ? '

' ಅನ್ನದಿದ್ದರೂ ನೋಡುವದಿಲ್ಲವೇನು ? ಇದೋ ನಿನ್ನೊಡನೆಯಂತೂ ಈಗ ನಡೆದೇ ಇದೆ. ಅಲ್ಲದೇ ನಾನು ಸಣ್ಣವಳಿರುವಾಗ ನನ್ನ ತಂದೆಯು ಕೂಡ ಹೇಗೆ ಜಗಳಾಡುತ್ತಿದ್ದೆ ಕೇಳು. '

' ನಿಮ್ಮ ತಂದೆ ! ಒಳ್ಳೇದು ಅಕ್ಕಾ, ನಿಮ್ಮ ತಂದೆಯ ಮನೆಗೆ ಹೋಗಲು ನಿನ್ನ ಜೀವ ಹಾತೊರೆಯುವದಿಲ್ಲವೇ ? '

' ಇಲ್ಲ. '

' ನನಗೆ ತಂದೆಯಿದ್ದರೆ, ನನ್ನ ಜೀವ ಮಾತ್ರ ಹಾತೊರೆಯುತ್ತಿತ್ತು ಅಕ್ಕಾ. '

' ಹೇಳಿದೆನಲ್ಲವೇ ನಾನು ಏನೋ ಒಂದು ಬಗೆಯ ಮನುಷ್ಯಳೆಂದು ? ಈಗ ಜಗಳದ ಮಾತು ಹೇಳುತ್ತೇನೆ ಕೇಳು. ' ಸ್ನೇಹಳಿಗೆ ದುಃಖ ಕೊಟ್ಟಿದ್ದಾಗಿ ಅನುತಪ್ತಳಾದ ಸುಧೆಯು ಮಾತಿಗೆ ಬಣ್ಣ ಬಳಿದು ಅವಳ ಕ್ಲಿಷ್ಟ ಮನಸ್ಸನ್ನು ಅರಳಿಸಲು ಯತ್ನಿಸಿದಳು. ಆನಂದದ ಭರದಲ್ಲಿ ಸ್ನೇಹಳು ಬಿದ್ದು ಬಿದ್ದು ನಗತೊಡಗಿದಳು.

' ಏನು ? ಏನಾಗಿದೆ—ಇಷ್ಟೇಕೆ ನಗೆ—' ಇಬ್ಬರೂ ಸಾವರಿಸಿಕೊಂಡು ನೋಡುತ್ತಾರೆ— ಸುರೇಶ! ಸ್ನೇಹಳು ಎದ್ದು ಕುಳಿತು, 'ಯಾವಾಗ ಬಂದೆ?' ಎಂದಳು.

' ತುಸು ಮೊದಲು. ಇಷ್ಟು ನಗೆಯ ಕಾರಣವೇನು ? ದೂರದಿಂದಲೇ ನಗೆ ಕೇಳಿಸುತ್ತಿತ್ತು. ಹಿಗ್ಗಿನ ವಿಷಯವೇ ?'

' ಅದು ಹೀಗೆ ಒಂದು ಮಾತು ಕೇಳಿ. ಅಕ್ಕ ಹೇಳುವೆಯೇಕೆ ? '

' ಊಟ ಬೇಡವೆ ? '

ಸುರೇಶನು, ' ಅದು ಇದು ಸಾಕಷ್ಟು ತಿಂದಿದ್ದೇನೆ, ಈಗ ಇನ್ನೇನು ಊಟ ಮಾಡುವದಿಲ್ಲ ' ಎಂದನು.

' ಹಾಗಾದರೆ ಇನ್ನೇನು —ಕೂಡು ಅಕ್ಕಾ. '

ಸ್ನೇಹಳು ಮತ್ತು ಸುರೇಶನು ಹೀಗೆ ಮಾತುಕಥೆಯಾಡುತ್ತಿದ್ದಾಗ ಸುಧೆಯು ಎಂದೂ ಕೂಡುತ್ತಿರಲಿಲ್ಲ; ಮತ್ತು ಅವರಾದರೂ ಒತ್ತಾಯಪಡಿಸಲು ಸಾಹಸಗೊಳ್ಳುತ್ತಿದ್ದಿಲ್ಲ. ಕೆಲ ನಿಮಿಷಗಳ ಹಿಂದೆಯೇ ಸುಧೆಯ ಒಂದು ಅತರ್ಕಿತ ಮಾತಿನಿಂದ ಸ್ನೇಹಳು ವ್ಯಥಿತಳಾಗಿ ಹೋಗಿದ್ದಳು. ಈಗ ಅವಳ ಅನುರೋಧವನ್ನು ನಿರಾಕರಿಸಿ ಮತ್ತೆ ಅವಳ ಮನಸ್ಸಿಗೆ ನೋವು ಕೊಡುವದು

ಸುಧೆಗೆ ಸರಿದೋರಲಿಲ್ಲ. ಮನಸ್ಸಿನಲ್ಲಿ ಪ್ರತಿಜ್ಞೆ ಮಾಡಿಕೊಂಡಳು— ಇನ್ನು ಮುಂದೆ ಎಂದೂ ಹೀಗೆ ಮೈಮರೆತು ಇರುವದಿಲ್ಲವೆಂದು. ಸುರೇಶನು ಕೂಡದಿರುವದನ್ನು ನೋಡಿ ಸ್ನೇಹಳು ಅವನಿಗೂ, 'ಕೂಡಬಾರದೆ?' ಎಂದಳು.

ಸುಧೆಯ ಪೀಕಲಾಟವನ್ನು ಸುರೇಶನು ತಿಳಿದುಕೊಂಡಿದ್ದನು. ಎಂದೇ ಅವನೂ ಅನುಮಾನಿಸುತ್ತಿದ್ದನು. ಈಗ ಸ್ನೇಹಳ ಮಾತಿನಿಂದ ನಿರುಪಾಯನಾಗಿ ಕುಳಿತುಕೊಂಡನು. ಸುಧೆಯು ಮಲಗಿದ ಕೂಸನ್ನು ಎತ್ತಿ ತೊಡೆಯ ಮೇಲಿರಿಸಿಕೊಂಡಳು.

'ಏನು ಬೇಟೆಯಾಡಿದೆ? ಅಕ್ಕ ಅನ್ನುತ್ತಿದ್ದಳು ತೋಳ ಹಿಡಿದು ತರುವಿಯೆಂದು.'

'ತೋಳ!'—ತುಸು ನಕ್ಕು ಸುರೇಶನು ಕೇಳಿದನು, 'ಅದು ಹೇಗೆ? ತೋಳವೇಕೆ?'

'ನಾನೇನೋ ಹರಿಣಿಯಂತೆ? ಪಂಜರದ ಹುಲಿಯು ಯಾರನ್ನಾದರೂ ಹಿಡಿದರೆ! ಅದಕ್ಕೇ ತೋಳವು ನಮಗೆ ಎಚ್ಚರಿಕೆ ಕೊಡುವದಂತೆ!'

'ನೀನು ಹರಿಣಿ ಮತ್ತೆ ನಾನು? ವರಾಹ ಗಿರಾಹನೇನು?'

'ನೀನಂತೂ ಬೇಟೆಗಾರ.'

'ಒಳ್ಳೇದು, ಕಾರಣವಿಲ್ಲದೆ ಪಂಜರದಲ್ಲಿನ ಹುಲಿಗೆ ಹೆದರುವದೇಕೆ?'

ಇದೇನು ಸಂಕಟಕ್ಕಿಟ್ಟಿತೆಂದುಕೊಂಡು ಸುಧೆಯು ತ್ರಸ್ತಳಾಗಿ ಹೇಳಿಬಿಟ್ಟಳು, 'ಇಲ್ಲವಿಲ್ಲ, ಆ ಮಾತಾಗಿಲ್ಲ. ಸ್ನೇಹಳು ಒಂದಿದ್ದರೆ ಇನ್ನೊಂದು ತಿಳಕೊಳ್ಳುತ್ತಾಳೆ. ಬೇಟೆ ಏನು ತಂದುದಾಯಿತು?'

ಸುರೇಶನು ತುಸು ಉಬ್ಬಿ ಒಮ್ಮೆಗೇ ಸುಧೆಯನ್ನೇ ನೋಡುತ್ತ ಹೇಳಿದನು, 'ಕೆಲ ಹಂಸಗಳು ಮತ್ತು ಪಾರಿವಾಳಗಳು. ನೋಡುವೆಯಾ?'

ಸುರೇಶನ ಈ ಅಸಂಕೋಚವಾದ ನೋಟದಿಂದ ಸುಧೆಯು ಮುಖ ತಗ್ಗಿಸಿದಳು. ಸ್ನೇಹಳು ಹೇಳಿದಳು, 'ಇಲ್ಲ, ಅವೆಲ್ಲ ನಮಗೆ ಸೇರುವದಿಲ್ಲ; ಆಹಾ, ಅವುಗಳದೇನು ದೋಷವೆಂದು ಅವನ್ನು ಕೊಲ್ಲುವೆ?'

ಇಷ್ಟರಲ್ಲಿ ಸುಧೆಯು ಮಗುವನ್ನು ಮಲಗಿಸಿ ಎದ್ದು ನಿಂತಳು. 'ಎದ್ದೆಯೇಕೆ ಅಕ್ಕ? ಬರಬಾರದೇ ಹೆಣಿಗೆಯನ್ನು ಮುಗಿಸೋಣ.'

'ನೀನು ಮುಗಿಸು. ಇನ್ನೂ ಕೆಲಸವಿದೆ—'

ಸುಧೆಯು ಮಾತು ಮುಗಿಸುವ ಮುನ್ನವೇ ಸುರೇಶನು ಎದ್ದು ಹೋಗು ಲನುವಾಗಿ ಹೇಳಿದನು, ' ತುಸು ವಿಶ್ರಮಿಸಬೇಕು— ಮೈಯೆಲ್ಲ ಬಹಳ ನೋಯುವದು. ' ಆ ಸಭೆಯಲ್ಲಿ ಕೂಡಲು ಸುಧೆಗೆ ಮನಸ್ಸಿಲ್ಲವೆಂದರಿತೆ- ಸುರೇಶನು ಹೊರಟು ಹೋದನೆಂದು ಸುಧೆಯು ತಿಳಿದುಕೊಂಡಳು.

ಸ್ನೇಹಳು, ' ಇಬ್ಬರೂ ಹೊರಟಿರಿ, ನಾನೊಬ್ಬಳೇ ಕುಳಿತಿರಲೇ ? ' ಎಂದಳು.

' ಬಾ ಹಾಗಾದರೆ ಹೆಣಿಗೆಯನ್ನು ಮುಗಿಸೋಣ. '

' ಅದೇ ಒಳ್ಳೇದು ಬಾ. ' ಇಬ್ಬರೂ ಕೆಲಸದಲ್ಲಿ ತೊಡಗಿದರು. ತುಸು ಹೊತ್ತಿನ ಮೇಲೆ ಕೂಸು ಅಳುತ್ತಿರಲು ಸುಧೆಯು ಸ್ನೇಹಳ ಕೈಯಿಂದ ಹೆಣಿಗೆ ಯನ್ನು ಕಸಿದು ಹೇಳಿದಳು, ' ನೀನು ಮಗುವನ್ನೆತ್ತಿಕೊ, ನಾನಿಲ್ಲ ಇದನ್ನು ಮುಗಿಸಿ ತರುತ್ತೇನೆ. '

' ನಾನು ಒಬ್ಬಳೇ ಇರಬೇಕೇನು ? '

' ಒಬ್ಬಳೇ ಏಕೆ ?— ಅತ್ತ ಹೋಗಬಾರದೆ ? '

' ನಾನು ಹೋಗುವದಿಲ್ಲ. '

' ಚೇಷ್ಟೆಯಲ್ಲ— ಹೋಗು, ಏನಾದರೂ ಬೇಕಾಗಿದ್ದರೆ ನೋಡು. ಅಲ್ಲದೇ ಊಟದ ಮಾತನ್ನೂ ಕೇಳು ಮತ್ತೆ. '

' ಆಗಲಿ ' ಎಂದು ಸ್ನೇಹಳು ಎದ್ದು ಹೋದಳು.

ಹೆಣಿಗೆಯನ್ನು ಕೈಯಲ್ಲಿ ತೆಗೆದುಕೊಂಡು ಸುಧೆಯು ವಿಚಾರಿಸತೊಡಗಿ- ದಳು. ತನ್ನ ಈ ವಿಧವಾದ ವರ್ತನದಿಂದ ಸುರೇಶನನ್ನೇಕೆ ತೊಂದರೆಗೀಡು ಮಾಡುವದು ? ತನ್ನ ಈ ಸಂಕೋಚದಿಂದ ಸುರೇಶನೊಂದಿಗಿದ್ದ ತನ್ನ ಸಂಬಂಧವನ್ನು ಅವನ ಮನದಲ್ಲಿ ಇನ್ನಷ್ಟು ಸ್ಫುಟವಾಗಿ ಮೂಡಿಸಿದಂತಾಗುವ ದಿಲ್ಲವೆ ? ಸುರೇಶನು ತಾನಾಗಿಯೇ ತೊಡೆದುಹಾಕಿರುವ ಸಂಬಂಧವನ್ನು ಅವನಲ್ಲಿ ಮತ್ತೆ ಮತ್ತೆ ಜಾಗರಿಸುವುದು ತೀರ ನಾಚಿಗೆಗೇಡು. ಅಲ್ಲದೆ, ತನ್ನ ಸ್ನೇಹಳ ಪತಿಯ ಮನದಲ್ಲಿ ಇಲ್ಲದ ಗ್ಲಾನಿಯನ್ನುಂಟುಮಾಡುವದು ಅನ್ಯಾಯವಲ್ಲವೇ ? ಸ್ನೇಹಳದು ಬಹಳ ಸರಳ ಮನಸ್ಸು. ಅವಳ ಪತಿ ಯೊಡನೆ ತಾನು ತುಸು ಆತ್ಮೀಯತೆಯಿಂದ ಇರುವದನ್ನು ನೋಡಿದರೂ ಹಿರಿಹಿರಿ ಹಿಗ್ಗುವಳು. ಅಂಥ ಸ್ನೇಹಳ ಸರ್ವಸ್ವವಾದ ಅವಳ ಪತಿಯ ಮನದಲ್ಲಿ, ಲಜ್ಜೆ ಅಥವಾ ಅನುತಾಪದ ರೂಪದಲ್ಲಿಯೇ ಆಗಲಿ ಬೇರೆ ಭಾವನೆ

ಸುಳಿಯುಗೊಡುವದು ಸುಧೆಯು ಅಮಾರ್ಜನೀಯ ಅಪರಾಧವೆ ಸೈ. ಸುರೇ-ಶನು ತನ್ನಲ್ಲಿ ಮಾಡಿದ ಅಪರಾಧಕ್ಕೆ, ತೋರಿದ ಅವಜ್ಞೆಗೆ ಇದೇ ತಕ್ಕ ಸೇಡಾದರೂ, ಆ ಸೇಡು ತೀರಿಸಿಕೊಳ್ಳುವ ಉಪಾಯುವಿಲ್ಲ. ಅವನು ತನ್ನ ಅಕ್ಕರೆಯ ಸ್ನೇಹಳ ಪ್ರೀತಿಯ ಪತಿಯಲ್ಲವೆ ? ತನ್ನ ಕರ್ತವ್ಯಬುದ್ಧಿಯನ್ನು ತಿರುಗಿ ಸಂಸಾರದಲ್ಲಿ ನಿಯೋಜಿಸಿದ್ದೇಕೆ ? ಸ್ನೇಹಳಿಗಾಗಿ ಅಲ್ಲವೆ ? ಅಕ್ಕನ ಕರ್ತವ್ಯವನ್ನು ಇನ್ನೂ ಏಕೆ ತಾನು ಸಮರ್ಪಕವಾಗಿ ಮಾಡುತ್ತಿಲ್ಲ ? ಈ ದುರ್ಬಲತೆಯು ತನ್ನನ್ನೆಂದಿಗೆ ಬಿಡುವದು ?— ಸುಧೆಯು ಹೆಣಗೆಯನ್ನು ಬಿಟ್ಟಿದ್ದಳು. ತುಸು ಹೊತ್ತಿನಲ್ಲಿ ಖಾದ್ಯದ್ರವ್ಯಗಳಿಂದ ತುಂಬಿದ ತಾಟಿ-ನೊಂದಿಗೆ ನೆಟ್ಟಗೆ ಸ್ನೇಹಳ ಶಯನಗೃಹದ ಬಾಗಿಲಿಗೆ ಬಂದಳು. ಬಾಗಿಲು ತೆರೆದಿದ್ದಾಗಿ ಒಳಗಿದ್ದವರು ಕಾಣುತ್ತಿದ್ದರು. ಸ್ನೇಹಳು ಮಗುವನ್ನು ಮಡಲಲ್ಲಿಟ್ಟುಕೊಂಡು ಪತಿಯ ಎಡೆಗಾತು ಕೂತಿದ್ದಾಳೆ. ಸುರೇಶನು ಪರ್ಯಂಕದ ಮೇಲೆ ಅರ್ಧಶಾಯಿತನಾಗಿ ಕುಳಿತು ನಡುನಡುವೆ ಉಭಯತ ರನ್ನೂ ಮುಂಟ್ಟಿಸುತ್ತಿದ್ದಾನೆ.

ಸುಧೆಯು ನಿಃಶಬ್ದವಾಗಿ ಸಂದು ಒಂದಳು. ಇಂದಿನಿಂದ ಸಂಕೋಚ ವಿಲ್ಲದೇ ಆತ್ಮೀಯಳಂತೆ ವ್ಯವಹರಿಸುವದಾಗಿ ಪ್ರತಿಜ್ಞೆಮಾಡಿ ಬಂದಿದ್ದಾಳೆ-ಎಂದೇ ದೇವರು ಅವಳಿಗೆ ಇಂಥ ಪರೀಕ್ಷಾಪ್ರಸಂಗವನ್ನು ತಂದೊದವಿಸಿ-ದನೇ ? ಒಳಗೆ ಹೋಗಬೇಕೆಂದರೆ ಹೆಜ್ಜೆ ಕಿತ್ತಲೊಲ್ಲವು.

ಆದರೆ ಅವಳ ಅಂತರ್‍ಯದಲ್ಲಿ ಇಷ್ಟು ಶಕ್ತಿಯೂ ಸಂಚಿತವಾಗಿಲ್ಲವೆ ? ಜೀವನದ ಪ್ರಥಮ ಯೌವನದ ಆಕುಲ ವಾಸನಾ ಕುಸುಮಗಳನ್ನು ಪರಾರ್ಥ ಪರತೆಯ ದೀಪ್ತಹೋಮಾನಲನಲ್ಲಿ ಭಸ್ಮವಾಗಿಸಿಯೂ ಅವಳ ಹೃದಯವು ಇಷ್ಟು ಸಹ ಬಲಿಷ್ಠವಾಗಿಲ್ಲವೆ ? ಜೀವನದ ಸ್ನೇಹ, ಪ್ರೇಮ, ಆಶಾ, ತೃಷ್ಣ ಇಷ್ಟೊಂದು ಗರಲಸಮಭಾವಗಳನ್ನು ಒಂದು ನಿಮಿಷದಲ್ಲಿ ನುಂಗಿ ಕುಳಿತ ಅವಳ ಮೃತ್ಯುಂಜಯ ಕಠಿಣ ಪ್ರಾಣವು ಇನ್ನೂ ಇಷ್ಟು ದುರ್ಬಲವೆ ? ಆದಾಗದು, ಪ್ರಾಣವನ್ನು ಬಲಪಡಿಸಲೇಬೇಕು.

ರುದ್ಧಕಂಠವನ್ನು ಸರಿಪಡಿಸಿಕೊಂಡು ' ಸ್ನೇಹಾ ! ' ಎಂದು ಕರೆದಳು. ಸ್ನೇಹಳು ವಿಚಲಿತಳಾಗಿ ಸಾವರಿಸಿಕೊಂಡು ಎದ್ದು ನಿಂತು, ' ಯಾರು, ಅಕ್ಕ ? ' ಎಂದು ಮಗುವನ್ನು ಹಾಸಿಗೆಯ ಮೇಲೆ ಮಲಗಿಸಿದಳು. ಅಸ-ಮಯದಲ್ಲಿ ಅನಿರೀಕ್ಷಿತವಾಗಿ ಕೈಯಲ್ಲಿ ತಾಟು ಹಿಡಿದುಕೊಂಡು ಸುಧೆಯು ಬಂದದ್ದು ನೋಡಿ ಸುರೇಶನೂ ವಿಸ್ಮಿತನಾಗಿ ಅವಸರವಸರದಿಂದ ಎದ್ದು ನಿಂತನು. ಮಗು ಚೀರಿ ಅಳತೊಡಗಿತು.

ಸುಧೆಯು ಅತ್ಯಂತ ವಿಪದ್ಗ್ರಸ್ತಳಾದಳು. ಮೊದಲೇ ತನ್ನನ್ನು ತಾನು ಸಾವರಿಸಿಕೊಳ್ಳಬೇಕಾದರೇ ಸಾಕುಬೇಕಾಗಿ ಹೋಗಿದೆ; ಅದರಲ್ಲಿ ಅವರ ಈ ವಿಸ್ಮಿತಭಾವವು ಅವಳನ್ನು ಇನ್ನೂ ಅಪದಸ್ಥಳನ್ನಾಗಿ ಮಾಡಿತು. ಆದರೂ ಸುಧೆಯು, ಸಾಧ್ಯವಾದಷ್ಟು ಸ್ಥಿರಳಾಗಿ, ಅತಿಕಷ್ಟದಿಂದ ತಾಟನ್ನು ಕೆಳಗಿಟ್ಟು, ಮ್ಲಾನಮುಖದಿಂದ ನಕ್ಕು, 'ಊಟದ ಮಾತು ಮರೆತು ಹೋಯಿತೆ ?'

ಸ್ನೇಹಳು ಹೇಳಿದಳು, 'ಮರೆತಿರಲಿಲ್ಲ, ಆದರೆ ಉಣ್ಣಲು ಒಲ್ಲರಂತೆ-ನಾನೇನು ಮಾಡಲಿ ?' ಎಂದಳು.

ಅಳುತ್ತಿರುವ ಮಗುವನ್ನು ಹಾಸಿಗೆಯಿಂದೆತ್ತಿ ಎದೆಗವಚಿಕೊಂಡು ಮೃದುವಾಗಿ ಸುಧೆಯು, 'ಹಾಗಾದರೆ ಊಟದ ಆವಶ್ಯಕತೆಯಿಲ್ಲವೆ ?' ಎಂದು ಕೇಳಿದಳು.

'ನೀನೊಮ್ಮೆ ಹೇಳಿನೋಡು.'

ಸುರೇಶನು ಅವಸರವಸರವಾಗಿ, 'ಉಣ್ಣುವೆ, ಹಸಿವೆಯಿರಲಿಲ್ಲ—ಅದಕ್ಕೇ ಹಾಗೆ ಹೇಳಿದ್ದೆನು' ಎಂದು ಹೇಳಿದನು.

ಸುರೇಶನು ತನ್ನ ಪೇಚಾಟವನ್ನು ನೋಡನೊಲ್ಲನೆಂದು ಸುಧೆಗೆ ತಿಳಿ-ಯಿತು. ತನ್ನ ದುರ್ಬಲತೆಯನ್ನು ಧಿಕ್ಕರಿಸಿಕೊಳ್ಳುತ್ತ ಸುರೇಶನನ್ನು ಕೃತಜ್ಞತೆಯಿಂದ ನೋಡುತ್ತ ಸುಧೆಯು, 'ಊಟಕ್ಕೆ ಕುಳಿತರೆ ಹಸಿವೆ ಎನಿಸುವದು' ಎಂದಳು.

ಸುರೇಶನು ಹೆಚ್ಚು ಮಾತಾಡದೇ ಆಸನದ ಮೇಲೆ ಹೋಗಿ ಕುಳಿತನು. ಸ್ನೇಹಳು ಬೀಸಣಿಕೆ ತೆಗೆದುಕೊಂಡದ್ದು ನೋಡಿ, 'ಬೇಡ ಬೇಡ, ಅದೇನು ಕಾರಣವಿಲ್ಲ' ಎಂದನು. ಸ್ನೇಹಳು ಸುಧೆಯ ಸೊನ್ನೆಯರಿತು ಬೇಡವೆಂದರೂ ಬೀಸಣಿಕೆ ಬೀಸತೊಡಗಿದಳು. ತುಸು ಹೊತ್ತಿನ ಮೇಲೆ ಸ್ನೇಹಳು, 'ಹಸಿವೆ ಇರಲಿಲ್ಲವಲ್ಲವೇ ನಿನಗೆ ?' ಎಂದಳು.

.'ಊಟಕ್ಕೆ ಕುಳಿತರೆ ಹಸಿವೆಯೆನಿಸುವದೆಂಬ ಮಾತು ನಿಜವೇ.'

ಆದರೂ ಸುಧೆಗೆ ಚೆನ್ನಾಗಿ ಮೈಚಳಿಬಿಟ್ಟು ಮಾತಾಡುವದಾಗಲೊಲ್ಲದು. ಅನ್ಯಮನಸ್ಕಳಾಗಿ ಮಗುವಿನೊಂದಿಗೆ ಆಟವನ್ನೇ ಆಡುತ್ತಿದ್ದಳು. ಸ್ನೇಹಳು, 'ಇನ್ನಷ್ಟು ಏನಾದರೂ ಬಡಿಸಲೇ ?' ಎಂದು ಕೇಳಿದಳು.

'ಇನ್ನು ಸಾಕು.'

ಸುಧೆಯು, 'ಹಸಿವೆಯಿಲ್ಲವೆಂದು ಹೆಚ್ಚು ಉಣ್ಣಲು ನಾಚಿಕೆಯಾಗು-ತ್ತದೆ' ಎಂದಳು.

ಅದನ್ನು ಕೇಳಿ ಸುರೇಶನು ನಕ್ಕನು. ಸುಧೆಯ ಮುಖದ ಕಡೆಗೆ ನೋಡುತ್ತ ಹೇಳಿದನು, ‘ ಅದು ಬುದ್ಧಿಯಿಲ್ಲದ ಲಕ್ಷಣ. ’

ಸ್ನೇಹಳು ನಕ್ಕು, ‘ ನೀನು ಬುದ್ಧಿವಂತನ ಲಕ್ಷಣವನ್ನೆಲ್ಲಿ ತೋರಿಸು-ತ್ತಿರುವಿ ? ’ ಎಂದಳು.

‘ ತೋರಿಸಲಿಲ್ಲವೆ ? ಉಣ್ಣುವದಿಲ್ಲವೆಂದು ಇಷ್ಟು ಉಂಡೆ ! ’

ಸುಧೆಯು ಮತ್ತೆ, ‘ ಊಟ ಹತ್ತಿರ ಬಂತೆಂದು. ಇಲ್ಲದಿದ್ದರೆ--’ ಎಂದಳು.

ಸ್ನೇಹಳು, ‘ ಇಲ್ಲದಿದ್ದರೆ ಆಲಸ್ಯದಿಂದ ಹಾಗೇ ಇರುತ್ತಿದ್ದರು– ಇಷ್ಟು ಬುದ್ಧಿ ! ’ ಎಂದಳು.

‘ ಬುದ್ಧಿಯಿಲ್ಲದೆ ? ಅಧ್ರುವದ ಬೆನ್ನು ಯಾರು ಹತ್ತುವರು ? ಆದರೆ ಧ್ರುವವಿದ್ದದ್ದು ತಾನಾಗಿ ನಡೆದು ಬಂದಾಗ ಅದನ್ನು ಅನಾದರ ಮಾಡುವವನೇ ಬುದ್ಧಿಹೀನ. ’

ಸುಧೆಯು ಈ ಸಲ ಅತ್ಯಂತ ಸಹಜ ಭಾವದಿಂದ ಸುರೇಶನನ್ನು ನೋಡಿ ಸಹಾಸ್ಯ ಮುಖದಿಂದ, ‘ ಅದರ ಅರ್ಥದಷ್ಟಾದರೂ ಮುಗಿಸಿದರೆ ಆ ಮಾತು ಮನ್ನಿಸುವೆ ’-– ಎಂದಳು.

‘ ಒಳ್ಳೇದು ’ ಎಂದು ಸುರೇಶನು ಹಾಕಿದ್ದೆಲ್ಲ ಉಂಡು ಮುಗಿಸಿದನು. ಬಾಗಿಲ ಬಳಿ ಪರಿಚಾರಿಕೆ ನಿಂತಿದ್ದಳು. ಬಂದು ಎಂಜಲ ಗೋಮಯ ಮಾಡಿ ಹೋದಳು. ಸುರೇಶನು ತೊಂಬಲ ಅಗಿಯುತ್ತ ಒಂದು ಖುರ್ಚಿಯ ಮೇಲೆ ಕುಳಿತುಕೊಂಡನು. ಸ್ನೇಹಳು ಟೇಬಲ್ಲಿನ ಮೇಲಿನ ಸಾಮಾನುಗಳನ್ನು ಸರಿಪಡಿಸತೊಡಗಿದಳು. ಈಗ ಸುಧೆಗೆ ಏನು ನೆವ ಹೇಳಿ ಹೊರಬೀಳಬೇಕು ಎಂಬುದೇ ಹೊಳೆಯಲೊಲ್ಲದು. ಅಂತೂ ಒಂದನ್ನು ಹುಡಿಕಿಕೊಂಡು, ‘ ಸ್ನೇಹಾ, ಕೂಸಿಗೆ ಹಾಲು ಹಾಕಿದ್ದೀಯಾ ? ’ ಎಂದು ಕೇಳಿದಳು.

‘ ಇನ್ನೂ ಹಾಕುವ ಹೊತ್ತಾಗಿಲ್ಲ ಅಕ್ಕ. ’

‘ ನಿನಗೆ ಹೊತ್ತಾಗಿತ್ತು ಬಹಳ ಗೊತ್ತು ನೋಡು ! ಕೂಸು ಹಸಿದಂತಿದೆ. ’

ಕೂಸಿನೊಂದಿಗೆ ಸುಧೆಯು ಹೊರಟು ಹೋದಳು. ಸ್ನೇಹಳು ಎಂದು ಬಿಟ್ಟಳು, ‘ಅಕ್ಕನಿಗೆ ನೆವಕ್ಕೇನೂ ಕೊರತೆಯಿಲ್ಲ. ಕೂಸು ಈಗ ಹಾಲು ಕುಡಿ-ಯುವದಿಲ್ಲ. ಆದರೂ ಹೋದಳು. ’

ಸುರೇಶನು ಮೌನವಾಗಿಯೇ ಇರುವದನ್ನು ನೋಡಿ ಸ್ನೇಹಳು, ‘ ಏನು ಆಲೋಚಿಸುವೆ ? ’ ಎಂದಳು.

ಸುರೇಶನು ಜಡಿತಕಂಠದಿಂದ, ‘ ಆಲೋಚನೆಯೇನು ಬಂತು ? ಯಾಕೋ ನಿನ್ನ ಅಕ್ಕ ಒಮ್ಮಿಂದೊಮ್ಮೆ ಹಾಲುಸಕ್ಕರೆಯಾಗಿ ಬಿಟ್ಟಿದ್ದಾರೆ ! ಹೀಗೆ ಎಂದೂ ಕಂಡಿರಲಿಲ್ಲ ! ’

‘ ಅವರು ಹಾಗೆ ಇರಲಿಲ್ಲವೆಂದು ? ಆದರೆ ನಿನ್ನ ಸಂಗಡ ಅಷ್ಟು ಸಲಿಗೆ ಯಿಂದಿರಲಿಲ್ಲ ನಿಜ. ’

‘ ಒಳ್ಳೇದು ಸ್ನೇಹಾ, ನಿನ್ನ ಅಕ್ಕ ಏನೋ ಒಂದು ಹೊಸ ಬಗೆಯ ಮನುಷ್ಯಳು, ಅಲ್ಲವೇ ? ಯಾವಾಗ ಹೇಗೆ ಇರುವಳು ಎಂಬುದೇ ತಿಳಿಯು ವಂತಿಲ್ಲ. ’

‘ ತಿಳಿಯುವಂತಿಲ್ಲವೇಕೆ ? ನಾನಂತೂ ಅವರನ್ನು ಅನುದಿನವೂ ಹೀಗೇ ಕಂಡುಕೊಂಡು ಬಂದಿದ್ದೇನೆ. ಆದರೆ ಮೊದಮೊದಲು ಒಮ್ಮೊಮ್ಮೆ ಒಂದೊಂದು ಬಗೆಯಾಗಿ ಪರಭಾವವನ್ನು ತೋರಿಸುತ್ತಿದ್ದರು ನಿಜ. ಆಗ ನಾನು ಹೊಸಬಳೆಂದಿರಬೇಕು. ಆದರೆ ನೀನಂತೂ ನನಗಿಂತಲೂ ಪರನಂತೆ ಇದ್ದೆ. ’

ಸುರೇಶನು ಅವಳನ್ನು ತಡೆದು, ‘ ನಾನೂ ಹೊಸಬನಲ್ಲವೆಂದು ? ನನ್ನೊಡನೆ ಎಂದಿನ ಯಾವ ಸಂಬಂಧವಿತ್ತು ? ’

ಸ್ನೇಹಳು ಗಂಭೀರಳಾಗಿ ಏನನ್ನೋ ಭಾವಿಸಿಕೊಂಡಳು. ಆ ಮೇಲೆ ಮೆಲುದನಿಯಲ್ಲಿ, ‘ ಅನ್ಯಾಯವೇನು ಅವರದೆ ? ಅವರ ಸಮಾಲೋಚನೆ ಮಾಡುವದಕ್ಕಿಂತ ನಿನ್ನ ಅನ್ಯಾಯವನ್ನೇ ಅಳೆದು— ’ ಎಂದೆನ್ನುತ್ತಲೇ, ಸುರೇಶನು ಒಡನೆಯೇ ಸ್ನೇಹಳನ್ನು ಎದೆಗೆಳೆದುಕೊಂಡು, ‘ ಸಾಕು ಸಾಕು ಗುರುಗಳೇ, ಹೆಚ್ಚಿಗೆ ಹೇಳಬೇಕಾಗಿಲ್ಲ— ಆ ಅನ್ಯಾಯದ ಫಲವು ಇದಾಗಿದ್ದಲ್ಲಿ, ನಾನು ಅದರಿಂದ ಅನುತಪ್ತನಲ್ಲ ’ ಎಂದನು.

ಸ್ನೇಹಳು ಬಿಡಿಸಿಕೊಂಡು ನಕ್ಕು, ‘ ನೀನು ಅತಿ ಕೆಟ್ಟವನು ’ ಎಂದಳು.

ಸುರೇಶನು ಹೊರಗೆ ಒಪ್ಪಿಕೊಳ್ಳದಿದ್ದರೂ, ಆ ಮಾತು ಒಳಗೊಳಗೆ ಎಂದೂ ಕುಟುಕುತ್ತಿಲ್ಲವೇ ? ಸುಧೆಯು, ಎಲ್ಲರೊಡನೆಯೂ ಅಕೃತ್ರಿಮ ಸ್ನೇಹದಿಂದಿರುವದನ್ನು ನೋಡಿ ಅವನಿಗೆ ಒಮ್ಮೆಯೂ ಎನಿಸುತ್ತಿಲ್ಲವೇ ಅವಳ ಬಗ್ಗೆ ತನ್ನ ಅವಿಚಾರವೆಷ್ಟು ಗುರುತರವೆಂದು ? ಅವಳು ಕರ್ತವ್ಯ ಪಾಲನದಲ್ಲಿ ಅತಿ ದೃಢಳಾದರೂ ಸ್ನೇಹಕೋಮಲಳು. ಇಂಥ ಒಂದು ಮಹಾಹೃದಯಕ್ಕೆ

ತಾನು ಮಾಡಿದ ಮಹಾ ಅನ್ಯಾಯದ ವಿಚಾರವು ಅವನ ಎದೆಯಲ್ಲಿ ಸುಳಿ-ದಿರಲಿಕ್ಕಿಲ್ಲವೆ ? ಸ್ನೇಹಳಿಗೆ ಅವಳು ತೋರುವ ಅಸೀಮವಾದ ಅಕಪಟ ಪ್ರೇಮದಿಂದ ಸುರೇಶನು ವಿಸ್ಮಿತನಾಗಿಲ್ಲವೆ ? ಶ್ರದ್ಧಾ, ಭಕ್ತಿ, ವಿಶ್ವಾಸ, ವಿಸ್ಮಯಗಳಿಂದ ಕೂಡಿದ ಒಂದು ಬಗೆಯ ತೀವ್ರ ಅನುತಾಪವ್ಯಥೆಯು ಆಗಾಗ ಅವನನ್ನು ಪೀಡಿಸುತ್ತಿಲ್ಲವೆ ? ಇವೆಲ್ಲ ನಿಜವಿದ್ದರೂ ಈ ಭಾವಗಳಿಗೆ ಸುರೇಶನು ಬಹಳ ಹೊತ್ತು ತನ್ನಲ್ಲಿ ಎಡೆಗೊಡಲು ಸಾಹಸಗೊಳ್ಳುತ್ತಿದ್ದಿಲ್ಲ. ಈ ಭಾವಗಳ ಮಹಾಪೂರದ ಸೆಳವಿಗೆ ಸಿಕ್ಕರೆ ಸುರೇಶನು ಬದುಕುವ ಬಗೆ ಹೇಗೆ ? ಎಂದೇ ಸುರೇಶನು ಅವುಗಳ ಗಾಳಿ ತಾಕಿದರೂ ಗದಗದ ನಡುಗಿ ಹೋಗುತ್ತಿದ್ದನು. ಆದ್ದರಿಂದ ಅವನ್ನು ತನ್ನ ಎಲ್ಲ ಶಕ್ತಿಯಿಂದ ಹತ್ತಿಕ್ಕಿ, ಸ್ನೇಹಾ-ಸ್ನೇಹಾ-ಸ್ನೇಹಳೇ ತನ್ನ ಸತಿ, ಸ್ನೇಹಳೇ ತನ್ನ ಸರ್ವಸ್ವವೆಂದು ಭಾವಿಸಿಕೊಳ್ಳುತ್ತಿದ್ದನು. ಸುಧೆಯೊಡನೆ ಯಾರ ವಿವಾಹವೂ ಆಗಿಲ್ಲ; ಆಗುವದು ಸಾಧ್ಯವೂ ಇಲ್ಲ. ಯಾಕೆಂದರೆ ಅವಳು ಈ ಲೋಕದವಳೆ?--ದೇವಲೋಕದವಳು. ಅವಳು ದೇವಿಯು; ಸ್ನೇಹವಿತರಣೆಗಾಗಿಯೇ ಅವಳು ಈ ಸಂಸಾರದ ಸಂಗಡ ಆಬದ್ಧಳಾಗಿದ್ದಾಳೆ. ಸುರೇಶನೊಡನೆಯೂ ಅವಳದು ಎಳ್ಳಮೊನೆಯಷ್ಟೂ ಮುಳ್ಳಕೊನೆಯಷ್ಟೂ ಸಂಬಂಧವಿಲ್ಲ. ಅವಳ ಬಗ್ಗೆ ಇನ್ನಾವ ಬಗೆಯ ಭಾವವೂ ತನ್ನ ಮನದಲ್ಲಿ ಸುಳಿಯದ ಹಾಗೆ ಸುರೇ-ಶನು ಪ್ರಾಣವನ್ನೇ ಪಣವಿರಿಸಿ ಪ್ರಯತ್ನಿಸುವವನು.

## ೧೪

ಒಂದು ವರ್ಷ ಉರುಳಿ ಹೋಯಿತು. ಸುಧೆಯು ದಿನದಿನವೂ ಸುರೇಶ ಮತ್ತು ಸ್ನೇಹಳ ಸುಖಸ್ರೋತದಲ್ಲಿ ತನ್ನ ಜೀವನವನ್ನು ಒಂದು-ಗೂಡಿಸಲು ಪ್ರಯತ್ನಿಸುತ್ತಿದ್ದಾಳೆ. ಸ್ನೇಹಳ ಮಗು ಪುಟ್ಟ ಪ್ರಭಾತನು ಅವಳ ಹೃದಯದ ಸಂಪತ್ತು; ಸ್ನೇಹಳು ಅವಳ ಆಟದ ಗೊಂಬೆ. ಸುರೇಶನಿಗೂ, ತನ್ನ ಸಂಸಾರದ ಮಂತ್ರಣದಲ್ಲಿ, ಆಮೋದ ಪ್ರಮೋದದಲ್ಲಿ, ನಗುವದು ಕೆಲೆಯುವದರಲ್ಲಿ ಸುಧೆಯು ಓರ್ವ ಪ್ರಧಾನ ಸಂಗಾತಿಯು. ತನ್ನದೆನ್ನುವ ಯಾವ ಬೇಕು ಬೇಡಗಳೂ ಇರುವದಾಗಿ ಒಮ್ಮೆಯಾದರೂ ಯಾರ

ಮನಸ್ಸಿಗೂ ತೋರಬಾರದೆಂದು ಸುಧೆಯು ಸದಾ ನಗೆಯಲ್ಲಿ ನಲಿವಿನಲ್ಲಿ ಇರುತ್ತಿದ್ದಳು. ನೋಡಿದವರು, ವಿಶ್ವತೃಪ್ತಿಯು ಅವಳ ಹೃದಯದಲ್ಲಿಯೇ ಮನೆ ಮಾಡಿದೆ ಎಂದುಕೊಳ್ಳುವ ಹಾಗಿದ್ದಳು.

ಸ್ನೇಹಳಿಗಂತೂ ಅವಳನ್ನು ಕಂಡ ದಿನವೇ ತನ್ನ ಬಿಚ್ಚಿದ ಎದೆಯನ್ನು ಅಚ್ಚಗನ್ನಡಿಯಂತೆ ಅವಳೆದುರಿಗೆ ಹಿಡಿದು ಬಿಟ್ಟಿದ್ದಾಳೆ. ಸುಧೆಯ ಮೊಟ್ಟ ಮೊದಲಿನ ರಹಸ್ಯಮಯ ವ್ಯವಹಾರದಿಂದ ಸುರೇಶನು ಆಗಾಗ, ' ಇವಳ ಮನದಲ್ಲಿ ಏನಿದೆಯೋ ಯಾರಿಗೆ ಗೊತ್ತು ? ' ಎಂದು ಚಕಿತನಾಗಿ ಎಂದುಕೊಳ್ಳುತ್ತಿದ್ದನು. ಆದರೆ ಈಗ ಆ ಮಾತು ನೆನಪಾದರೂ ಸಹ ಸುರೇಶನು ತನ್ನಲ್ಲಿಯೇ ತಾನು ಅತ್ಯಂತ ಲಜ್ಜಿತನಾಗುವನು. ಈಗ ಸುಧೆ ಎಂದೊಡನೆ ಅವನ ಹೃದಯವು ಹಿಗ್ಗಿ ಹತ್ತಾಗುವದು. ಹೆಮ್ಮೆಯಿಂದ ಉಬ್ಬುವದು. ಹೀಗೆ ಈ ಮೂವರ ಜೀವನದ ತ್ರಿವೇಣಿ ಸಂಗಮವಾಗಿ ಹರಿದು ಹೊರಟಿದೆ.

ಅಂದು ಸಂಜೆಯಲ್ಲಿ ಸುಧೆಯು ತನ್ನ ಕೋಣೆಯಲ್ಲಿ ಕುಳಿತಿದ್ದಳು. ಕೆಲ ದಿನದಿಂದ ಅವಳು ಅತ್ಯಂತ ಶೋಕಾಕುಲಳಾಗಿದ್ದಾಳೆ. ತನ್ನ ತಂದೆಯ ಏಕಮಾತ್ರ ವಂಶಧರನಾದ ಮಲತಮ್ಮನ ಮೃತ್ಯುವಾರ್ತೆಯನ್ನು ಕೇಳಿದ್ದಾಳೆ. ತಂದೆಯ ಸ್ಥಿತಿಯನ್ನು ನೆನೆದು ಅವಳು ಅತ್ಯಂತ ಕಾತರಳಾಗಿದ್ದಾಳೆ. ಸುಧೆಯ ಮಲತಾಯಿಯು ಈ ಮೊದಲೇ ತೀರಿಹೋಗಿದ್ದರು.

ಸ್ನೇಹಳು ಒಳಗೆ ಬಂದು ' ಅಕ್ಕ ! ' ಎಂದು ಕರೆದಳು. ಉತ್ತರ ದೊರೆಯಲಿಲ್ಲವಾಗಿ ಅವಳ ಬಳಿ ಹೋಗಿ ಅವಳ ಹೆಗಲ ಮೇಲೆ ಕೈಯಿಟ್ಟು ನಿಂತುಕೊಂಡಳು.

' ಏನು ? ಒಬ್ಬಳೇ ಇರುವೆಯೇನು ಸ್ನೇಹಾ ? ಮಗುವೆಲ್ಲಿ ? '

' ಮಗು ಮಲಗಿದೆ. ಬರಬಾರದೆ ಅಕ್ಕ, ಮಾಳಿಗೆಯ ಅಂಗಳದಲ್ಲಿ ತುಸು ಕೂಡೋಣ. '

' ಮತ್ತೊಬ್ಬರನ್ನೂ ಕರೆಕಳುಹಿಸು. ಅವರು ಹೊರಗೆ ಹೋಗಿಲ್ಲವಷ್ಟೆ? '

' ಒಬ್ಬಳೇ ಇರಬೇಡ ಅಕ್ಕ—ಅದರಿಂದ ಇನ್ನೂ ದುಃಖವೆನಿಸುವದು; ನಡೆ ಕರೆಸೋಣ. '

' ನೀನು ಹೋಗು, ಕರೆಕಳುಹಿಸು. ನಾನು ತುಸು ಬಿಟ್ಟುಕೊಂಡು ಬರುತ್ತೇನೆ ಸ್ನೇಹಾ. '

' ಹಾಗಾದರೆ ನಾನೂ ಕೂಡುತ್ತೇನೆ. ಇಲ್ಲಿಯೇ ಮಾತಾಡೋಣ. '

ಸುರೇಶನು ಬಂದು ಬಾಗಿಲ ಬಳಿ ನಿಂತನು. ಸುಧೆಯು ಆಗ ನಕ್ಕು, 'ಡಬಲ್ ಫ್ಯಾದೆ ?' ಎಂದೆನ್ನುತ್ತಲೇ ಏಳುವದನ್ನು ನೋಡಿ ಸ್ನೇಹಳು ಆವಳ ಹಿಂದೆ ಹಿಂದೆ ನಡೆದಳು. ಮೂವರೂ ಮಾಳಿಗೆಯ ಮೇಲೆ ಹೋಗಿ ಕುಳಿತರು. ಬೆಳದಿಂಗಳಲ್ಲಿ ಕೆಳಗೆ ಹೂದೋಟವು ನಗುವಂತಿದೆ. ಗಾಳಿ ನಾಲ್ಕೂ ಬಟ್ಟೆಗೆ ನರುಗಂಪನ್ನು ಮುಟ್ಟಿಸಿ ಸುಳಿಯುತ್ತಿದೆ. ಸುಧೆಯು ನೋಡಿ ನೋಡಿ, 'ಇಷ್ಟರಲ್ಲಿ ಇಷ್ಟೊಂದು ಬೆಳದಿಂಗಳು ಬಂದುಬಿಟ್ಟಿದೆಯೆ ? ಇಂದು ಯಾವ ತಿಥಿ ?' ಎಂದಳು. ಆವಳ ಕ್ಲಿಷ್ಟಸ್ವರದಿಂದ ಸ್ನೇಹಳು ಸುರೇಶನು ವ್ಯಥಿತರಾದರು.

ಸುರೇಶನು, 'ತ್ರಯೋದಶಿ' ಎಂದು ಮೃದುವಾಗಿ ಹೇಳಿದನು.

'ನೀನು ಈ ಕೆಲ ದಿನ ಮಾಳಿಗೆಯ ಮೇಲೆ ಬಂದಿಲ್ಲ ಅಕ್ಕ. ಅದಕ್ಕಾಗಿ ನಿನಗೆ ಹಾಗೆ ಎನಿಸುವದು.'

ಸುಧೆಯು, 'ಅದೇ ಇರಬೇಕು' ಎಂದಳು. ಆ ಮೇಲೆ ಸುರೇಶ-ನನ್ನುದ್ದೇಶಿಸಿ ಕೇಳಿದಳು, 'ಈ ವರೆಗೆ ಎಲ್ಲಿದ್ದೆ ? ಸ್ನೇಹಾ ದೆವ್ವಕ್ಕೆ ಹೆದರಿ ಇಲ್ಲಿಗೆ ಓಡಿ ಬಂದಿದ್ದಳು---'

ಸ್ನೇಹಳು ಆವಳನ್ನು ನಡುವೇ ನಿಲ್ಲಿಸಿ, 'ವಾಃ, ಅಕ್ಕ ! ನೀನಂತೂ ಇಲ್ಲದ್ದು ಕಲ್ಪಿಸಿ ಹೇಳುವೆ ನೋಡು ! ದೆವ್ವಕ್ಕೆ ನಾನೆಂದು ಹೆದರಿದೆ ?' ಎಂದಳು.

ಸುರೇಶನು ನಗುತ್ತ, 'ನೀನೆಂದಿಗಾದರೂ ಹೆದರುವೆಯಾ ? ಅವು ನಿನ್ನ ಇಷ್ಟಮಿತ್ರರಲ್ಲವೆ ? ಆ ಮಾತಿರಲಿ. ಇಂದು ನಾನು ಕಾಲೇಜದನೊಡನೆ ತಲೆಯೊಡೆದುಕೊಳ್ಳುತ್ತಿದ್ದೆ---' ಎಂದನು.

'ಕಾಲೇಜದನೊಡನೆ ? ಯಾಕೆ ? ಏನಾದರೂ ಹೊಸ ತೊಂದರೆಯೆ ?'

'ಹೊಸದಿನ್ನೇನು? ಈ ಮೊದಲು, ದಕ್ಷಿಣದ ನಮ್ಮ ಭೂಸಂಪತ್ತಿಯನ್ನು ಇನ್ನೊಬ್ಬನ ಆಡಳಿತಕ್ಕೆ ಕೊಡುವದಾಗಿ ಗೊತ್ತುಮಾಡಿಕೊಂಡಿದ್ದನಂತೆ: ಅದಕ್ಕೆ ನೀನು ಹಾಗೆ ಬೇಡವೆಂದು ಹೇಳಿದ್ದೆಯಂತೆ--- ಅಲ್ಲಿ ಈಗ ಪ್ರಜರೆಲ್ಲ ಕೂಡಿ ಮುಟ್ಟುಗೋಲು ಹಾಕಿದ್ದಾರೆ.'

'ಹೀಗೇನು ?' ಆ ಮೇಲೆ ಸುಧೆಯು ಮುಗುಳುನಗೆ ನಕ್ಕು, 'ಈ ಬಗೆಯಾಗಿ ಬಹು ದಿನ ನಡೆಯಲಾರದು' ಎಂದಳು.

'ಯಾವ ಬಗೆಯಾಗಿ ?'

' ಇದೇ ? ಹೆಂಣುಮಗಳ ಹುಕುಮಿನಂತೆ ಕೆಲಸ ಮಾಡುವದು. ನೀನು ಹಾಗೆ ಹೇಳಿದೆಯಾದರೆ ಅವನಿಗೆ ನಾನಿನ್ನು ಯಾವ ಪರಾಮರ್ಶವನ್ನೂ ಕೊಡುವದಿಲ್ಲ. ಅಂದರೆ ಕೆಲಸ ಸುಸೂತ್ರವಾಗಿ ಸಾಗುವದು. ನನ್ನ ಸಲಹೆಯಿಂದ ಅವನಿಗೆ ಅಪಮಾನವೆನಿಸುತ್ತದೆ. '

ಸುರೇಶನು ಹೇಳಿದನು, ' ಹಾಗಾದರೆ ಅವನ ಮನಸ್ಸಿಗೆ ಬಂದಂತೆ ಅವನು ಮಾಡಿಕೊಳ್ಳಲಿ. '

' ಆದರೆ ನೀನು ಈಗ ನಿನ್ನ ಬೇಟೆಯನ್ನೂ ಆಟವನ್ನೂ ತುಸು ಕಡಿಮೆ ಮಾಡಿ ಈ ಎಲ್ಲದರ ಕಡೆಗೆ ತುಸು ಮನಸ್ಸುಗೊಟ್ಟೆಯಾದರೆ ನಾನು ಸರಿದು ಕೊಳ್ಳಬಲ್ಲೆ. '

ಸುರೇಶನು ಎಳ್ಳಷ್ಟೂ ಉದ್ವಿಗ್ನನಾಗದೆ ಹೇಳಿದನು, ' ತಾನು ತೊಂದರೆಗೀಡಾಗಿ ಪರರಿಗೆ ಸರಿದುಕೊಳ್ಳಲು ಯಾರು ಅನುವು ಮಾಡಿಕೊಡುವರು ? '

ಸ್ನೇಹಳು, ' ಅಕ್ಕ ಪರಳೆ ? ' ಎಂದಳು.

' ತನ್ನನ್ನುಳಿದು ಇನ್ನೆಲ್ಲರೂ ಪರರೇ ಸರಿ. '

ಸುಧೆಯು ನಕ್ಕು ಹೇಳಿದಳು, ' ಅತ್ಯಂತ ಸ್ವಾರ್ಥಪರವಾದ ಮಾತು. '

' ಎಲ್ಲರೂ ಸಾರ್ಥಪರರೇ. ಸ್ವಾರ್ಥವಲ್ಲದೇ ಇನ್ನೇನಿದೆ ಈ ಜಗದಲ್ಲಿ ?'

ಸುಧೆಯು, ' ಎಲ್ಲರೂ ಸ್ವಾರ್ಥಪರರೆ ? ' ಎಂದು ಕೇಳಿದಳು.

' ಹೌದು, ಒಂದಿಲ್ಲ ಒಂದು ಬಗೆಯಲ್ಲಿ. ಅಲ್ಲವೇ ಸ್ನೇಹಾ ? '

ಸ್ನೇಹಳು ಹೇಳಿದಳು, ' ಎಲ್ಲರೂ ಸ್ವಾರ್ಥಪರರೆ ? ಎಂದಿಗೂ ಇಲ್ಲ. ತಿಳಿಗೆಟ್ಟ ಮಾತು. '

' ತಿಳಿಯದೇ ಸ್ನೇಹಾ, ಆತ್ಮವತ್ ಮನ್ಯತೇ ಜಗತ್. ಸ್ವತಃ ನಾನು ಸ್ವಾರ್ಥಪರನು. ಎಂದೇ ನನಗೆ ಜಗವೆಲ್ಲ ಸ್ವಾರ್ಥಪರವಾಗಿ ಕಾಣುವದು. '

ಸ್ನೇಹಳು ನಕ್ಕು, ' ಹಾಗಾದರೆ ನೀನು ಸ್ವಾರ್ಥಪರನೇ ? ಒಪ್ಪಿದೆಯಷ್ಟೆ ? ಆದರೆ ನಾವು ಹಾಗಲ್ಲ, ನಮ್ಮದು ಪರಾರ್ಥಪರರ ಜಾತಿ. '

' ಆಃ ! ನಿಮ್ಮದು ? ನಿನ್ನನ್ನು ಬಿಟ್ಟು. ನೀನಂತೂ ಅಲ್ಲವೇ ಅಲ್ಲ. '

' ಒಳ್ಳೇದು ಹಾಗೇ ಆಗಲಿ. ನನ್ನನ್ನು ಬಿಟ್ಟರೆ ಇನ್ನೊಬ್ಬಳನ್ನಾದರೂ ಮನ್ನಿಸಿದಂತಾಯಿತಲ್ಲ ? '

‘ ಅಗತ್ಯವಾಗಿ. ಮನ್ನಿಸದೆ ಇನ್ನು ಉಪಾಯವುಂಟೆ ? ಭಕ್ತಿಯಿಂದಲ್ಲ-ದಿದ್ದರೆ, ಭಯದಿಂದಾದರೂ ಮನ್ನಿಸಬೇಕು. ’

‘ ನೀನು ಸ್ವಾರ್ಥಪರನಷ್ಟೇ ಅಲ್ಲ— ಭೀರು. ಒಂದು ನಿಜವನ್ನು ಆಡುವ ಸಾಹಸ ಸಹ ನಿನ್ನದಲ್ಲ. ಭಯಭಕ್ತಿಗಳೆರಡನ್ನೂ ಒಪ್ಪಿದ್ದರೆ ಹೌದೆನ್ನುತ್ತಿದ್ದೆ. ’

ಸುಧೆಯು ಗಂಭೀರಳಾದಳು. ರಹಸ್ಯವ್ಯಂಜಕವಾಗಿಯೇ ಮಾತನಾಡಿ ಸುರೇಶನು ಮತ್ತು ಸ್ನೇಹಳು ನಗುತ್ತಿದ್ದರು. ಇದು ಅವಳಿಗೆ ಸರಿಬರಲಿಲ್ಲ. ತಲೆತಗ್ಗಿಸಿಕೊಂಡು ಅವಳು ಹೂದೋಟವನ್ನು ನೋಡುತ್ತ ಕುಳಿತಳು. ಸುಧೆಯು ಯಾಕೆ ಅಸಂತುಷ್ಟಳಾದಳೆಂದು ಸ್ನೇಹಾ ಸುರೇಶರು ಬೆರಗಾದರು.

ಸ್ನೇಹಳು ಸುಮ್ಮನಿರಲಾರದೆ ಕಡೆಗೆ ಕೇಳಿಯೇ ಬಿಟ್ಟಳು, ‘ ಯಾಕೆ ಅಕ್ಕಾ, ನೀನು ಸ್ವಾರ್ಥಪರಳಲ್ಲವೆಂದವಾಗಿ ಸಿಟ್ಟಾದೆಯೇನು ? ’

ಸುಧೆಯು ಮುಖ ತಿರುಗಿಸಿ ತುಸು ನಕ್ಕಳು. ಆ ಮೇಲೆ ‘ ಹುಂ ’ ಎಂದಳು.

‘ ನೀನಂತೂ ರಾಜ್ಯಕ್ಕೆ ಹೊರತು ನೋಡು. ನಾವು ತೆಗಳಿದರೆ ಸಿಟ್ಟಾಗುವೆವು. ನೀನು ಹೊಗಳಿದರೇ ಸಿಟ್ಟಾಗುವೆ. ’

‘ ಅದು ಭಗವಂತನ ನಿರ್ಮಾಣದಲ್ಲಿನ ದೋಷ; ನನ್ನದಲ್ಲ. ’

ಸುರೇಶನು ಹೇಳಿದನು, ‘ ಹೌದು, ಅದೇ ಎಲ್ಲಕ್ಕಿಂತ ಅನುಕೂಲ ಮಾತು. ನಿರುಪದ್ರವಿಯಾದ ನನ್ನನ್ನು ಬಿಟ್ಟು ದೋಷವು ಇನ್ನಾರ ಮೇಲೆ ಬಿದ್ದರೂ ಸರಿ. ’ ಸುಧೆಯು ವಿಸ್ಮಿತಳಾಗಿ ಕೇಳಿದಳು, ‘ ದೋಷವು ನಿನ್ನ ಮೇಲೇಕೆ ಬೀಳುವದು ? ’

‘ ಅಪರಾಧವಾಗಿದೆಯೆಂದು. ’

ಸುಧೆಯು ನಕ್ಕು ಹೇಳಿದಳು, ‘ ಹಾಗಾದರೆ ಸ್ನೇಹಳ ಬಳಿ ಕ್ಷಮೆ ಬೇಡು. ನನಗಂತೂ ಪ್ರಶಂಸೆ ಸಿಕ್ಕುಹೋಗಿದೆ. ’

ಸುರೇಶನು ಒಂದು ಕ್ಷಣ ನೀರವನಾಗಿ ಆ ಮೇಲೆ ಮೆಲುದನಿಯಲ್ಲಿ ಹೇಳಿದನು, ‘ ಅಪರಾಧವು ಜ್ಞಾತಕೃತವಲ್ಲ—ಅಸಾವಧಾನನಾಗಿ—ಅದೂ ಮಾತಿನಲ್ಲಿ ಮಾತ್ರ. ’

ಸುಧೆಯು ಕಿವಿವರೆಗೆ ಕೆಂಪೇರಿದಳು. ಅತಿ ಕಷ್ಟದಿಂದ ಆತ್ಮಸಂವರಣ

ಮಾಡಿಕೊಳ್ಳಲು ಹೋಗಿ ತನ್ನ ಸ್ವಭಾವಕ್ಕೆ ಸಲ್ಲದ ರೀತಿಯಲ್ಲಿ ತುಸು ಹೆಚ್ಚಾ-ಗಿಯೇ ನಕ್ಕು ಹೇಳಿದಳು, ' ಇದೂ ಒಳ್ಳೇದೇ, ಯಾರನ್ನಾದರೂ ಹೊಗ-ಳಿಯೂ ಅನ್ಯಾಯ ಮಾಡುವದುಂಟೇನು ? ' ಸುಧೆಯು ನೋಡಿದಳು-ಸುರೇಶನು ತುಸು ಅನ್ಯಮನಸ್ಕನಾಗಿದ್ದಾನೆ. ತನ್ನ ಸ್ತೋಕವಾಕ್ಯವು ಸುರೇಶನ ಮೇಲೆ ನಾಟಿಲ್ಲವೆಂದು ಅವಳಿಗೆ ಗೊತ್ತಾಯಿತು. ಜೀವನದಲ್ಲಿ ಇದೇ ಮೊದಲ ಸಲ ಸೋಲೊಪ್ಪಿಕೊಂಡು ನಾಚಿಕೆಯಿಂದ ಕಳವಳಗೊಂಡು ತಲೆ ಕೆಳಗೆ ಹಾಕಿದಳು.

ಮರುದಿನ ಸಂಜೆಗೆ ಸುಧೆಯ ತಂದೆಯು ಅವಳನ್ನು ಕರೆದೊಯ್ಯಲು ಬಂದಿರುವದಾಗಿ ಎಲ್ಲರೂ ಕೇಳಿದರು. ಸುಧೆಯೊಡನೆ ಬಹಳ ಹೊತ್ತು ಮಾತುಕಥೆಯಾಡಿ ಅವಳ ತಂದೆಯು ಹೊರಗೆ ಹೋಗಲು, ಸ್ನೇಹಳು ಉದ್ವಿಗ್ನಳಾಗಿ ಸುಧೆಯ ಬಳಿಗೆ ಬಂದು ನೋಡುತ್ತಾಳೆ-ಸುಧೆಯು, ತಲೆ ತಗ್ಗಿಸಿಕೊಂಡು ಏನನ್ನೋ ಭಾವಿಸುತ್ತಿದ್ದಾಳೆ. ' ಅಕ್ಕ ! ' ಸ್ನೇಹಳ ದನಿ-ಯಲ್ಲಿ ಉದ್ವೇಗವಿದ್ದದ್ದರಿತು ಸುಧೆಯು ಸ್ನೇಹವಾಗಿ ನಕ್ಕು, ' ಯಾಕೆ ಸ್ನೇಹಾ ? ' ಎಂದಳು.

' ಏನು ಗೊತ್ತು ಮಾಡಿದೆ ? ತಂದೆಯವರಿಗೆ ಏನು ಹೇಳಿದೆ ? '

' ಈ ಸಮಯದಲ್ಲಿ ಬರುವದಿಲ್ಲವೆಂದು ಹೇಳುವದುಚಿತವೇ ಸ್ನೇಹಾ ? '

ಸ್ನೇಹಳು ಮ್ಲಾನಮುಖದಿಂದ ಹೇಳಿದಳು, ' ಉಚಿತವಲ್ಲ ನನಗೆ ಗೊತ್ತು. ಆದರೆ ನೀನು ಮಗುವನ್ನು ಬಿಟ್ಟು ಹೋಗುವದು ಸಾಧ್ಯವೇ ? '

' ನನಗೆ ಯಾವುದು ಸಾಧ್ಯವಿಲ್ಲ ಸ್ನೇಹಾ ? ನೀನೇ ಅನ್ನುವೆಯಲ್ಲ ನಾನು ರಾಜ್ಯಕ್ಕೆ ಹೊರತೆಂದು ? '

ಕಾತರ ಕಂಠದಿಂದ ಸ್ನೇಹಳು ಅವಳನ್ನು ತಡೆದು, ' ಈ ಸಮಯದಲ್ಲಿ ಈ ಬಗೆಯ ಚೇಷ್ಟೆಯ ಮಾತನ್ನು ಯಾವ ಜೀವದಿಂದ ಆಡುವೆ ಅಕ್ಕ ? ನಾನೇನು ನಿಜವಾಗಿಯೂ ನಿನಗೆ ಹಾಗೆ ಹೇಳುವೆನೆ ? '

ಸುಧೆಯ ಬಹುಪ್ರಯತ್ನದ ಪ್ರತಿರೋಧವನ್ನು ಮನ್ನಿಸದೆ ಅವಳ ಕಣ್ಣಿಗೆ ನೀರು ಕಡಿದಿತು. ಸ್ನೇಹಳ ಹೆಗಲ ಮೇಲೆ ಕೈಯಿಟ್ಟು, ' ಮತ್ತೆ ಬರುವೆ ನಲ್ಲ ' ಎಂದು ಮೆತ್ತಗೆ ಉಸುರಿದಳು.

ಸುರೇಶನು ಒಳಗೆ ಬಂದು ಕಿಡಿಕಿಯ ಹತ್ತಿರ ಅವರಿಬ್ಬರು ಹಾಗಿರುವ ದನ್ನು ಕಂಡು ಮಾತಿಲ್ಲದೆ ನಿಂತುಕೊಂಡನು. ಸುಧೆಯು ಅವಸರದಿಂದ

ತಿರುಗಿ ' ಇದೇನು ? ಗುಪ್ತಚರನೇನು ? ' ಎಂದಳು. ಸ್ನೇಹಳೂ ಕಣ್ಣೊರಸಿ ಕೊಂಡಳು.

' ಗುಪ್ತಚರನೇನೋ ಅಹುದು. ಆದರೆ ಸುದ್ದಿಯೇ ಗೊತ್ತಿಲ್ಲ—'

' ಅದೇನು ? ಹಾಗಾದರೆ ಚರ ಹೇಗೆ ? '

' ಹೀಗೇ. ಹೋಗಲಿ ಆ ಮಾತು–ಏನು ಗೊತ್ತಾದ ಹಾಗಾಯಿತು ? '

' ಹೋಗುವದು. '

ಸುರೇಶನು ಸುಮ್ಮನಾದನು. ಕ್ಷಣ ಬಿಟ್ಟುಕೊಂಡು, ' ಅವರು ಇಂದೇ ಹೋಗುವರೆ ? ' ಎಂದನು.

' ಇಂದೆ ? ಹಾಗಾದರೆ ಇಂದೇ ಹೊರಡಬೇಕು. '

ಸುರೇಶನು ತುಸು ಅನುಮಾನಿಸಿ, ' ಎಷ್ಟು ದಿನಕ್ಕಾಗಿ ? ' ಎಂದನು.

ಸುಧೆಯು ಸಹಸಾ ಉಜ್ವಲ ಚಕ್ಷುಗಳಿಂದ ಸುರೇಶನನ್ನು ನಿರುಕಿಸಿದಳು. ಮೃದುವಾದರೂ ಗಂಭೀರ ಸ್ವರದಲ್ಲಿ ಹೇಳಿದಳು, ' ಅದನ್ನು ಮೊದಲೇ ಹೇಗೆ ಹೇಳುವದು ? ಚಿರದಿನವಾದರೂ ಹಾಸಿಯೇನು ? '

ಸ್ನೇಹಳು ಎರಡೂ ಕೈಗಳಿಂದ ಅವಳ ಕೊರಳು ಸುತ್ತಿಕೊಂಡು, ' ನಿನ್ನ ಬಾಯಲ್ಲಿ ಇಂಥ ಮಾತೇ ಅಕ್ಕ ? ' ಎಂದಳು.

ಸುಧೆಯು ಆಗಿನ್ನೂ ಆತ್ಮಸ್ಥಳಾಗಿಲ್ಲ. ಪಿತನ ಸ್ನೇಹಮಯ ಆದರೂ ತನ್ನ ಆತ್ಮಗೌರವಕ್ಕೆ ಭಂಗ ತರುವ ಮರ್ಮಭೇದಕ ಮಾತುಗಳು ಇನ್ನೂ ಅವಳ ಮನದಲ್ಲಿ ಧಗಧಗಿಸುತ್ತಿದ್ದವು. ನಿಜವಾಗಿಯೂ ಇಲ್ಲಿ ಅವಳಾರು ? ಏನೆಂದು ಅವಳಿಲ್ಲಿ ಬಿದ್ದುಕೊಂಡಿರಬಯಸುವದು ? ಸವತಿಯ ಪ್ರಣಯದಲ್ಲಿ ಮುಳುಗಿ ಮರುಳಾದ ಅವಿಚಾರಕ ಪತಿಯ ಸಂಸಾರ ಸುಖವನ್ನು ಸುಗಮ ವಾಗಿ ಸಾಗಿಸಿಕೊಂಡು ಹೋಗುವದಕ್ಕಾಗಿಯೆ ? ಛಿ, ಛಿ! ಜನರು ಉಪಹಾಸ ದಿಂದ ನಗುತ್ತಿರಬಹುದಲ್ಲ ! ತನ್ನ ಅಶ್ರಾಂತ ಆತ್ಮಯುದ್ಧಕ್ಕೆ, ಈ ಆತ್ಮವಿಸ್ಮ ರಣಕ್ಕೆ ಈ ಉಪಹಾಸವೇ ಪುರಸ್ಕಾರವೆ ?

ಸ್ನೇಹಳು ನೀರವಳಾಗಿ ಸುಧೆಯ ವಕ್ಷದ ಮೇಲೆ ಅಶ್ರುವರ್ಷಣ ಮಾಡುತ್ತಿದ್ದಾಳೆ. ಸುರೇಶನೂ ಮೌನವಾಗಿ ನತಮುಖನಾಗಿ ನಿಂತುಕೊಂಡಿ ದ್ದಾನೆ. ಅವನ ಮನದಲ್ಲಿ ಯಾವ ವಿಚಾರದ ತೆರೆಗಳು ಅಲೆಯುತ್ತಿವೆಯೋ ! ಪರಿಚಾರಿಕೆಯು ಹಾಲಕೆನೆಯಂದದ ಸ್ನೇಹಪುತ್ತಳಿ ಪ್ರಭಾತನನ್ನು ಸುಧೆಗೆ ಕೊಡಲು ಬಂದಿದ್ದಾಳೆ. ಸ್ನೇಹವ್ಯಗ್ರಬಾಹುಗಳನ್ನು ವಿಸ್ತಾರಗೊಳಿಸಿ

ಬಾಲಕನು ಅವಳ ಮಡಲಿಗೆ ಹೋಗಲು ಉತ್ಸುಕನಾಗಿದ್ದಾನೆ. ಇದೇನು ಕಡಿಮೆ ಪುರಸ್ಕಾರವೇ ?

ಸುಧೆಯು ಕೈಚಾಚಿ ಮಗುವನ್ನೆತ್ತಿಕೊಂಡು ಎದೆಗವಚಿ, ಸ್ನೇಹಳ ಮೃದಡವಿ ತಲೆಯಲುಗಿಸಿ ಆವೇಗದಿಂದ ಮುದ್ದಿಟ್ಟಳು. ಸುರೇಶನು ಇದ್ದುದರ ಪರಿವೆಯೇ ಇಲ್ಲ ಅವಳಿಗೆ. ಆವನ ಕಡೆಗೆ ನೋಟ ಹೊರಳುತ್ತಲೇ ತನ್ನ ಉತ್ತೇಜನಕ್ಕಾಗಿ ಅತ್ಯಂತ ಲಜ್ಜಿತಳಾದಳು. ಸುರೇಶನೂ ಸುಮ್ಮನೇ ಇದ್ದನು.

ಸುಧೆಯು ಮೃದುಕಂಠದಲ್ಲಿ ಹೇಳಿದಳು, ' ಅಳುವಿಯೇಕೆ ಸ್ನೇಹಾ, ನಾನು ಹೇಳಿದೆನಲ್ಲ – ಮತ್ತೆ ಬರುವೆನೆಂದು ? ಬೇಗ ಬರಲು ಯತ್ನಿಸುತ್ತೇನೆ. ನಾನು ಪ್ರಭಾತನನ್ನು ಬಿಟ್ಟು ಇರಬಲ್ಲೆನೆಂದು ನಿನ್ನ ವಿಶ್ವಾಸವೆ ? '

ಕಂಣೊರೆಸಿಕೊಳ್ಳುತ್ತ ಸ್ನೇಹಳು ಭಗ್ನಕಂಠದಲ್ಲಿ ಹೀಗೆಂದಳು, ' ಹಾಗಾದರೆ ಚಿರದಿನವೆಂದೇಕೆ ಹೇಳಿದೆ ? '

' ನಿನಗೆಲ್ಲಿ ಹಾಗೆ ಹೇಳಿದೆ ? '

' ನನಗೆ ಹೇಳಲಿಲ್ಲ–– ಆವರಿಗೆ ಹೇಳಿದೆಯಲ್ಲ ? ಹಾಗೇಕೆ ಹೇಳಿದೆ ಅಕ್ಕಾ ? '

' ಚೇಷ್ಟೆಗೆ ಹೇಳಿದೆ, ಸ್ನೇಹಾ. '

' ಇಂಥ ಅವಲಕ್ಷಣ ಮಾತಾಡಿ ಚೇಷ್ಟೆಯೆ ? '

' ನನ್ನ ಸ್ವಭಾವವು ನಿನಗೆ ಗೊತ್ತು, ಸ್ನೇಹಾ. ' ಆ ಮೇಲೆ ಸುರೇಶನ ಕಡೆಗೆ ನೋಡಿ ಕುಂಠಿತ ಮುಖದಿಂದ ಹೇಳಿದಳು, ' ಹೋಗುವ ದಿನ ಅನ್ಯಾಯದ ಮಾತು ಆಡಿಬಿಟ್ಟೆ, ಕ್ಷಮಿಸು. '

ಸುರೇಶನು ನೀರವನಾಗಿಯೇ ಇದ್ದು ಬಿಟ್ಟನು. ಸ್ನೇಹಳು ಮಧ್ಯಸ್ಥಳಾಗಿ ಹೇಳಿದಳು, ' ಕ್ಷಮೆ ಯಾತರದು ? ಬೇಗ ಬಂದುಬಿಡು ಅಂದರೆ ಕ್ಷಮೆ ಸಿಕ್ಕುಹೋಯಿತು. • ಇಲ್ಲದಿದ್ದರೆ ಕ್ಷಮೆಯಿಲ್ಲ, ತಿಳಿದಿರು. '

ಸುಧೆಯು ನಕ್ಕಳು. ಆ ಮೇಲೆ, ' ನಿನಗೆ ಯಾರು ಮಧ್ಯಸ್ಥಿಕೆ ಮಾಡ ಹೇಳಿದರು ? ' ಎಂದಳು.

' ಹೇಳದೇ ಏನು ? ನೀನು ಕ್ಷಮೆ ಕೇಳಿದವರವಳಾಗಿಯೇ ಹೇಳಿದೆ ! ' ಸುಧೆಯು ಸ್ಮಿತಮುಖಿಳಾಗಿ ಸುರೇಶನ ಕಡೆಗೆ ನೋಡಿ, ' ನನ್ನ ಮಾತಿಗೆ ಮಾರ್ಜನೆಯು ಹೀಗೆ ಸುತ್ತಿಕೊಂಡು ಬಂದಿತೇನು ? ' ಎಂದಳು.

ಸುರೇಶನನ್ನು ವಿಚಲಿತಗೊಳಿಸಿ ಲಜ್ಜಿತಳಾಗಿ ಸುಧೆಯು, ತನ್ನ ಈ ತ್ರುಟಿಯನ್ನು ಹೇಗೆ ಸುಧಾರಿಸುವದೆಂದು ಹಾದಿಯನ್ನು ಹುಡುಕತೊಡಗಿ-ದಳು. ಸುಲಭವಾಗಿ ಮಾತು ಮರೆಹಾಕಲು ಸುರೇಶನೇನು ಸ್ನೇಹಳಲ್ಲ. ಆದರೂ ಸುಧೆಯು ಅವನ ಮನವನ್ನು ಮೊದಲಿನಂತೆ ಅರಳಿಸಲು ಹವಣಿಸ ತೊಡಗಿದಳು.

ಸುರೇಶನಿನ್ನೂ ಅಗ ಅರಳಿಕೊಂಡಿಲ್ಲ. ಆದರೂ ಒಂದು ಉತ್ತರ ಉಸುರದಿದ್ದರೆ ಚೆನ್ನಾಗಿರುವದಿಲ್ಲ; ಎಂದೇ, ‘ ನಾನು ಮಾತನಾಡಿದರೆ ಹೀಗೆ ಅನರ್ಥ ಉಂಟಾಗುತ್ತಿದ್ದರೆ ನಾನು ಮಾತನಾಡದಿರುವದೇ ಲೇಸು ’ ಎಂದನು. ಸುಧೆಯು ಮತ್ತೆ ಅಪ್ರತಿಭಳಾಗಿ ಸುಮ್ಮನೆ ಇದ್ದುಬಿಟ್ಟಳು.

ಸ್ನೇಹಳು, ‘ ನಿನ್ನದು ಬಹಳ ಅನ್ಯಾಯ; ಹೋಗುವ ದಿನವೆಂದು ಕ್ಷಮೆ ಬೇಡಿದರೆ ಯಾರು ಕ್ಷಮೆ ಮಾಡದಿರುವರು ? ’ ಎಂದಳು.

‘ ಹೋಗುವ ದಿನವೇ ಆಗಿದ್ದರೆ ಕ್ಷಮೆಯ ಪ್ರಯೋಜನ ? ’

‘ ಹಾಗೆ ಹೋಗುವ ದಿನವೇನು ? ನೀವೆಲ್ಲರೂ ಒಂದೇ. ಇದು ಒಂದೆರಡು ದಿನಗಳಿಗಾಗಿ ಮಾತ್ರ ಹೋಗುವದು. ’

ಸುರೇಶನು ಮತ್ತೆ ಸುಧೆಯ ಕಡೆಗೆ ನೋಡಿದನು. ಇಂಗಿತವರಿತು ಸುಧೆಯು ಸ್ನೇಹಳ ಕಡೆ ನೋಡಿ ನಕ್ಕು ಹೇಳಿದಳು, ‘ ಎರಡು ದಿನಗಳ ತಲೆಯ ಮೇಲೆ ಇನ್ನೆರಡು ದಿನಗಳು ಬಂದು ಕೂಡಲಾರವೆಂದೇನೂ ಹೇಳಲಾರೆ. ’

‘ ಹಾಗೆಂದರೇನು, ಹೀಗೆಂದರೇನು ಮಾತು ಒಂದೇ. ಒಟ್ಟಿನ ಮೇಲೆ ಬೇಗನೇ ಬರುವವಳು ಎಂದಾಯಿತಲ್ಲವೆ ? ’

‘ ಹುಂ. ’

ಸುರೇಶನು ಅರಳಿಕೊಂಡು ಹೇಳಿದನು, ‘ ಹಾಗಾದರೆ ಕ್ಷಮೆ ಕೋರುವ ಕಾರಣಂ ನಾಸ್ತೀತಿ. ’

ಸುಧೆಯು ಸಹ ನಕ್ಕು ಹೇಳಿದಳು, ‘ ನೋಡು, ಆ ಮೇಲೆ ಮತ್ತೆ ತಪ್ಪಿನ ಕುನುಸಿಟ್ಟೆಯಾದರೆ ಕೇಳುವವಳಲ್ಲ. ’

ಮತ್ತೆ ಮೊದಲಿನಂತೆ ನಗುವದು ಕೆಲೆಯುವದು ಸಾಗತೊಡಗಿತು. ಅಪರಾಧಿಯಾದ ಸುಧೆಯು ತನಗೆ ಸಾಧ್ಯವಾದ ಮಟ್ಟಿಗೆ, ಅವರ ಮನಸ್ಸಿನಲ್ಲಿ ಮೂಡಿದ ಮಾಲಿನ್ಯದ ಕೊನೆಯ ರೇಖೆಯನ್ನೂ ಸಹ ಅಳಿಸಲು ಹೆಣಗಿದಳು. ಆದರ ಫಲವಾಗಿ ಎಲ್ಲರೂ ನಕ್ಕರು, ನಲಿದರು, ಆಡಿದರು, ಹಾಡಿದರು.

ಅಂದಿನ ಇರುಳು ಪ್ರಭಾತನಿಗೆ ಮೂರು ನೂರು ಮುತ್ತಿಟ್ಟು, ಸ್ನೇಹಳಿಗೆ ಬಹುವಿಧವಾಗಿ ಸಾಂತ್ವನೆಕೊಟ್ಟು ಸುರೇಶನಿಗೆ ಆಡಳಿತೆಯ ಸೂತ್ರಗಳನ್ನು ತನ್ನ ಕೈಯಲ್ಲಿಯೇ ತೆಗೆದುಕೊಳ್ಳಲು ವಿಜ್ಞಾಪಿಸಿ, ಕಾಲೀಪದನ ಸಂಬಂಧವಾಗಿ ಜಾಗರೂಕವಾಗಿರುವ ಹಾಗೆ ಹೇಳಿ, ಸುಧೆಯು ಪಿತನೊಡನೆ ಹೊರಟು ಹೋದಳು.

ಕೆಲವು ದಿನ ಸ್ನೇಹಳಿಗೆ ಬಹಳ ಕಷ್ಟವಾಯಿತು. ಸುರೇಶನು ಬೇಟಿಗಾಗಲೀ ತನ್ನ ಚಿಕಿತ್ಸಾಸತ್ರಕ್ಕಾಗಲೀ ಹೋಗುವದು ನಿಂತುಹೋಯಿತು. ಪ್ರಭಾತನನ್ನು ಈಗ ಹಿಡಿದವರೇ ಇಲ್ಲ. ಅವನು ಬಹಳ ತುಂಟನಾಗಿದ್ದಾನೆ. ಹಾಲು ಕುಡಿಯಲು ಒಲ್ಲನು. ದಾಸಿಯರಾಗಲಿ ಸ್ನೇಹಳೇ ಆಗಲಿ ಅವನನ್ನು ಅಂಕಿತದಲ್ಲಿ ತರಲಾರದಾಗಿದ್ದಾರೆ. ಸುಧೆಗಲ್ಲದೆ ಅವನಿನ್ನಾರಿಗೂ ಮಣಿಯುತ್ತಿದ್ದಿಲ್ಲ. ಸ್ನೇಹಳ ಸಂಕಟವನ್ನು ನೋಡಲಾರದೇ ಸುರೇಶನು ಅವಳಿಗೆ ಬಹು ವಿಧವಾಗಿ ಸಹಾಯ ಮಾಡುತ್ತಿದ್ದನು. ಆದರೆ ರಾತ್ರಿಯಲ್ಲಿ ಪ್ರಭಾತನು ‘ ಅವ್ವಾ ’ ಎಂದು ಅಳತೊಡಗಿದನೆಂದರೆ ಆ ಹಟವನ್ನು ನಿಲ್ಲಿಸುವದು ಯಾರಿಗೂ ಆಗುತ್ತಿದ್ದಿಲ್ಲ. ಸುರೇಶನು ಬೇಸರಗೊಂಡು ಮಾಳಿಗೆಯ ಮೇಲೆ ಹೋಗಿ ಕುಳಿತುಬಿಡುತ್ತಿದ್ದನು. ಸ್ನೇಹಳು ಹಿಡಿಮಿಡಿಗೊಂಡು, ‘ ಅಕ್ಕ ಬರುವದೇ ಇಲ್ಲವೋ ಏನೊ ? ಈ ದುರಾತ್ಮನು ಪ್ರಾಣ ಹಿಂಡಿ ಕುಡಿಯುತ್ತಿದ್ದಾನೆ ’ ಎಂದೆನ್ನುತ್ತಿದ್ದಳು. ಸುರೇಶನು ನಕ್ಕು, ‘ ಅದು ನಿನಗೆ ಗೊತ್ತು, ನಿನ್ನ ಅಕ್ಕನಿಗೆ ಗೊತ್ತು, ನಾನೇನು ಬಲ್ಲೆ ? ’ ಎನ್ನುತ್ತಿದ್ದನು.

‘ ನನಗಿನ್ನು ಆಗದ ಮಾತು. ನೀನು ಹೋಗಿ ಅಕ್ಕನನ್ನು ಕರೆದುಕೊಂಡು ಬಾ. ’

‘ ಅದಕ್ಕಿಂತ ನೀನು ಹೋಗು. ನಾನು ಪ್ರಭಾತನನ್ನು ನೋಡಿಕೊಂಡಿರುತ್ತೇನೆ. ’

ಸ್ನೇಹಳು ಮುನಿದು, ‘ ಒಳ್ಳೇದು. ಏನೇ ಆಗಲಿ, ಎಲ್ಲದರಲ್ಲಿಯೂ ಚೇಷ್ಟೆಯೇ ನಿನ್ನದು ’ ಎಂದಳು.

ಸುರೇಶನು ನಕ್ಕು, ‘ ಇನ್ನೇನಾದರೂ ಮಾಡಲು ಅಪ್ಪಣೆಯಾಗಲಿ, ಕುಣಿದಾಡುತ್ತಾ ಮಾಡುತ್ತೇನೆ—ಆದರೆ ನೀನು ಹೇಳಿದ್ದೊಂದು ಬಿಟ್ಟು. ಏನು ಮಾಡಲಿ ಹೇಳು ? ’ ಎಂದನು.

‘ ನೀನಿನ್ನೇನು ಮಾಡುವೆ ? ಮಾಡಿದಂತೆಯೇ. ’

‘ ಹೂಂ ಽಽ. ಹೀಗೇನು ? ನಾನೆಂದರೆ ನಿನ್ನಬಳಿ ಹೀಗಾಗಿ ಹೋದೆನೆ ?

ಇಷ್ಟೊಂದು ಅನ್ಯಾಯವು ಧರ್ಮಕ್ಕೆ ಸಹನವಾಗದು, ಸ್ನೇಹಾ ! ಹಳೆಯ ಗೆಳೆಯನ ನೆನಪು ತುಸು ತುಸು ಇರಲಿ. '

' ಆಃ, ಇಲ್ಲದ ಹರಟೆ ! ನಾನು ಅಕ್ಕನಿಗೆ ಪತ್ರ ಬರೆದುಬಿಡುತ್ತೇನೆ. '

' ಅದು ಬಹು ಒಳ್ಳೆಯ ಮಾತು. ಇದೇ ಸುಯೋಗದಲ್ಲಿ ನಾನಿಷ್ಟು ತಿರುಗಾಡಿ ಬರುವೆ. '

ಸ್ನೇಹಳು ಪತ್ರ ಬರೆಯಲು ಕುಳಿತಳು— ' ಅಕ್ಕ, ಇನ್ನೂ ಎಷ್ಟು ತಡಮಾಡುವೆ ? ಒಂದು ತಿಂಗಳ ಮೇಲಾಗಿ ಹೋಯಿತಲ್ಲ ? ನಿನ್ನ ಪ್ರಭಾತ ನನ್ನು ಇನ್ನು ನಾನು ಹಿಡಿಯಲಾರೆ. ಬಹಳ ತುಂಟನಾಗಿದ್ದಾನೆ. ನೀನು ಬಾ. ಇನ್ನು ತಡಮಾಡಬೇಡ. '

ಕೆಲ ದಿನದ ಮೇಲೆ ಉತ್ತರ ಬಂತು. ' ಪ್ರಭಾತನನ್ನು ಇನ್ನು ಕೆಲ ದಿನ ಹಿಡಿದಿರು ರನ್ನದಂಥ ತಂಗಿ. ತಂದೆ ಬಹಳ ಶೋಕಾಕುಲರು. ಈಗಲೂ ಹೋಗುವ ಮಾತನ್ನೆತ್ತಲು ಸಾಹಸವಾಗುತ್ತಿಲ್ಲ. '

ಕೆಲ ದಿನ ಕಳೆಯಲು ಸುಧೆಯಿಂದ ಇನ್ನೊಂದು ಪತ್ರ ಬಂತು. ' ತಂದೆಗೆ ಹೋಗುವೆನೆಂದು ಹೇಳುತ್ತಲೇ ಅವರು ಬಹಳ ಅಳುತ್ತಾರೆ. ಏನು ಮಾಡಲಿ ತಂಗೀ ! ನಾನು ಧರ್ಮಸಂಕಟದಲ್ಲಿದ್ದೇನೆ. '

ಸ್ನೇಹಳು ಚಿಂತಿತಳಾಗಿ ಪತ್ರವನ್ನು ಸುರೇಶನಿಗೆ ತೋರಿಸಿದಳು. ಅವನು ಓದಿ, ' ನಾನೂ ಅದೇ ಅನ್ನುತ್ತೇನೆ. ಬರುವದು ಈಗ ನಿಜವಾಗಿಯೂ ಸಂಕಟವೇ ಸರಿ ' ಎಂದೆನ್ನುತ್ತಲೇ ಸ್ನೇಹಳು ಅವನನ್ನು ತಡೆದು, ' ಹಾಗೆಂದು ಬರುವದೇ ಇಲ್ಲವೋ ಏನು ? '

' ನಾನು ಹೇಗೆ ಹೇಳಲಿ ಹೇಳು ? ಬರದಿದ್ದರೆ ಉಪಾಯವೇನು ? ಯಾಕೆ ಸ್ನೇಹಾ, ಅವಳು ಮತ್ತೆ ಬರದಿದ್ದರೆ ನನ್ನ ಹತ್ತಿರ ನೀನು ಇರಲಾರೆಯಾ ? ಕಲಕತ್ತೆಯಲ್ಲಿ ಇನ್ನಾರಿದ್ದರು ? '

' ಅಂಥ ಮಾತಾಡಬೇಡ. ನನಗೆ ಬಹಳ ಕಷ್ಟವಾಗುವದು. '

ಸುರೇಶನು ಗಂಭೀರನಾಗಿ ಒಂದು ಕ್ಷಣ ಏನನ್ನೋ ಭಾವಿಸಿಕೊಂಡನು. ಅವನ ಬಾಯಿಂದ ಅಸ್ಪಷ್ಟವಾಗಿ ನುಸುಳಿ ಹೋಯಿತು, ' ಆಶ್ಚರ್ಯವೇ ಸರಿ. '

' ಆಶ್ಚರ್ಯವೇನು ? '

' ಆಶ್ಚರ್ಯವಿನ್ನೇನೂ ಅಲ್ಲ-ಹಾಂ, ನಿನ್ನ ಮನಸ್ಸಿಗೆ ಬೇಸರವಾಗಿದ್ದರೆ

ನಡೆ ಸ್ನೇಹಾ, ನಾವು ಎಲ್ಲಿಗಾದರೂ ಕೆಲ ದಿನ ಹೋಗಿ ತಿರುಗಾಡಿಕೊಂಡು ಬರೋಣ.'

'ಇಲ್ಲ ಇಲ್ಲ. ಅಕ್ಕ ಬೇಗನೇ ಬರುವರು. ಅವರು ಬಂದರೆ ಹೋಗೋಣ.'

ಮರುದಿನ ಸುಧೆಯು ಪತ್ರ ಬಂತು. 'ಅವಳ ತಂದೆಗೆ ನೆಟ್ಟಗಿಲ್ಲ. ಪಿತನು ಆರೋಗ್ಯವಾಗುವ ವರೆಗೆ ಅವಳು ಬರಲಾರಳು. ಸ್ನೇಹಾ ಸಿಟ್ಟಾಗದಿರಲಿ' ಇತ್ಯಾದಿ.

ಸ್ನೇಹಳು ಉತ್ತರ ಬರೆದಳು, 'ಏನೆಂದು ಸಿಟ್ಟಾಗಲಿ ಅಕ್ಕ! ಆದರೆ ಮರೆಯಬೇಡ. ತಂದೆಯವರಿಗೆ ಗುಣವಾದ ಕೂಡಲೇ ಬಾ!'

ಕ್ರಮವಾಗಿ ನಾಲ್ಕು ತಿಂಗಳುಗಳು ಕಳೆದು ಹೋದವು. ಸುಧೆಯ ಪತ್ರದಲ್ಲಿ ಅವಳ ತಂದೆಗೆ ಗುಣವಾದ ಸುದ್ದಿಯು ದೊರೆಯಲಿಲ್ಲ. ಹಾಗೆಂದೇ ಅವಳು ಬಂದಿಲ್ಲ. ಒಂದು ದಿನ ಈ ಬಗ್ಗೆಯೇ ಸ್ನೇಹಾ ಸುರೇಶರು ಮಾತುಕಥೆಯಾಡುತ್ತಿದ್ದರು. ಸುರೇಶನು, 'ಮಾವನವರ ಅನಾರೋಗ್ಯವು ಒಂದು ನೆವ' ಎಂದನು.

ಸ್ನೇಹಳು ಚಕಿತಳಾಗಿ, 'ಇಲ್ಲಿಲ್ಲ, ಹಾಗೆಂದೂ ಇರಲಾರದು' ಎಂದಳು.

'ಇರಲಾರದೇನು ಸ್ನೇಹಾ— ಹಾಗಿರುವ ಸಂಭವವೇ ಹೆಚ್ಚು.'

'ಯಾಕೆ? ಆ ಸಂಭವ ಹೇಗೆ?'

ಸುರೇಶನು ಸುಮ್ಮನಾದನು. ಆ ಮೇಲೆ, 'ನಿನಗೇನೂ ತಿಳಿಯದೇ? ನೀನೇ ಹೇಳು, ನಮ್ಮ ಸುಖದಿಂದ ಅವಳ ಜೀವನದ ಸಾರ್ಥಕವೇನು?'

ಸ್ನೇಹಳು ದುಮ್ಮಾನದಿಂದ ಕುಳಿತು ಆ ಮೇಲೆ, 'ಹಾಗಿದ್ದರೂ ನಾವು ಸುಖವಾಗಿರುವದು ನೋಡಿ ಅಕ್ಕ ನಿಜವಾಗಿ ತಾನೂ ಒಳಗೊಳಗೆ ಸುಖ ಪಡುವಳು. ನೀನು ಏನೇ ಹೇಳು, ಇದು ನನ್ನ ಅಂತರಿಕ ವಿಶ್ವಾಸವು' ಎಂದಳು.

ಸುರೇಶನು ತುಸು ನಕ್ಕು ಹೇಳಿದನು, 'ಈ ವಿಶ್ವಾಸವು ನಿನ್ನೊಬ್ಬಳದೇ ಸ್ನೇಹಾ? ಅವಳ ಬಗ್ಗೆ ನನಗೂ ಹಾಗೇ ವಿಶ್ವಾಸವಿದೆ. ಆದರೆ ಅಸಾರ್ಥಕತೆಯ ಮಾತು ಅವಳ ಮನಸ್ಸಿನಲ್ಲಿ ಒಮ್ಮೆಯೂ ಬಾರದೆ? ಅದು ಅವಳ ಮನಸ್ಸಿನಲ್ಲಿ ಬರದಿದ್ದರೂ ನಾವು ಆ ಬಗ್ಗೆ ಕುಂಠಿತರಾಗಬೇಕಾದ ಕಾರಣವು

ಸಾಕಷ್ಟಿಲ್ಲವೆ ? ಅವಳು ಬರಬಾರದೆಂದು ತಾನಾಗಿಯೇ ಬಿಟ್ಟಿದ್ದರೆ ಅವಳ ಮೇಲೆ ಒತ್ತಾಯವು ಯೋಗ್ಯವೆ ? '

' ಯಾಕೆ ಯೋಗ್ಯವಲ್ಲ ? ನಾನು ಅವಳನ್ನು ಒತ್ತಾಯದಿಂದಲೇ ಕರೆತರುವೆ. '

ಸುರೇಶನು ನಕ್ಕು, ' ಆಗಲಿ, ಹಾಗೇ ಕರೆತಾ, ನಿನ್ನ ನೀರು ತಿಳಿದು ಹೋಗಲಿ—' ಎಂದನು.

೧೫

ಇನ್ನೆರಡು ತಿಂಗಳು ಕಳೆದವು. ಬಹಳ ಬೇಸರಗೊಂಡು ಸುರೇಶನು ಕೆಲ ದಿನದ ಮಟ್ಟಿಗೆ ಎಲ್ಲಿಗಾದರೂ ಹೋಗುವ ಸಿದ್ಧತೆಯಲ್ಲಿರುವ ಹಾಗೆ ಸ್ನೇಹಳಿಗೆ ಹೇಳಬೇಕೆಂದುಕೊಂಡಾಗ, ಅದೇ ದಿನ ಸ್ನೇಹಳು ಬಂದು ಹಸ-ನ್ಮುಖಳಾಗಿ ಹೇಳಿದಳು, ' ನನ್ನ ಯೋಗ್ಯತೆಯನ್ನು ತುಸು ನೋಡಿ ಹೋಗು.'

' ಯಾತರ ಯೋಗ್ಯತೆ ? '

' ಅಕ್ಕನನ್ನು ಕರೆತರುವದು ? '

ಸುರೇಶನು ವಿಸ್ಮಿತನಾಗಿ, ' ಹೀಗೆ ? ಕರೆತಂದಿರುವೆಯೇನು ? '

' ನೋಡಿಯೇ ಹೋಗು '—ಎಂದವಳೇ ಓಡಿಹೋದಳು. ಸುರೇಶನು ಬೆರಗುಗೊಂಡು ಅವಳ ಹಿಂದಿಂದೆ ಹೋಗಿ ನೋಡುತ್ತಾನೆ— ಸುಧೆ! ಸುಧೆಯು, ಸೆಡವಿನಿಂದ ಸಿಡಿಸಿಡಿದು ಬೀಳುವ ಪ್ರಭಾತನನ್ನು ಬಗೆಬಗೆಯಾಗಿ ರಮಿಸು ತ್ತಿದ್ದಾಳೆ. ಪ್ರಭಾತನು ಬಹು ದಿನದ ಮೇಲೆ ತಾಯಿಯನ್ನು ನೋಡಿ ತುಟಿ ಯುಬ್ಬಿಸಿ ಒಂದು ಮೂಲೆಯಲ್ಲಿ ಕುಳಿತು ಬಿಟ್ಟಿದ್ದಾನೆ. ಅವನ ಸೊರಗಿದ ಮೈಮೇಲೆ ಸುಧೆಯು ಕೈಯಾಡಿಸಿ ಅಕ್ಕರೆಗರೆಯುತ್ತಿದ್ದಾಳೆ. ಅವನ ಕಂಣು ಗಳಿಂದ ಪಳಪಳ ನೀರು ಹರಿಯುತ್ತಿದೆ. ಸುರೇಶನು ನೀರವನಾಗಿ ಒಂದು ಬದಿಗೆ ನಿಂತುಕೊಂಡನು. ಚೇಷ್ಟೆಯಿಂದ ಒಂದು ಮಾತಿನ ಕೂರಲಗನ್ನು ಸುಧೆಗೆ ಚುಚ್ಚಲು ತವಕಪಡುತ್ತಿದ್ದಾನೆ. ಆದರೆ ಬಾಯಿಂದ ಮಾತೇ ಹೊರಡ ಲಿಲ್ಲ. ಸ್ನೇಹಳು ನಗುನಗುತ್ತ ಹೇಳಿದಳು, ' ಅಕ್ಕ, ಪ್ರಭಾತನ ಸೆಡವನ್ನಷ್ಟೇ ಇಳಿಸಿದರಾಯಿತೆಂದು ತಿಳಿಯಬೇಡ; ಇನ್ನೂ ಅನೇಕರದು ಇಳಿಸಬೇಕು. ನನ್ನ ಈ ಸಿಟ್ಟನ್ನು ಈ ಜನ್ಮದಲ್ಲಿ ನೀನಿಳಿಸಲಾರೆ. '

ಸುಧೆಯು ಪ್ರಭಾತನ ಕಂಣೊರೆಸುತ್ತ ನಕ್ಕು, ‘ ನಿನ್ನ ಸಿಟ್ಟಿನಿಂದ ನಾನು ಓಡಿಹೋಗಿ ಇರುವೆಯ ಹೊದರಿನಲ್ಲಿ ಅಡಗಿಕೊಳ್ಳುವೆ-- ’ ಎಂದಳು.

‘ ಒಳ್ಳೇದು, ನನ್ನನ್ನಂತೂ ಗಣನೆಗೆ ತರಲಿಲ್ಲ--- ಇನ್ನೊಬ್ಬರದು ?’

ವಿಮುಖ ಬಾಲಕನನ್ನು ಸಂತೈಸಿ ಎದೆಗವಚಿಕೊಂಡು ಸುಧೆಯು ಹೇಳಿದಳು, ‘ ಆ ಬಗ್ಗೆಯೂ ನನ್ನ ಚಿಂತೆಯಿಲ್ಲ. ಆ ಸಿಟ್ಟು--- ’ ಸುರೇಶನನ್ನು ನೋಡಿ ಮಾತನ್ನು ನುಂಗಿಕೊಂಡಳು. ಆ ಮೇಲೆ ನಕ್ಕು ಹೇಳಿದಳು, ‘ ಹೋಗಲಿ, ಒಂದೇ ಸ್ಥಳದಲ್ಲಿ ಎಲ್ಲ ಸಿಟ್ಟಿನ ಕೊನೆಯಾದರೆ ನೆಟ್ಟಗೆ. ’

ಸ್ನೇಹಳು ಪತಿಯ ಕಡೆಗೆ ನೋಡಿ, ‘ ಅಂಥವಳ ಸಂಗಡ ಮಾತಾಡಬೇಡ ’ ಎಂದಳು.

ಆದರೆ ಪತಿಯು ಅವಳ ಮಾತು ಮನ್ನಿಸಲಿಲ್ಲ. ‘ ಸಿಟ್ಟೇತರದು ? ’ ಎಂದನು.

‘ ಸ್ನೇಹಾ, ಹೆದರಿಕೆ ಹಾಕಿ ಹರಣವು ಹಾರುವ ಹಾಗೆ ಮಾಡಿದ್ದಾಳೆ. ಯಾರೂ ನನ್ನನ್ನು ಕ್ಷಮಿಸುವದೇ ಇಲ್ಲವಂತೆ. ಪ್ರಭಾತನೊಡನೆಯಂತೂ ಸಂಧಿಸ್ಥಾಪನೆಯಾಯಿತು. ’

‘ ನೀನು ನಿನ್ನ ಕರ್ತವ್ಯಪಾಲನಕ್ಕಾಗಿ ಹೋಗಿದ್ದೆ. ಇದಕ್ಕಾಗಿ ಸಿಟ್ಟಾದವರು ತಿಳಿಗೇಡಿಗಳು. ’

‘ ಹೋಗಲಿ, ಅಂತೂ ಬದುಕಿಕೊಂಡೆ. ಈಗ ಏನೆನ್ನುವೆ ಸ್ನೇಹಾ ? ’

‘ ನಾನು ಇನ್ನೇನು ಹೇಳಲಿ ಅಕ್ಕ ? ನಿಜವಾಗಿಯೂ ಬಹಳ ಸಿಟ್ಟು ಬಂದಿತ್ತು. ಆದರೆ ಅದು ಈಗಿಲ್ಲ. ’

‘ ಇಷ್ಟರಲ್ಲಿ ಕ್ಷಮಿಸಿಬಿಟ್ಟೆಯೇನು ? ನೋಡು, ಪ್ರಭಾತನಿನ್ನೂ ಮುಸುಗುಟ್ಟುತ್ತಾನೆ; ನಾನು ಅವನನ್ನು ಬಿಟ್ಟು ಹೋಗಿದ್ದೆ. ಅದನ್ನಿನ್ನೂ ಅವನು ಮರೆತಿಲ್ಲ. ಅವನ ಕರುಳಿನ ಸೆಳೆತವೇ ನಿಜವಾದದ್ದು. ನಿನ್ನದು ನನ್ನ ಮೇಲೆ ಬರೀ ಬಾಯ್ಮಾತಿನ ಸಿಟ್ಟು. ’

‘ ಬಾಯ್ಮಾತಿನ ಸಿಟ್ಟೇ ? ಸಿಟ್ಟಾದರೆ ನಿನಗೆ ಆನಂದವಾಗುವದೇನು ?’

‘ ಆಗದೇ ಏನು ? ನೀನೇ ಅಲ್ಲವೆ ಸಿಟ್ಟಾಗಿ ನನಗೆ ಸಿಟ್ಟಿನ ಸವಿ ಹಚ್ಚಿದವಳು ? ’

‘ ಯಾಕೆ ? ’

‘ ಆವರಿವರ ಮೇಲೆ ಯಾರಾದರೂ ಸಿಟ್ಟಾದಾರೆ ಸ್ನೇಹಾ ? ಇನ್ನು

ಬಿಟ್ಟು ಸಿಡಿವಿನ ಮಾತು ಸಾಕು.' ಆ ಮೇಲೆ ಸುರೇಶನ ಕಡೆಗೆ ನೋಡಿ, 'ತಂದೆಯವರು ಈಗ ಚೆನ್ನಾಗಿದ್ದಾರೆ. ನಿಮ್ಮನ್ನೆಲ್ಲ ಬೆರಗುಗೊಳಿಸಬೇಕೆಂದೇ ತಿಳಿಸದೆ ಬಂದುಬಿಟ್ಟೆ' ಎಂದಳು.

'ಅವರು ಬರಗೊಟ್ಟರೆ?'

'ಬರಗೊಡದೆ ಇನ್ನೇನು ಮಾಡಿಯಾರು?'

'ಮತ್ತೆ ಈಗ ತಿರುಗಿ ಹೋಗಬೇಕಾಗಿಲ್ಲವೆಂದು ತೋರುತ್ತದೆ.'

'ಇಲ್ಲ.'

'ಅವರಿಗೆ ಕೆಡಕೆನಿಸಲಿಲ್ಲವೆ?'

'ಅನಿಸದೆ ಏನು? ಅವರಿಗೆ ದತ್ತಕ ತೆಗೆದುಕೊಳ್ಳಲು ಹೇಳಿದ್ದೇನೆ.'

ಸುರೇಶನು ಬೆರಗಾಗಿ, 'ಅದೇನು? ಈ ಕೆಲಸ ಮಾಡಿದ್ದು ಒಳಿತಾಯಿತೆ?' ಎಂದನು.

'ಹೀಗಲ್ಲದೆ ಇನ್ನೇನು ಮಾಡಬಹುದಾಗಿತ್ತು ಹೇಳು? ನೀವು ನನ್ನನ್ನು ಇರಗೊಡಲಿಲ್ಲ.'

'ನಿನ್ನ ಸುಖಕ್ಕೆ ಭಂಗ ತಂದು, ಇಂಥ ಅನ್ಯಾಯದ ಅನುರೋಧವನ್ನು ನಾನೆಂದೂ ಮಾಡಲಾರೆ.'

'ನಾನು ಹೇಳುವಾಗ ತಪ್ಪಿದೆ ಸ್ನೇಹಾ. ನನ್ನನ್ನು ಅಲ್ಲಿ ನಿಲ್ಲಗೊಡಲಿಲ್ಲ.'

'ಅರ್ಥ ಒಂದೇ. ಇಂಥ ಸಾಮಾನ್ಯ ಅನುರೋಧಕ್ಕಾಗಿ ನೀನು ಅಷ್ಟು ದೊಡ್ಡ ಸಂಪತ್ತಿಯನ್ನು ತ್ಯಾಗ ಮಾಡಿದೆಯಾ?'

'ಸಾಮಾನ್ಯ ಅನುರೋಧವಿರಬಹುದು. ಆದರೆ ಅದೇ ನನಗೆ ಬಹಳ ಮಹತ್ವದ್ದೆನಿಸಿತು. ಹೋಗೆಂದರೆ ತಿರುಗಿ ಹೋಗುತ್ತೇನೆ.' ಸ್ನೇಹಳು ಸುಧೆಯ ಕೈಹಿಡಿದು 'ಅಕ್ಕ' ಎಂದಳು. ಸುಧೆಯು ಅವಳಿಗೆ ಉತ್ತರ ಕೊಡದೆ, ಸುರೇಶನಿಗೆ, 'ಏನೆನ್ನುವೆ?' ಎಂದಳು.

ಸುರೇಶನು ಒಂದು ಕ್ಷಣ ಸುಮ್ಮನಿದ್ದು ಹೇಳಿದನು, 'ನಿನ್ನ ಸ್ವಾರ್ಥವನ್ನು ನೋಡಿದರೆ, ನಿನ್ನನ್ನು ಹಿಡಿದಿರಿಸದಿರುವದೇ ಉಚಿತ. ಆದರೆ—'

'ಆದರೆ ಏನು?'

'ಆದರೆ, ಹೇಳಿರುವೆನಲ್ಲವೆ, ಜಗತ್ತಿನಲ್ಲಿ ಎಲ್ಲರೂ ಸ್ವಾರ್ಥಪರರೆಂದು?

ನಾವು ನಮ್ಮ ಸ್ವಾರ್ಥಕ್ಕಾಗಿ ನಿನ್ನನ್ನು ಹಿಡಿದಿರಿಸಿದರೆ ಜಗತ್ತಿನ ದೃಷ್ಟಿಯಲ್ಲಿ ನಮ್ಮದೇನೂ ಹೊಸ ದೋಷವಲ್ಲ ? '

ಸ್ನೇಹಳು ಮಾತು ನಿಲ್ಲಿಸಿ ಹೇಳಿದಳು, ' ಆ ಎಲ್ಲ ಮಾತಿನಲ್ಲಿ ಹುರುಳಿಲ್ಲ ಅಕ್ಕ. ಬಾ, ಕೈಕಾಲು ತೊಳೆದುಕೊಳ್ಳುವೆಯಂತೆ. '

ಹೋಗ ಹೋಗುತ್ತ ಸುಧೆಯು ಹೇಳಿದಳು, ' ನನ್ನದೂ ಸ್ವಾರ್ಥವಿದೆ, ನಾನು ಹೋಗುವದಿಲ್ಲ. '

ಆ ಮೇಲೆ ಮೊದಲಿನಂತೆ ಮತ್ತೆ ದಿನಗಳು ಸಾಗತೊಡಗಿದವು. ಕಾಲೀಪದನು ಈ ಮುನ್ನ ಸುಯೋಗ ಪಡೆದು ಸುತ್ತೂ ಕಡೆಗೆ ಅಧಿಕಾರ ಜಾಲವನ್ನು ಪಸರಿಸಿ ಕೋರ್ಟು ಕಚೇರಿಗಳಲ್ಲಿ ದಾವೆ ಮೊಕದ್ದಮೆಗಳನ್ನು ಹೂಡಿಬಿಟ್ಟಿದ್ದಾನೆ. ಸುಧೆಯು ಇದನ್ನೆಲ್ಲ ನೋಡಿ ಸುರೇಶನ ದುರ್ಲಕ್ಷ್ಯವೇ ಇದರ ಕಾರಣವೆಂದರಿತಳು. ಅವನನ್ನು ಈ ಬಗ್ಗೆ ಜಾಗರಿಸಿ ಮತ್ತೆ ಹೇಳಲು ಸುರೇಶನು ಲಜ್ಜಿತನಾಗಿ ತನ್ನ ವಿಷಯ ಸಂಪತ್ತಿನ ಕೆಲಸ ದಲ್ಲಿ ಮನಸ್ಸು ತೊಡಕಿಸಲು ಯತ್ನಿಸಿದನು. ಕಾಲೀಪದನು ಹೂಡಿದ ಕೋರ್ಟು ಕಚೇರಿಯ ನ್ಯಾಯದಲ್ಲಿಯೇ ಸುರೇಶನ ಎಲ್ಲ ಸಮಯವೂ ಕಳೆದು ಹೋಗತೊಡಗಿತು. ಸ್ನೇಹಳು ಒಂದು ದಿನ ದುಃಖಿತಳಾಗಿ ಹೇಳಿದಳು, ' ಮೊದಲಿನಂತೆ ಈಗ ಮಾತುಕಥೆಗೆ ಅವಕಾಶವೇ ಸಿಕ್ಕುತ್ತಿಲ್ಲ. ' ಸುಧೆಯು ಗದ್ದರಿಸಿ ಹೇಳಿದಳು, ' ಹಾಗೆಂದು ಇನ್ನುಳಿದ್ದದ್ದನ್ನೆಲ್ಲ ತೇಲಬಿಡುವ-ದಿದೆಯೆ ? ಮೊದಲು ಕೆಲಸ ಆ ಮೇಲೆ ಮಾತು. '

ಆದರೆ ಸುರೇಶನು ಆಗ ಎಚ್ಚತ್ತು ಕೆಲಸದಲ್ಲಿ ತೊಡಗಿದ್ದಕ್ಕೆ ಯಾವ ಪ್ರಯೋಜನವೂ ಆಗಲಿಲ್ಲ ಚಿರಶತ್ರುವಾದ ಚೌಧುರಿಯು ಈ ಸುಯೋಗ ವನ್ನು ಉಪೇಕ್ಷಿಸದೆ, ಒಳಗೊಳಗೆ ಕಾಲೀಪದನನ್ನು ಹಸ್ತಗತ ಮಾಡಿಕೊಂಡು, ರೀತಿಯ ಪ್ರಕಾರವಾಗಿ ಕೋರ್ಟಿನಲ್ಲಿ ಪಕ್ಕಾದಾವೆ ಹೂಡಿಬಿಟ್ಟನು. ಜಮೀನು ದಾರಿಯ ದೊಡ್ಡ ದೊಡ್ಡ ಭೂಭಾಗದ ಪ್ರಜೆಗಳು ಕಾಲೀಪದನ ಅತ್ಯಾ-ಚಾರಕ್ಕೆ ಬೇಸತ್ತು ಮುಟ್ಟುಗೋಲು ಹಾಕಿಕೊಂಡು ಕುಳಿತಿದ್ದಾರೆ. ಒಂದೆರಡು ಖೂನಿ ಜಖಮಿ ಕಟ್ಟಳೆಗಳಲ್ಲಿ ಪ್ರಭುವಿಗೂ ಪ್ರಜಾಜನರಿಗೂ ತುಮುಲ ಯುದ್ಧ ನಡೆದುಹೋಗಿದೆ. ಸುಧಾ ಸುರೇಶರು ಉಪಾಯಗಾಣದೇ ಪೇಚಿನಲ್ಲಿ ಸಿಲುಕಿ ಒದ್ದಾಡತೊಡಗಿದರು. ವಕೀಲರು, ಬ್ಯಾರಿಸ್ಟರರು, ಸಾಕ್ಷಿಗಳು, ಇವ ರಿಗಾಗಿ, ಇನ್ನೂ ಅನೇಕ ವಿಧವಾಗಿ, ದುಡ್ಡು ದೊಡ್ಡ ಹಳ್ಳವಾಗಿ ಹರಿದು ಹೋಯಿತು. ಆದರೂ ಜಮೀನುದಾರಿಯೇ ಕಳೆದು ಹೋಗುವ ಹೊತ್ತು

ಬಂದುಬಿಟ್ಟಿದೆ. ಇನ್ನು ಬೇರೆ ದಾರಿಯಿಲ್ಲವೆಂದು ಸುಧೆಯು, ಕಾಶಿಗೆ ಕಾಕಾ ಅವರಿಗೆ ಕೂಡಲೇ ಬರುವ ಹಾಗೆ ತಾರು ಕೊಡುವದಾಗಿ ಸುರೇಶನಿಗೆ ಹೇಳಿದಳು.

ದಿವಾಣನು ಬಂದನು. 'ಸತ್ತರೂ ಈ ಮುದುಕನಿಗೆ ನೀವು ನಿಸ್ತಾರ ಕೊಡುವದಿಲ್ಲವೇ ?' ಎಂದನು.

'ಇಲ್ಲ. ಹಾಗಾದರೆ ನಾವು ಬದುಕಬಲ್ಲೆವೆ ?'

ವಿಪತ್ತಿನ ಮೇಲೆ ವಿಪತ್ತು. ಪ್ರಭಾತನಿಗೆ ಒಮ್ಮೆಂದೊಮ್ಮೆ ಕಟ್ಟಿನ ಜ್ವರ ಬಂದುಬಿಟ್ಟಿದ್ದರಿಂದ ಎಲ್ಲರೂ ಇನ್ನೂ ದ್ವಿಗುಣಿತವಾಗಿ ವ್ಯಗ್ರರಾದರು. ದಿವಾಣನು ಸುಧೆಗೆ, 'ವಿಷಯ ಸಂಪತ್ತಿನ ಜಂಜಾಲವನ್ನು ನಾನು ನೋಡಿ ಕೊಳ್ಳುತ್ತೇನೆ. ಭಾಗ್ಯದಲ್ಲಿದ್ದದ್ದಾದೀತು. ನೀನು ಪ್ರಭಾತನನ್ನು ನೋಡಿಕೊ' ಎಂದನು. ಸುಧೆಯು ಎಲ್ಲವನ್ನೂ ಬಿಟ್ಟು ರುಗ್ಣ ಬಾಲಕನ ಶುಶ್ರೂಷೆಯಲ್ಲಿ ತೊಡಗಿಕೊಂಡಳು. ಆಹಾರವಿಲ್ಲ, ನಿದ್ರೆಯಿಲ್ಲ. ಸುಧೆಯ ಬೇಸರಿಲ್ಲದ ಶುಶ್ರೂಷೆಯಿಂದಲೂ ಮತ್ತು ಹೆಸರಾದ ಡಾಕ್ಟರರ ಚಿಕಿತ್ಸೆಯಿಂದಲೂ ಪ್ರಭಾತನ ರೋಗವು ಸಮತೆಗೆ ಬರಲೊಲ್ಲದು. ಕಡೆಗೆ ಹುಡುಗನು ಬದುಕು ವನೋ ಇಲ್ಲವೋ ಎಂದು ಸಂಶಯುವಾಯಿತು. ಸ್ನೇಹಳಿಗೆ ವಿಶೇಷವೇನೂ ತಿಳಿಯುತ್ತಿರಲಿಲ್ಲ. ಎಲ್ಲರ ಸಮಾಧಾನದ ಮಾತುಗಳಲ್ಲಿ ವಿಶ್ವಾಸವಿಟ್ಟು ಮ್ಲಾನ ಮುಖದಿಂದ ಸುಮ್ಮನೆ ಪುತ್ರನನ್ನು ನೋಡುತ್ತಿದ್ದಳು. ಮತ್ತು ಸುಧೆಯ ಆಶ್ವಾಸನದಿಂದ ವಿಶ್ವಸ್ತಳಾಗಿ ಆಗಾಗ ಕೇಳುತ್ತಿದ್ದಳು, 'ಅಕ್ಕ, ಮಗುವಿಗೆ ನೆಟ್ಟಗಾಗುವದಷ್ಟೆ ?'

ಸುಧೆಯು ಆಶೆ ಕೊಟ್ಟು, 'ಶುಭವೆನ್ನು. ಭಯವೇತರದು ?' ಎಂದು ಹೇಳುತ್ತಿದ್ದಳು.

ಸುಧೆಯು ಸುರೇಶನನ್ನು ಕರೆದು, ಸ್ನೇಹಳು ಯಾವಾಗಲೂ ಅನ್ಯಮನಸ್ಕ ಳಾಗಿರುವ ಹಾಗೆ ನೋಡಿಕೊಳ್ಳಲು ಹೇಳುತ್ತಿದ್ದಳು. ಸುರೇಶನು ಮ್ಲಾನ ಮುಖದಿಂದ ಹೇಳುತ್ತಿದ್ದನು, 'ಇನ್ನೆಷ್ಟು ಆಶ್ವಾಸನೆ ಕೊಡುವದು ? ಅವಳಿ ಗೇನು ಕಂಣಿಲ್ಲವೆ ?'

ರಾತ್ರಿ ರೋಗವು ಹೆಚ್ಚಾಗಿ ಹೋಯಿತು. ಹುಡುಗನ ಎದೆ ಬಡಕೊಳ್ಳ ತೊಡಗಿತು. ಉಳಿದ ಲಕ್ಷಣಗಳೂ ಕೆಡುತ್ತ ನಡೆದಿವೆ.

ಸುಧೆಯು ಬದಿಯ ಕೋಣೆಯಲ್ಲಿದ್ದ ಸುರೇಶನನ್ನು ಕರೆದು ಬಾಲಕನ ಸ್ಥಿತಿಯನ್ನು ತೋರಿಸಿ, 'ಸ್ನೇಹಳನ್ನು ಕರೆದುಕೊಂಡು ಬಾ' ಎಂದಳು.

ಭಗ್ನಕಂಠದಲ್ಲಿ ಸುರೇಶನು, ‘ ಅವಳನ್ನು ಕರೆವೇನು ಆಗಬೇಕಾಗಿದೆ ಸುಧಾ; ಅವಳು ಮಲಗಿದ್ದಾಳೆ, ಮಲಗಿರಲಿ— ’ ಎಂದನು.

‘ ನನಗೆ ಅವಳ ಮಾಣಿಕವನ್ನು ಉಳಿಸಿಕೊಳ್ಳುವದಾಗದಿದ್ದರೆ? ಅವಳು ವಿಶ್ವಾಸವಿಟ್ಟು ನನ್ನ ಮಡಲಲ್ಲಿ ಮಗುವನ್ನು ಕೊಟ್ಟು ಹೋಗಿದ್ದಾಳೆ. ಅವಳನ್ನು ಕರೆ, ಅವಳ ಧನವನ್ನು ಅವಳಿಗೆ ಕೊಟ್ಟು ನಾನು ನಿಶ್ಚಿಂತಳಾಗುವೆ ! ನನಗೆ ಉಳಿಸಿಕೊಳ್ಳುವದಾಗಲಿಕ್ಕಿಲ್ಲ. ’

‘ ಉಳಿಸಿಕೊಳ್ಳಬಹುದಾದರೆ ಅದು ನಿನಗೇ ಸಾಧ್ಯ. ಇಷ್ಟೇಕೆ ವ್ಯಾಕುಲಳಾಗುವೆ ? ದೇವರ ಮೇಲೆ ಭಾರ ಹಾಕಿ ಕುಳಿತುಕೊ. ನನಗಾಗಿ ಅಲ್ಲದಿದ್ದರೂ ದೇವರು ನಿನಗಾಗಿ ಕರುಣೆಗೊಂಡು ಪ್ರಭಾತನನ್ನು ತಿರುಗಿ ಕೊಡುವನು—’

ಉನ್ಮಾದಿತಳಂತೆ ಸುಧೆಯು ಸುರೇಶನ ಕೈಹಿಡಿದು, ‘ ಕೊಡುವನೇ ? ದೇವರು ಪ್ರಭಾತನನ್ನು ನನಗೆ ಕೊಡುವನೇ ಹೇಳು? ನಿನ್ನ ಮಾತಿನಿಂದ ಆಶೆ ಹುಟ್ಟುತ್ತಿದೆ. ನನ್ನ ಇಷ್ಟನ್ನು ಸಹ ಹರಣ ಮಾಡುವನೆ ದೇವರು ?’ ಎಂದಳು.

‘ ಇಲ್ಲ. ನನ್ನ ವಿಶ್ವಾಸವೇ ಹಾಗೆ ದೃಢವಾಗಿದೆ. ನಿನ್ನ ಜೀವಕ್ಕೆ ದೇವರು ಎಂದೂ ಅಂಥ ಆಘಾತವನ್ನು ಮಾಡಲಾರ— ನನುಗೆ ಮಾಡಬಹುದು, ನಿನಗೆ ಇಲ್ಲ. ’

ಸುಧೆಯು ತುಸು ಪ್ರಕೃತಿಸ್ಥಳಾದಳು. ಬಹು ಜೋಕೆಯಿಂದ ಬಾಲಕನನ್ನು ಎತ್ತಿ ಎದೆಗೆ ಹತ್ತಿಕ್ಕಿ ಕರೆದಳು, ‘ ಪ್ರಭಾತ, ಮಗೂ ! ’ ಬಾಲಕನು ಉತ್ತರಕೊಡಲಿಲ್ಲ. ಇರುಳೆಲ್ಲ ಇಬ್ಬರೂ ಕಂಣಲ್ಲಿ ಎಂಣೆ ಹಾಕಿಕೊಂಡು ಕುಳಿತರು. ಬೆಳಗಿನ ಜಾವಕ್ಕೆ ತುಸು ಹಗುರೆನಿಸಿದಂತಾಗಿ ಹುಡುಗನು ಮಲಗಿಕೊಂಡನು. ಸುರೇಶನು ಜ್ವರವನ್ನು ಅಳೆದು ನೋಡಿದನು; ಎರಡು ಡಿಗ್ರಿ ಕಡಿಮೆಯಾಗಿದೆ. ಆಶ್ವಸ್ತಳಾಗಿ ಸುಧೆಯು, ‘ ಪ್ರಭಾತನಿಗೆ ಈಗಿಷ್ಟು ಹಗುರೆನಿಸಿದ್ದೂ ಸಹ ನಿನ್ನ ಅಸೀಮ ದಯೆಯೆ ದೇವಾ ! ’ ಎಂದಳು.

ಸುರೇಶನು, ‘ ನೀನು ತುಸು ಮಲಗು, ನಾನು ಕುಳಿತಿರುವೆ ’ ಎಂದನು.

‘ ನಾನು ? ’ ಮೆಲ್ಲನೆ ನಕ್ಕು ಸುಧೆಯು ಹೇಳಿದಳು, ‘ ಯಾರ ಹತ್ತಿರಕ್ಕೂ ಅವನನ್ನು ಬಿಟ್ಟಿರುವ ಧೈರ್ಯ ಈಗ ನನಗಿಲ್ಲ. ಸ್ನೇಹಾ ಹೇಗಿರುವಳೊ ? ಅವಳು ಇನ್ನೂ ಹುಡುಗಿ. ’

ಸುರೇಶನು ಹೇಳಿದನು, ‘ ಎಂದೇ ಅವಳು ಸುಖಿಯಾಗಿದ್ದಾಳೆ ಅವಲಂಬಿಸಿಕೊಂಡಿರುವದೇ ಮನುಷ್ಯನ ಮುಖ್ಯ ಸುಖದ ಲಕ್ಷಣ. ’

ನಿಟ್ಟುಸಿರಿಟ್ಟು ಸುಧೆಯು, ' ನಿಜವೇ; ನೀನೀಗ ಮಲಗು ' ಎಂದಳು.

ಸುರೇಶನು ಮಲಗಲು ಹೋದನು. ಸುಧೆಯು ನಿದ್ದೆಯಿಲ್ಲದ ಕಂಣು ಗಳಿಂದ ಬಾಲಕನನ್ನೇ ನೋಡುತ್ತ ಕುಳಿತಳು. ಇರುಳೊಮ್ಮೆ ಕಳೆದರೆ ಅವಳು ಬದುಕಿದಳು.

ಮುಂಜಾನೆ ಸುರೇಶನು ಸುಧೆಗೆ ಹೇಳಿದನು, ' ನೋಡು, ಡಾಕ್ಟರರ ಚಿಕಿತ್ಸೆಯಲ್ಲಿ ನನ್ನ ಭರವಸೆಯಿಲ್ಲ. ಒಂದು ತಿಂಗಳಾದರೂ ಗುಣ ತೋರಲಿಲ್ಲ. ನೀನು ಒಪ್ಪಿದೆಯಾದರೆ ನಾನೇ ಇನ್ನು ಔಷಧ ಕೊಟ್ಟು ನೋಡುವೆ. '

ಒಂದು ಕ್ಷಣ ಭಾವಿಸಿ ಸುಧೆಯು, ' ದೇವರು ಮಾಡಿಸಿದ್ದಾಗಲಿ, ನೀನೇ ಕೊಡು. ಡಾಕ್ಟರರಲ್ಲಿ ನನ್ನದೂ ಇನ್ನು ಭರವಸೆಯಿಲ್ಲ ' ಎಂದಳು.

ಸುರೇಶನು ತಾನೇ ಚಿಕಿತ್ಸೆ ಮಾಡಲು ಮೊದಲಿಸುತ್ತಲೇ ಎಲ್ಲರೂ ' ಘಾತ ಘಾತ ' ವೆಂದು ತಾರ ಸ್ವರದಲ್ಲಿ ಚೀತ್ಕರಿಸತೊಡಗಿದರು. ಸುರೇಶನು ಕಿವಿಗೊಡಲಿಲ್ಲ. ಜನರ ಮಾತಿನಿಂದ ವಿಚಲಿತಳಾದ ಸ್ನೇಹಳು, ಸುಧೆಗೆ ಹೇಳಿ ಕೊಂಡಳು, ' ಅಕ್ಕ---ಎಲ್ಲರೂ ಅನ್ನುತ್ತಾರೆ---ತನ್ನವರಾದವರು ಸರಿಯಾದ ಔಷಧ ಕಂಡುಹಿಡಿಯಲಾರರು; ಇಂಥ ಸಾಹಸ ಒಳ್ಳೇದೆ ? '

ಸುಧೆಯು ಅವಳಿಗೆ ಧೈರ್ಯ ಹೇಳಿ, ' ಡಾಕ್ಟರರು ಎಲ್ಲಿ ನೆಟ್ಟಗೆ ಮಾಡಿದರು ? ದೇವರು ಹೀಗೆಯೇ ಗುಣಪಡಿಸಬಹುದು-- ' ಎಂದಳು.

ದಿನ ದಿನಕ್ಕೆ ಬಾಲಕನಿಗೆ ತುಸು ತುಸು ಹಗುರೆನಿಸತೊಡಗಿತು. ಸುರೇಶ ನಿಗೆ ಮತ್ತು ಸುಧೆಗೆ ಹೊಸ ಆಶೆಯೆನಿಸಿತು. ಸ್ನೇಹಳ ಮುಖದಲ್ಲಿ ನಗೆ ಮಿನುಗಿತು. ಜ್ವರವು ಕಡಿಮೆಯಾಗಿ ಬಾಲಕನು ನೆಟ್ಟಗಾದನು. ಆದರೆ ಆತ್ಯಂತ ಅಶಕ್ತನಾಗಿದ್ದಾನೆ. ಈಗಲೂ ಇರುಳೆಲ್ಲ ಹಾಗೆಯೇ ಅವನನ್ನು ನೋಡಿಕೊಂಡು ಕೂತಿರಬೇಕಾಗುತ್ತದೆ. ಆಗಾಗ ಕಿತ್ತಳೆ ದಾಳಿಂಬರೆಯ ರಸವನ್ನು ಬಾಯಿಗೆ ಹಾಕುತ್ತಿರಬೇಕಾಗುತ್ತದೆ. ಇಲ್ಲದಿದ್ದರೆ ಗಂಟಲು ಆರಿ ಕೊಳ್ಳುವದು. ಸ್ನೇಹಳು ನಡುನಡುವೆ ಸುಧೆಗೆ ಹೇಳುತ್ತಿದ್ದಳು, ' ಅಕ್ಕ, ನಾನು ನೋಡಿಕೊಳ್ಳುತ್ತೇನೆ ನೀನು ತುಸು ಮಲಗಬಾರದೆ ? ನಿದ್ದೆ ಕಟ್ಟಿ ಕಟ್ಟಿ ನಿನ್ನ ಅವಸ್ಥೆ ಹೇಗಾಗಿದೆ ನೋಡು ? ಈ ಅತ್ಯಾಚಾರದಿಂದ ನೀನೇ ಮಲಗಿದೆಯಾದರೆ ? '

' ಆದರೇನು ಸ್ನೇಹಾ ? ನೀವು ನನ್ನ ಸೇವೆಯನ್ನಷ್ಟು ಮಾಡಲಾರಿರಾ ? '

' ನಿನ್ನ ಹಾಗೆ ? ಸತ್ತರೂ ಆಗದು. '

' ನನಗೇನೂ ಆಗುವದಿಲ್ಲ. ನೀನು ಹಿರಿಯತನ ಬಡಿಯಬೇಕಾಗಿಲ್ಲ. ಮಲಗು.' ಮತ್ತೆ ಒಂದೆರಡು ಸಲ ನಿಷ್ಫಲ ಪ್ರಯತ್ನಮಾಡಿ ಸ್ನೇಹಳು ಅಲ್ಲಿಯೇ ಮಲಗಿದಳು. ಹುಡುಗನು ಎಚ್ಚತ್ತು ' ಅವ್ವಾ ! ' ಎಂದನು. ಸುಧೆಯು ಬಾಗಿ ' ಮಗು ' ಎಂದಳು. ಬಾಯಲ್ಲಿ ಹಂಣಿನ ರಸಸೇಚನೆ ಯಿಂದ ಆವನ ನೀರಡಿಕೆ ಹಿಂಗಿತು. ತನ್ನ ಕ್ಷೀಣ ಹಸ್ತವನ್ನು ಸುಧೆಯು ಹೆಗಲ ಮೇಲಿಟ್ಟು ಅತಿ ಪ್ರೀತಿಯಿಂದ ಮತ್ತೆ ' ಮಾತಾಮಣೀ ! ' ಎಂದು ಕರೆದನು.

' ಪ್ರಭಾಮಣೀ ! ಏನು ನನ್ನ ಧನವೇ? ಇನ್ನಷ್ಟು ರಸ ಕುಡಿಯುವೆಯಾ ? '

' ಇಲ್ಲ. '

' ಹಾಗಾದರೆ ಮಲಗು. ' ಎರಡೂ ಕೈಗಳಿಂದ ಸುಧೆಯ ಕೈ ಹಿಡಿದು ಕೊಂಡು ಬಾಲಕನು ನಿಶ್ಚಿಂತ ಮನಸ್ಸಿನಿಂದ ನಿದ್ದೆ ಹೋದನು. ಅನವರತ ಒಂದುವರೆ ತಿಂಗಳು ಇರುಳೆಲ್ಲ ಎಚ್ಚತ್ತು ಸುಧೆಯ ಶರೀರವು ಕ್ಲಾಂತವಾಗಿ ಭಗ್ನವಾಗಿ ಹೋಗಿತ್ತು. ಈ ಅವಸಾದ ಆಲಸ್ಯಗಳು ಇಷ್ಟು ದಿನ ಮನಸ್ಸಿನ ಉದ್ವೇಗ ಮೂಲಕವಾಗಿ ದೂರದಲ್ಲಿದ್ದವು. ಈಗ ಅವು ಅವಳ ಶರೀರಕ್ಕೆ ಅವಕಾಶ ಕೊಡಲಿಲ್ಲ. ಎಂದೇ ಇಚ್ಛೆಯಿಲ್ಲದಿದ್ದರೂ ಸುಧೆಯು ಗೋಡೆಗೆ ಆತು ಕೂತಳು--ನಿದ್ದೆಗೆ ನೀರಡಿಸಿದ ಕಂಣು ಅಲ್ಲಿಯೇ ಮುಚ್ಚಿಕೊಂಡವು. ಎಷ್ಟು ಹೊತ್ತು ಹೀಗಿದ್ದಳೋ ಗೊತ್ತಿಲ್ಲ. ಸಹಸಾ ಅವಳಿಗೆ ಎನಿಸಿತು--ಯಾರೋ ತನ್ನ ತೊಡೆಯಿಂದ ಮಗುವನ್ನು ಮೆಲ್ಲಮೆಲ್ಲಗೆ ಎತ್ತಿಕೊಳ್ಳುತ್ತಿದ್ದಾರೆಂದು. ಮೆಟ್ಟಿಬಿದ್ದು ಸುಧೆಯು ಎಚ್ಚತ್ತು, ' ಯಾರು ? ' ಎಂದು ಕೇಳಿ ನೋಡುತ್ತಾಳೆ--ಸುರೇಶ !

' ನಾನು. ಮಗುವನ್ನು ಕೊಡು, ಮಲಗಿಸುತ್ತೇನೆ. ಚೆನ್ನಾಗಿ ನಿದೆ ಹತ್ತಿದೆ. '

' ಬೇಡ ಬೇಡ. ಈಗ ಎದ್ದುಬಿಡಬಹುದು--ಗಂಟಲು ಒಣಗುವದು. ತೊಡೆಯ ಮೇಲೆಯೇ ಇರಲಿ. '

' ಹಾಗಾದರೆ ನನ್ನ ತೊಡೆಯ ಮೇಲೆ ಕೊಡು. ನೀನು ತುಸು ಮಲಗು. '

' ಜಾಗರಣೆ ಮಾಡಬೇಡ. ಜಾಡ್ಯವಾದೀತು. ಅದರಲ್ಲಿಯೂ ಇದು ಸಾಂಕುರೋಗ. '

' ಈ ಮಾತು ನಿನಗೇ ಹೆಚ್ಚು ಅನ್ವಯಿಸುತ್ತದೆ. ಶರೀರದ ಮೇಲೆ ಅಷ್ಟೊಂದು ಅನರ್ಥಕವಾಗಿ ಅತ್ಯಾಚಾರ ಮಾಡುವದು ಉಚಿತವಲ್ಲ. ಮಲಗು ಹೋಗು. ನಿನ್ನ ಮೈ ಒಣಗಿಹೋಗಿದೆ. '

ಅಂದು ಸುಧೆಗೆ ಹೆಚ್ಚು ಹಟ ಒಡಿಯುವ ಶಕ್ತಿಯಿರಲಿಲ್ಲ. ಸುರೇಶನು ಮಗುವನ್ನು ಎತ್ತಿಕೊಳ್ಳುತ್ತಲೇ ಸುಧೆಯು ಅಲ್ಲಿಯೇ ಅಡ್ಡಾದಳು. ತಲೆ ನೆಲದ ಮೇಲಿತ್ತು, ಎತ್ತಿಕೊಳ್ಳಲು ಸಾಧ್ಯವಿಲ್ಲ. ಯಾರೋ ತಲೆಯೆತ್ತಿ ಹಾಸಿಗೆಯ ಮೇಲಿಟ್ಟಂತೆ ಅವಳಿಗೆ ಭಾಸವಾಯಿತು. ಸುಧೆಗೆ ಕಂಣು ತೆರೆದು ನೋಡಲು ಸಹ ಆಗ ಸಾಧ್ಯವಿಲ್ಲ. ಅತಿರಿಕ್ತ ಪರಿಶ್ರಮದಿಂದ ಅವಳು ಸತ್ತವಳಂತೆ ಸಂಜ್ಞಾಹೀನಳಾಗಿ ಮಲಗಿಬಿಟ್ಟಳು.

ಮುಂಜಾನೆ ಬಹಳ ಹೊತ್ತೇರಿ ಸ್ನೇಹಳ ಕರೆಗೆ ಎಚ್ಚತ್ತು ನೋಡಿದಳು- ಸ್ನೇಹಳು ಪ್ರಭಾತನನ್ನು ಮಲಗಿಸಿಕೊಂಡು ಕುಳಿತಿದ್ದಾಳೆ. ' ಏಳು ಅಕ್ಕಾ ! ಮೈ ತೊಳೆದು ಪೂಜೆ ಮುಗಿಸಿ ಏನಾದರೂ ಬಾಯಲ್ಲಿ ಹಾಕಿಕೊ. '

ಸುಧೆಯು ಲಜ್ಜಿತಳಾಗಿ ಎದ್ದು ಕುಳಿತಳು. ' ಇಷ್ಟು ಹೊತ್ತಾಗಿ ಹೋಗಿದೆ ? ಬಹಳ ಮಲಗಿಬಿಟ್ಟೆ. '

ಸ್ನೇಹಳು ನಕ್ಕು, ' ಅದು ನಿದ್ದೆಯು ಅಪರಾಧವಲ್ಲವೇ ಮತ್ತೆ, ಹೋಗು. '

' ಹುಂ, ಪ್ರಭಾತನು ಈಗ ಹೇಗಿದ್ದಾನೆ ? '

' ನೆಟ್ಟಗಿದ್ದಾನೆ, ಮಾತಾಡುತ್ತಾನೆ, ಎರಡು ಮೂರು ಸಲ ಮೆಲಿನ್ಸ್ ಫುಡ್ ಹಾಕಿದ್ದೇನೆ. '

ಸುಧೆಯು ಮಗುವಿನ ಹತ್ತಿರ ಸರಿದುಹೋಗಿ ಕರೆದಳು. ಅವನು ಉತ್ತರ ಕೊಟ್ಟನು.

' ಹೊಟ್ಟೆ ಹಸಿದಿದೆಯೆ ? '

' ಇಲ್ಲ. '

ಸ್ನೇಹಳು, ' ನೀನು ಹೋಗು ಅಕ್ಕ, ಮೈ ತೊಳೆದುಕೊ. '

' ಹೊರಟೆ—ಔಷಧ ಹೊತ್ತು ಹೊತ್ತಿಗೆ ಹಾಕುವೆಯಷ್ಟೆ ? ನಾನಿಂದು ಕುಂಭಕರ್ಣನಂತೆ ಮಲಗಿಬಿಟ್ಟೆ. ನಿನ್ನೆ ರಾತ್ರಿ ನೀನು ಪ್ರಭಾತನನ್ನು ನನ್ನ ಹತ್ತರಿಂದ ಕರೆದುಕೊಂಡೆ. '

' ಇಲ್ಲ. ಅವರಿರಬೇಕು. ಮುಂಜಾನೆ ನಾನು ನೋಡಿದಾಗ ಅವರಿದ್ದರು. ನಿನ್ನನ್ನು ಎಚ್ಚರಿಸ ಬೇಡವೆಂದು ಹೇಳಿದ್ದರು. '

ಸುಧೆಯು ತುಸು ಲಜ್ಜಿತಳಾದಳು—ಮಗುವಿನ ಇಷ್ಟು ಹತ್ತಿರ ಅವಳು ಮಲಗಿದ್ದಳು. ಮತ್ತು ಸುರೇಶನು ಇಷ್ಟು ಹತ್ತಿರ ಇದ್ದನು. ನಾಚಿಕೆಯನ್ನು ಪ್ರಯತ್ನಪೂರ್ವಕವಾಗಿ ದೂರಟ್ಟಿ ಸುಧೆಯು ಎದ್ದಳು.

ಬಾಲಕನು ಬರಬರುತ್ತ ನೆಮ್ಮದಿಯಾದನು. ಹಾಸಿಗೆಯ ಮೇಲೆ ಎದ್ದು ಕೂಡುವಂತಾದನು. ಇತ್ತ ದಿವಾಣನೂ ವಿಷಯ ಸಂಪತ್ತಿನ ಎಲ್ಲ ತರಹದ ಗೊಂದಲವನ್ನೂ ಒಂದೊಂದಾಗಿ ಸರಿಪಡಿಸಿಕೊಂಡು ಬಂದನು. ಕಾಲೀಪದನು ಕಾರ್ಯಸಾಧುವೆಂದು ಎಲ್ಲರಿಗೂ ಗೊತ್ತಾಗಿ ಹೋಯಿತು. ದಿವಾಣನು ರೇಗಿ, ' ಈ ಮಗನನ್ನು ಜೇಲಿಗೆ ಕಳಿಸುವೆ ' ಎಂದನು. ಸುಧೆಯೂ ಅವನ ಮೇಲೆ ಅತ್ಯಂತ ಕುಪಿತಳಾಗಿದ್ದಳು ಅವಳು ದಿವಾಣನನ್ನು ತಡೆಗಟ್ಟಲಿಲ್ಲ. ಸ್ನೇಹಳೂ ಸಾಹಸಗೊಂಡು ಏನನ್ನೂ ಹೇಳಲಾರಳು ಸುರೇಶನೇ ತಡೆಗಟ್ಟಿ, ' ಬೇಡ ಬೇಡ, ಅದೆಲ್ಲಾ ಪರೂ ಉಂಟೆ ? ಮಾಡಿದ್ದು ಮಾಡಿ ಹೋಯಿತು. ಈಗ ಅವನನ್ನು ಬಿಟ್ಟುಬಿಡಿ ' ಎಂದನು. ಬಹಳ ವಾಕ್ಯವ್ಯಯದ ನಂತರ ಸುರೇಶನ ಹೇಳಿಕೆಯೇ ನಿಂತಿತು. ಕಾಲೀಪದನು ತಾಡಿತನಾದನು ಮಾತ್ರ.

ಸುರೇಶನು ಅದೇಕೋ ದಿನದಿನ ಬದಲಿಸುತ್ತಿರುವನೆಂದು ಸುಧೆಗೆ ತೋರಿತು. ಯಾವ ಕೆಲಸದಲ್ಲಿಯೂ ಅವನ ಮನಸ್ಸಿಲ್ಲ. ಚಿಕಿತ್ಸಾಸತ್ರಕ್ಕಾಗಲೀ ಬೇಟೆಗಾಗಲೀ ಹೋಗುವ ಆಗಿನ ಹೌಸು ಈಗಿಲ್ಲ. ಸ್ನೇಹಳೊಡನೆಯೂ ಹಾಸ್ಯ-ವಿನೋದದಲ್ಲಿ ಅವನು ಮಗ್ನನಲ್ಲ. ಸುಧೆಯೊಡನೆ ಸಲಿಗೆಯನ್ನೂ ಮಾತುಕಥೆಯನ್ನೂ ಒಮ್ಮೆಗೇ ನಿಲ್ಲಿಸಿಬಿಟ್ಟಿದ್ದಾನೆ. ಸುಧೆಯು ಎದುರಿಗೆ ಬಂದರೂ ಸಹ ಒಮ್ಮೊಮ್ಮೆ ಅವಳನ್ನೂ ಮಾತನಾಡಿಸುತ್ತಿಲ್ಲ. ಕರೆದು ಮಾತನಾಡಿಸಿದರೂ ಕೇಳಿಲ್ಲವೆನ್ನುವ ಹಾಗೆ ಸರಿದು ಹೋಗುವನು ಸುಧೆಯು ಚಿಂತಿತಳಾದಳು. ' ಇದರರ್ಥವೇನು ? ಅವನ ಮನಸ್ಸು ಹೀಗೇಕೆ ಪರಿವರ್ತನವಾಗಿರಬಹುದು ? ಸ್ನೇಹಳೊಡನೆಯೂ ಹಾಸ್ಯದ ಆಮೋದ ಪ್ರಮೋದದ ಮಾತುಕಥೆಯ ಸ್ರೋತವು ಬತ್ತಿಹೋಗಬೇಕಾದರೆ ? ಈ ಪರಿವರ್ತನದ ಅರ್ಥವೇನು ? '

ಅರ್ಥವೇನೇ ಇರಲಿ. ಸುರೇಶನ ಭಾವಾಂತರವು ದಿನ ದಿನವೂ ಹೆಚ್ಚುತ್ತ ನಡೆದಿದೆ. ಬರಬರುತ್ತ ಸ್ನೇಹಳು ಸಹ ಅದನ್ನು ಗುರುತಿಸಿ, ' ಅಕ್ಕ, ಅವರು ಹಾಗೇಕೆ ಆಗಿದ್ದಾರೆ ? ' ಎಂದು ಕೇಳಿದಳು. ಸುಧೆಯು, ' ಹೇಗೆ ? '

ಎಂದಳು. 'ಯಾಕೆ ನಿನಗೆ ಕಾಣಿಸುವದಿಲ್ಲವೆ ? ಈಗ ಸಂಜೆಯಲ್ಲಿ ಮಾತು ಕಥೆ ಆಡಲಿಕ್ಕೆ ಬರುತ್ತಿಲ್ಲ. ದೇವರಿಗೆ ಹೂ ತಪ್ಪಿದರೂ ನಮ್ಮ ಸಂಜೆಯ ಸಭೆ ತಪ್ಪುತ್ತಿದ್ದಿಲ್ಲ. ಆದರೆ ಈಗ ಅವರು ಕಂಚುಮಿಂಚಾಗಿ ಬಿಟ್ಟಿದ್ದಾರೆ ಊಟಕ್ಕೆ ಕುಳಿತಾಗ ಸಹ ಚೆನ್ನಾಗಿ ಒಂದು ಒಳ್ಳೆಯ ಮಾತನಾಡರು ! ಶರೀರವೂ ಒಂದು ವಿಧವಾಗಿ ಹೋಗಿದೆ. ಕೇಳಿದರೂ ನೆಟ್ಟಗೆ ಉತ್ತರ ಕೊಡುವದಿಲ್ಲ.'

'ಬಹುತರವಾಗಿ ಮೈಯಲ್ಲಿ ಜಾಡ್ಯವೆನಿಸಿರಬೇಕು. ಇನ್ನೊಮ್ಮೆ ನೆಟ್ಟಗೆ ಕೇಳಿ ನೋಡು.'

'ಯಾಕೆ ? ನೀನು ಮಾತಾಡುವದಿಲ್ಲವೋ ಏನು ?'

ಸುಧೆಯು ಈಸಲ ಏನೋ ಹೇಳಬೇಕೆಂದವಳು ಅದನ್ನು ನುಂಗಿ-ಕೊಂಡು, 'ನೀನು ಕೇಳಿದರೆ ತಪ್ಪೇನು ?' ಎಂದು ಸಹಜವಾಗಿ ಕೇಳಿದಳು.

'ಆಗಲಿ, ಕೇಳುವೆ.'

ಸಂಜೆಯಲ್ಲಿ ಮಾಳಿಗೆಯ ಮೇಲೆ ಕುಳಿತು ಸುಧೆಯು ಮತ್ತು ಸ್ನೇಹಳು ಹೀಗೆ ಆಲೋಚನೆ ಮಾಡುತ್ತಿದ್ದರು. ಪ್ರಭಾತನು ತೊಟ್ಟಿಲ ಹತ್ತಿರಿದ್ದನು.

ಬಿಂದು ಬಂದು ಕರೆದಳು, 'ಚಿಕ್ಕ ತಾಯಿ, ಧನಿಯರು ಕರೆಯುತ್ತಾರೆ.' ಸ್ನೇಹಳು ಹೇಳಿದಳು, 'ಇಲ್ಲಿಯೇ ಬರಹೇಳು.' ಒಡನೆಯೇ ಸುರೇಶನು ಬಂದದ್ದು ನೋಡಿ, 'ಏನು ಭಾಗ್ಯವೊ ! ಇಂದು ಮಾಳಿಗೆಯದೇ ಭಾಗ್ಯವೋ ಇಲ್ಲವೇ ನಮ್ಮದೇ ಭಾಗ್ಯವೋ!'

ಸುರೇಶನು ಸುಧೆಯನ್ನು ನೋಡಿ ಸ್ತಂಭಿತನಾಗಿ ನಿಂತನು. ಬಂದು ಬಿಟ್ಟಿದ್ದಾನೆ; ಇನ್ನು ತಿರುಗಿ ಹೋಗುವದು ಚೆನ್ನಾಗಿರುವದಿಲ್ಲ. ಅಗತ್ಯ ವಾಗಿ ತನ್ನ ಕಟ್ಟಿಟ್ಟ ಮೆಟ್ಟಿಗೆ ಮೆಲ್ಲಮೆಲ್ಲಗೆ ಹೋಗಿ ಕುಳಿತನು.

ಸುಧೆಯು ನಗೆಗೂಡಿ, 'ಇಂದು ಹಳೆಯ ನೆನಪು ಮನಸ್ಸಿನಲ್ಲಿ ಸುಳಿಯಿ ತೇನು ?' ಎಂದು ಕೇಳಿದಳು.

ಸುರೇಶನು, 'ಅದು ಹೇಗೆ ?' ಎಂದನು.

'ಮಾತುಕಥೆಯಾಡಲು ಇಚ್ಛೆಯಾಯಿತೋ ಇಲ್ಲವೇ ಏನಾದರೂ ಕೆಲಸದ ಮಾತಿರುವದೋ ?'

ಸುರೇಶನು ಜಡಿತ ಕಂಠದಲ್ಲಿ, 'ಕೆಲಸದ ಮಾತೇ ಒಂದುಂಟು' ಎಂದನು.

‘ ಹಾಗಾದರೆ ನಾನು ಬರುವೆ. ನೋಡುವಾ, ಪ್ರಭಾತನು ಏನು ಮಾಡುತ್ತಾನೆ. ’

ಸ್ನೇಹಳು ನಿಲ್ಲಿಸಿ ಹೇಳಿದಳು, ‘ ಅದೇನು ಅಕ್ಕ, ನೀವು ಇಂದು ಹೊಸ ಅಭಿನಯ ಮಾಡುವಿರಿ ! ನೀನು ಎದ್ದು ಹೋದ ಮೇಲೆ ಮಾತಾಗಬೇಕೆ ? ಹೇಳಬಹುದಲ್ಲ ಯಾವ ಮಾತು ? ಅಕ್ಕನು ಎದ್ದು ಹೋಗಬೇಕೆ ? ’

ಸುರೇಶನು ಸುಮ್ಮನಿದ್ದನು. ಸುಧೆಗೆ ಹೊಳೆಯಿತು. ಆದರೂ ಮಾತು ಕೇಳಿಕೊಳ್ಳುವ ಆದಮ್ಯ ಇಚ್ಛೆಯಿಂದ ಅವಳು ಏಳಲಿಲ್ಲ

ಸ್ನೇಹಳು ಮತ್ತೆ ಕೇಳಿದಳು, ‘ ಹೇಳಬಾರದೇ ಏನು ಮಾತು ? ನೀನು ಹೀಗೇಕಾಗಿರುವೆ ? ಮೈಯಲ್ಲಿ ಜಾಡ್ಯವೆ ? ’

ಸಂಕೋಚವನ್ನು ಸಾಧ್ಯವಾದಷ್ಟು ದೂರ ತಳ್ಳಿ ಸುರೇಶನು ಹೇಳಿದನು, ‘ ಹುಂ, ಶರೀರದಲ್ಲಿ ಏಕೊ ಅಷ್ಟು ನೆಟ್ಟಗೆನಿಸಲೊಲ್ಲದು. ಕೆಲವು ದಿನ ಪಡುವಣ ನಾಡಿಗೆ * ತಿರುಗಾಡಲು ಹೋಗಬೇಕೆಂದು ಬಹು ದಿನದಿಂದ ವಿಚಾರಿಸುತ್ತಿದ್ದೇನೆ. ನಡೆ, ಬರುವೆಯಾ ? ’

ಸ್ನೇಹಳು ಚಕಿತಳಾಗಿ ಕೇಳಿದಳು, ‘ ನಾನೊಬ್ಬಳೆ ?— ಅಕ್ಕ ಬರುವದಿಲ್ಲವೆ ? ’

ಸುರೇಶನು ಜಡಿತಕಂಠದಲ್ಲಿ ಹೇಳಿದನು, ‘ ಕಾಕಾ ಅನ್ನುತ್ತಾರೆ, ಎಲ್ಲರೂ ಹೋದರೆ ನಡೆಯುವದೆಂದು. ’

ಸ್ನೇಹಳು ಮಿಡುಕಿನ ದನಿಯಲ್ಲಿ, ‘ ಹಾಗಾದರೆ ನಾನು ಹೋಗುವದಿಲ್ಲ.’

ಸುಧೆಯು, ‘ ಇಲ್ಲವೇನು ? ಹೋಗು. ಪ್ರಭಾತನು ಇನ್ನೂ ನೆಟ್ಟಗಾಗಿ ಬರುತ್ತಾನೆ. ’

‘ ನೀನೊಬ್ಬಳೇ ಇರುವೆಯಾ ? ’

‘ ಒಬ್ಬಳೇ ಏಕೆ ? ಕಾಕಾ ಇರುವರಲ್ಲ. ’

‘ ಇಲ್ಲ ಅಕ್ಕ, ನೀನೂ ನಡೆ. ನೀನು ಬರದಿದ್ದರೆ ನಾನೊಬ್ಬಳೇ ಅವನನ್ನು ಜೋಪಾನವಾಗಿ ನೋಡಿಕೊಳ್ಳಬಲ್ಲೆನೆ ? ಅಲ್ಲದೆ ಅವರೂ ಹೇಗಾಗಿದ್ದಾರೆ ಎಂಬುದು ನಿನಗೆ ಗೊತ್ತು. ನಿನ್ನ ಕೈಯ ಜತನವು ಮೊದಲು ಬೇಕು. ’

ಸುಧೆಯು ಎದ್ದು, ‘ ಹುಚ್ಚಿ, ಅಲ್ಲದೇನು ! ನೀನು ಅವರನ್ನು

* ಬಂಗಾಲದ ಪಡುವಣ ನಾಡು– ಕಾಶಿ, ಗಯಾ, ಆಗ್ರಾ, ಅಲಹಾಬಾದ್ ಇತ್ಯಾದಿ.

ನೋಡಿಕೊ. ಸಂಸಾರ ನೋಡಿಕೊಳ್ಳುವವರೂ ಒಬ್ಬರು ಬೇಕಲ್ಲ ? ' ಎಂದು ಹೇಳಿ ಹೊರಟು ಹೋದಳು. ಸ್ನೇಹಳು ಮಿಡುಕಿನಿಂದ, ' ನೀನು ಅಕ್ಕನಿಗೆ ತುಸು ಒತ್ತಾಯಪಡಿಸು ' ಎಂದಳು.

ಸುರೇಶನು ಹೇಳಿದನು, ' ಹೆಚ್ಚಿನ ಗೊಂದಲದಲ್ಲಿ ನನಗೆ ಈಗ ಇಚ್ಛೆ ಇಲ್ಲ. ಯಾಕೆ ? ನಾನೂ ನೀನೂ ಅಷ್ಟೇ ಇರಲಾರೆವೇ ಸ್ನೇಹಾ ? ಕಲಕತ್ತೆ ಯಲ್ಲಿ ಇದ್ದಂತೆ ಈಗಲೂ ಮತ್ತೆ ನನ್ನ ಎಲ್ಲ ಮನವನ್ನು ಪ್ರಾಣವನ್ನು ನಿನ್ನ ಸುತ್ತು ತೊಡಕಿಸಿಕೊಂಡಿರಬೇಕೆನ್ನುತ್ತೇನೆ. ನಡೆ ಸ್ನೇಹಾ, ಇಲ್ಲಿಂದ ಓಡಿ ಹೋಗೋಣ. '

ಸ್ನೇಹಳು ವಿಸ್ಮಿತಳಾದಳು. ಸುರೇಶನ ತಲೆ ಕೆಟ್ಟಿದೆಯೆಂದು ಭಾವಿಸಿ-ದಳು. ಅವನ ಉಜ್ವಲ ನೇತ್ರಗಳನ್ನು ನೋಡಿ ಆ ಭಾವನೆಯು ದೃಢ-ವಾಯಿತು. ಹೆದರುತ್ತ ಹೇಳಿದಳು, ' ನಡೆ, ನೀನು ನೆಟ್ಟಗಿರುವಲ್ಲಿಯೋ ನಡೆ.'

ಮರುದಿನ ಒಬ್ಬನೇ ಒಬ್ಬ ಚಾಕರನನ್ನು ಒಬ್ಬಳೇ ಒಬ್ಬ ದಾಸಿಯನ್ನು ಕರೆದುಕೊಂಡು ಸುರೇಶನೂ ಸ್ನೇಹಳೂ ಪಡುವಣ ನಾಡಿಗೆ ಹವೆ ಬದಲಿಸ ಲೆಂದು ಹೊರಟರು. ಹೊರಡುವಾಗ ಸ್ನೇಹಳು ಅಳುತ್ತ ಕಂಠೊರೆಸುತ್ತ ' ಆಶೀರ್ವದಿಸು ಅಕ್ಕ, ಪ್ರಭಾತನೂ ಅವರೂ ನೆಟ್ಟಗಿರುವ ಹಾಗೆ ' ಎಂದಳು.

ಸುಧೆಯು ಸಸ್ನೇಹವಾಗಿ ಅವಳನ್ನೂ ಪ್ರಭಾತನನ್ನೂ ಚುಂಬಿಸಿದಳು. ಮನಸ್ಸಿನಲ್ಲಿಯೋ, ' ನನ್ನಿಂದ ನಿಮ್ಮ ಅಮಂಗಲ ಚಿಂತನೆಯು ಆದೆಂದೂ ಆಗದು ' ಎಂದುಕೊಂಡಳು. ಹೋಗಲು ಒಲ್ಲೆನೆಂದು ಹಟ ಹಿಡಿದು ಅಳು ತ್ತಿರುವ ಪ್ರಭಾತನ ಮುಖವು ಕಣ್ಮರೆಯಾಗುತ್ತಲೇ ಸುಧೆಯು ತನ್ನ ಕೋಣೆಯ ಒಳಹೊಕ್ಕು ಬಾಗಿಲನ್ನಿಕ್ಕಿಕೊಂಡಳು.

ಬಾಗಿಲು ತೆರೆದಾಗ ರಾತ್ರಿಯಾಗಿತ್ತು. ಸುತ್ತೂ ಕತ್ತಲೆ. ಅವಳೆದೆ-ಯಲ್ಲಿಯೂ ಕತ್ತಲೆಗವಿದುಹೋದಂತಿದೆ. ಒಳಗಾಗಲಿ ಹೊರಗಾಗಲಿ ತನ್ನೆ ದೆಯನ್ನು ತಂಗಿಸಬಹುದಾದ ಒಂದು ವಸ್ತುವೂ ಇಂದು ಅವಳಿಗೆ ದೊರೆಯು ತ್ತಿಲ್ಲವೆ ? ಇಲ್ಲ-ಇಲ್ಲ. ಅವಳ ಜೀವನವೆಲ್ಲ ಒಂದು ದೀರ್ಘವಾದ ವ್ಯಯದ ತಾಲಿಕೆಯನ್ನೇ ತೋರಿಸುವದಲ್ಲದೆ ಅಲ್ಲಿ ಆಯದ ಅಂಕಪಾತವೇ ಇಲ್ಲ.

೧೬

ಸುರೇಶನು ಮುಂಗೇರದಲ್ಲಿ ಸಕಲ ಸೌಕರ್ಯ ಸಜ್ಜಿತವಾದ ನಿವಾಸ ಒಂದನ್ನು ಗೊತ್ತುಮಾಡಿಕೊಂಡನು. ನಿಮ್ನದಲ್ಲಿ ಉತ್ತರ ವಾಹಿನೀ ಗಂಗೆ. ಸಮ್ಮುಖದಲ್ಲಿ ಸುಂದರವಾದ ಒಂದು ಪುಷ್ಪವಾಟಿಕೆ. ಜೀವನದ ಆ ನವಾಗತ ದುಶ್ಚಿಂತೆಯನ್ನು ಹಿಂದೆ ಒಂದು ದೂರದ ಹಳ್ಳಿಯಲ್ಲಿ ಬಿಟ್ಟು ರೆಕ್ಕೆಗೆದರಿದ ಹಕ್ಕಿಯ ಹಾಗೆ ಬಿಚ್ಚಾಗಿ ಬೀಸಾಗಿ ಹಾರಾಡುತ್ತಿದೆ ಅವನ ಮನಸ್ಸು. ನಸುಕಿನಲ್ಲಿ ಸುರೇಶನು ಅತಿ ಸ್ಫೂರ್ತಿಯಿಂದ ಗಂಗಾವಕ್ಷದಲ್ಲಿ ತರಂಗಗಳನ್ನೇಳಿಸಿ ಬೀಳಿಸಿ ಈಸುವನು. ಸಂಜೆಯಲ್ಲಿ ಸ್ನೇಹಾ ಪ್ರಭಾತರೊಡನೆ ಪೀರ್‌ಪಹಾಡ್, ಸೀತಾಕುಂಡ, ಕರಣಚೌದಾ, ಫೋರ್ಟ್ ಮೊದಲಾದವುಗಳನ್ನು ನೋಡಿ-ಕೊಂಡು ತಿರುಗಾಡುವನು. ಹೊಸ ಸ್ಥಳಕ್ಕೆ ಬಂದು ಪತಿಯು ಮೊದಲಿನಂತೆ ಅರಳಿಕೊಂಡಿರುವದನ್ನು ನೋಡಿ ಸ್ನೇಹಳು ಸಹ ಆನಂದಿತಳಾದಳು. ಹೆಚ್ಚಿನ ಆರೈಕೆ ಮಾಡಲಾಗದಿದ್ದರೂ ಸ್ಥಾನಗುಣದಿಂದ ಪ್ರಭಾತನ ಮೈ ತುಂಬಿ ಬರುತ್ತಲಿತ್ತು. ಸ್ನೇಹಳು ಸುಧೆಗೆ ಪತ್ರ ಬರೆದು ಇದನ್ನೆಲ್ಲ ತಿಳಿಸಿದಳು; ಅಲ್ಲದೇ ಕಾರ್ಯವ್ಯಾಪದಲ್ಲಿ ತುಸು ಅನುವು ದೊರೆಯುತ್ತಲೇ ಯಾರೊಡನೆ ಆದರೂ ಬೇಗ ಬಂದುಬಿಡುವದಾಗಿಯೂ ಇಲ್ಲದೆ ಹೋದರೆ ತಾನು ಬಹಳ ಸಿಟ್ಟಾಗುವದಾಗಿಯೂ ಬರೆದು ಹೇಳಿದಳು ಸುಧೆಯು ಇದಕ್ಕೆ ಉತ್ತರವಾಗಿ ಬರೆದಳು, ' ಕಾರ್ಯವ್ಯಾಪದಲ್ಲಿ ಅನುವಾಗಿಲ್ಲ. ಬೇಗ ಆಗುವ ಆಶೆಯೂ ಇಲ್ಲ. ಆದ್ದರಿಂದ ಬರುವದು ಸಾಧ್ಯವಿಲ್ಲ. ಸಿಟ್ಟಾಗಬಾರದು. ಸ್ನೇಹಾ, ಪ್ರಭಾತನನ್ನು ಜೋಪಾನವಾಗಿ ನೋಡಿಕೊಳ್ಳಲಿ ' ಇತ್ಯಾದಿ. ಕೆಲದಿನವಾದ ಮೇಲೆ ಸ್ನೇಹಳು ಸುರೇಶನಿಗೆ ಕೇಳಿದಳು, ' ಊರಿಗೆ ಎಂದು ಹೋಗುವದು ? ' ಎಂದು.

' ಈಗಲೇ ? '

' ಹಾಗಾದರೆ ಇನ್ನೆಷ್ಟು ದಿನಗಳ ಮೇಲೆ ? '

' ಇಚ್ಛೆಯಾದಂದು. '

' ಬೇಡ. ನನಗೆ ನೆಟ್ಟಗೆನಿಸಲೊಲ್ಲದು, ಊರಿಗೆ ನಡೆ. '

' ಇನ್ನು ಕೆಲದಿನ ಹೋಗಲಿ. ನನ್ನ ಹಣೆ ಮುಟ್ಟಿ ನೋಡು ಸ್ನೇಹಾ ?'

ಸ್ನೇಹಳು ಪತಿಯ ಹಣೆ ಮುಟ್ಟಿನೋಡಿ, ' ಇದೇನು, ಜ್ವರ ಬಂದಂತಿದೆ? ಯಾಕೆ ? ಗಂಗೆಯಲ್ಲಿ ಅಷ್ಟೊಂದು ಸ್ನಾನಮಾಡುವೆಯೆಂದೆ ? '

' ಅದೇ ಅನ್ನುತ್ತೇನೆ ! ಜ್ವರ ಬರುವದೆಂದು ತಿಳಿದಿದ್ದೇನೆ. ತಲೆ ಟಣಟಣ ಹೊಡೆಯುತ್ತಿದೆ. ರಾತ್ರಿ ಉಣ್ಣುವದಿಲ್ಲ. ನೀನು ಪ್ರಭಾತನನ್ನು ಸಾವಧಾನವಾಗಿ ನೋಡಿಕೊ. '

ಮರುದಿನ ಸುರೇಶನು ಜ್ವರವನ್ನು ಅಳೆದುಕೊಂಡು ನೋಡಿದನು- ೧೦೪ ಡಿಗ್ರಿ. ಮೈಯೆಲ್ಲ ನೋವು. ಮಸ್ತಕಶೂಲೆಯೂ ಅತಿರಿಕ್ತವಿದೆ. ಸುರೇಶನು ಸ್ನೇಹಳಿಗೆ ' ಇದೇಕೋ ಒಳ್ಳೇ ಲಕ್ಷಣ ತೋರುವದಿಲ್ಲ ಸ್ನೇಹಾ. ಡಾಕ್ಟರರನ್ನು ಕರೆಕಳುಹು. ಮನೆಗೆ ತಂತಿ ಕಳಿಸಿಬಿಡು, ಕಾಕಾ ಬರಲಿ ! ವಿದೇಶ, ನೀನೊಬ್ಬಳೇ--' ಎಂದನು.

ಸ್ನೇಹಳು ಅಳುತ್ತ 'ಇನ್ನೇನು ಗತಿ? ಅಕ್ಕನನ್ನು ಯಾಕೆ ಸಂಗಡ ಕರೆತರಲಿಲ್ಲ ? ಪ್ರಭಾತನ ಮೈಯೂ ಬಿಸಿಯಾದಂತೆ ತೋರುತ್ತದೆ ' ಎಂದಳು.

' ಹಾಂ ! ಪ್ರಭಾತನ ಮೈಯೂ ಬಿಸಿಯೆ ? --ನೀನೊಬ್ಬಳೇ ಏನು ಮಾಡುವೆ ? '

' ತಂತಿ ಕಳಿಸಿಬಿಡೋಣ, ಅಕ್ಕ ಬೇಗ ಬಂದುಬಿಡಲಿ. '

ಸುರೇಶನು ಆವೇಶದಿಂದ ಹೇಳಿದನು, ' ಬೇಡ-ಬೇಡ ! '

ಬೆರಗಾದ ಸ್ನೇಹಳು ಪತಿಯ ಕೆಂಪೇರಿದ ಮುಖದ ಕಡೆಗೆ ನೋಡುತ್ತ, ' ಹೀಗೇನು ಹೇಳುವೆ? ಅಕ್ಕ ಬರದಿದ್ದರೆ ಈ ಸಂಕಟದಿಂದ ಪಾರಾಗುವ ಬಗೆ ಹೇಗೆ ? ಈಗಲೇ ಅವಳಿಗೆ ತಂತಿ ಕಳಿಸುವೆ--' ಎಂದಳು.

' ಬೇಡ ಸ್ನೇಹಾ, ಬೇಡ-! ನೀನು ನನ್ನನ್ನು ನೋಡಿಕೊಳ್ಳಲಾರೆಯಾ ? ಮನಸ್ಸಿನಲ್ಲಿ ಸಾಹಸ ತಂದುಕೊ. ಆಗದೇ ಏನು ? ಕಾಕಾ ಅವರಿಗೆ ತಿಳಿಸು, ಅವರು ಬರಲಿ. '

' ಹಾಗೇ ಆಗಲಿ. ನೀನಿನ್ನು ಹರಟಬೇಡ. '

' ಹರಟಬೇಕೆಂದರೂ ಆಗುವದೆಲ್ಲಿ ? ತಲೆಯೆಲ್ಲ ಗೊಂದಲಗೆಡುತ್ತಿದೆ.'

ಡಾಕ್ಟರನು ಬಂದು ನೋಡಿ ಹೇಳಿದನು, ' ಟ್ಯಾಫ್ಯಾಡಿನ ಬೀಜವು ಶರೀರದಲ್ಲಿತ್ತು. ಅನಿಯಮದ ಮೂಲಕ ಆಕ್ರಮಣಕ್ಕೆ ಅನುಕೂಲ ದೊರೆತಿದೆ. ಬಹಳ ಸಾವಧಾನದಿಂದಿರಬೇಕಾಗುವದು. ಚಿಂತೆಯ ಕಾರಣ-ವಿಲ್ಲ ' ಇತ್ಯಾದಿ. ಸುರೇಶನು ಆಗ ಜ್ಞಾನರಹಿತನು. ಇರುಳು ಕಳೆಯಿತು.

ಇರುಳೆಲ್ಲ, ಹಗಲೆಲ್ಲ ಸ್ನೇಹಳು ಅವನ ಬದಿಗಿದ್ದು ತಲೆಗೆ ಮಂಜನ್ನೂ ಓ-ಡಿ-ಕೋಲನ್ನೂ ಹಾಕುತ್ತಿದ್ದಳು. ಪ್ರಭಾತನೂ ಕಸಿವಿಸಿಪಡುತ್ತ ದಾಸಿಯ ತೊಡೆಯ ಮೇಲೆ ಆಳುತ್ತಿದ್ದನು. ಸ್ನೇಹಳು ನಡುನಡುವೆ ಅವನನ್ನೂ ಮಡಲಲ್ಲಿ ತೆಗೆದುಕೊಳ್ಳುತ್ತಿದ್ದಳು. ಸ್ನೇಹಳು ಪರದೇಶದಲ್ಲಿ ಒಬ್ಬಳೇ; ಆಕುಲ ಮನಸ್ಸಿನಿಂದ ದೇವರನ್ನು ಕರೆಕರೆದು ಬೇಡಿಕೊಳ್ಳುತ್ತಲಿದ್ದಳು.

ಆ ಇರುಳೂ ಕಳೆಯಿತು. ದುಶ್ಚಿಂತೆಯಿಂದ ಎರಡು ದಿನಗಳಲ್ಲಿಯೇ ಸ್ನೇಹಳು ಬಹುದಿನದ ರೋಗಿಯ ಹಾಗೆ ಕಾಣಿಸಿಕೊಂಡಳು. ೮ ಗಂಟೆಯ ಸುಮಾರಕ್ಕೆ ಹೊರಗೆ ಬಾಗಿಲದಲ್ಲಿ ಗಾಡಿಯ ಶಬ್ದವಾಗಲು ಸ್ನೇಹಳು ಓಡಿ-ಹೋಗಿ 'ಅಕ್ಕ' ಎಂದು ಕರೆದಳು. ಆದರೆ ದಿವಾಣನನ್ನು ನೋಡಿ ಮುಖದ ಮೇಲೆ ಸೆರಗೆಳೆದುಕೊಂಡು ಸರಿದು ಬಂದಳು. ದಿವಾಣನ ಒಂದಿನಿಂದ ಸುಧೆಯು ಗಾಡಿಯಿಂದ ಇಳಿದು ಅವಳ ಹತ್ತಿರ ಬರಲು ಸ್ನೇಹಳು ಮತ್ತೆ ಉಚ್ಛ್ವಸಿತಕಂಠದಿಂದ 'ಅಕ್ಕ!' ಎಂದಳು. ಸುಧೆಯು ಅವಳನ್ನು ಅಷ್ಟಕ್ಕೇ ತಡೆದು, 'ಹಾಸಿಗೆಯಲ್ಲಿ ಒಬ್ಬರನ್ನೇ ಬಿಟ್ಟು ಬಂದೆಯೇಕೆ?'

'ಒಬ್ಬರೇ ಇಲ್ಲ, ಪರಿಚಾರಿಕೆ ಇದ್ದಾಳೆ.'

'ಪ್ರಭಾತನು ಹೇಗಿದ್ದಾನೆ?'

'ನೆಟ್ಟಗಿದ್ದಾನೆ.'

ದಿವಾಣನು ರೋಗಿಯ ಕೋಣೆಯಲ್ಲಿ ಹೊಕ್ಕನು. ಸ್ನೇಹಳು ಸುಧೆ-ಯನ್ನು ಅಪ್ಪಿಕೊಂಡು ರುದ್ಧಸ್ವರದಲ್ಲಿ, 'ಇನ್ನೇನು ಗತಿ ಅಕ್ಕಾ!' ಎಂದಳು.

'ಭಯವೇತರದು ಸ್ನೇಹಾ? ಬಾ, ಹೇಗಿದ್ದಾರೆ ನೋಡುವಾ.'

ಇಬ್ಬರೂ ನೋಡಹೋದರು. ದಿವಾಣನು ಸುರೇಶನ ಹತ್ತಿರ ಕುಳಿತು 'ಸುರೇಶ' ಎಂದು ಕರೆದನು.

ಬೆಳಿಗ್ಗೆ ತುಸು ಹಗುರಾಗಿತ್ತು. ದಿವಾಣನ ಕರೆಗೆ ಸುರೇಶನು ಕಣ್ತೆರೆದು, 'ಕಾಕಾ? ಬಂದಿರಾ? ಸ್ನೇಹಾ ತಂತಿ ಕಳಿಸಿದ್ದಳೆ?' ಎಂದನು.

'ಹುಂ, ಈಗ ಹೇಗಿರುವೆ ಸುರೇಶ?'

'ತಲೆಯಲ್ಲಿ ಬಹಳ ಶೂಲೆ. ಮಾತಾಡಲು ಕಷ್ಟವೆನಿಸುವದು.'

ಸುರೇಶನು ತುಸು ಮಲಗಲು ದಿವಾಣನು ಪರಿಚಾರಕನಿಗೆ ಡಾಕ್ಟರನನ್ನು ಕರೆಯ ಹೇಳಿ ಹೊರಗೆ ಹೋಗಿ ಕುಳಿತನು. ಸುರೇಶನು ನೀರು ಬೇಡಲು, ಸುಧೆಯು ಹತ್ತಿರ ಹೋಗಿ ಕೊಟ್ಟಳು; ಮತ್ತು ಹಣೆಯನ್ನು ಮುಟ್ಟಿ ಜ್ವರದ

ಉತ್ತಾಪವನ್ನು ನೋಡಿದಳು. ಆಮೇಲೆ ಸ್ನೇಹಳಿಗೆ ಮೆಲುದನಿಯಲ್ಲಿ, ' ನೀನು ಏನಾದರೂ ತಿಂದು ತುಸು ಮಲಗಿಕೊ, ನಾನಿರುತ್ತೇನೆ ' ಎಂದಳು.

' ನೀನು ? ಇನ್ನೂ ಮೈ ತೊಳೆದಿಲ್ಲ. ಬಾಯಲ್ಲಿ ನೀರು ಸಹ ಹಾಕಿಲ್ಲ ಅಕ್ಕ ! '

' ನಾನು ನನ್ನ ಹೊತ್ತರಿತು ಎಲ್ಲ ಸರಿಪಡಿಸಿಕೊಳ್ಳುವೆ. ಬಿಂದಿ ಬಂದಿದ್ದಾಳೆ. ಅವಳಿಗೆ ಕಾಕಾ ಅವರ ಸ್ನಾನದ ಹಾಗೂ ಊಟದ ಏರ್ಪಾಡು ಮಾಡಲು ಹೇಳು. ನಿನ್ನ ಕಂಣು ಮುಖ ನೋಡಿ ಎನಿಸುತ್ತದೆ—ತುಸು ಮಲಗದಿದ್ದರೆ ನಿನಗೆ ನಿಲ್ಲಲೂ ಬಾರದೆಂದು. ನೀನು ತುಸು ಮಲಗು ಹೋಗು.'

ಸ್ನೇಹಳು ಹೊರಟು ಹೋದಳು. ಸುರೇಶನು ನಡುನಡುವೆ ಕಸವಿಸಿಯಿಂದ ಚಡಪಡಿಸುತ್ತಿದ್ದನು. ಸುಧೆಯು ಕೇಳಿದಳು, ' ತಲೆ ಒತ್ತಲೇನು ? '

' ಯಾರು ? '— ಎಂದು ಸುರೇಶನು ಚಮಕಿತನಾಗಿ ನೋಡಿದನು. ' ನೀನು ? ಯಾವಾಗ ಬಂದೆ ? ' ಎಂದು ಬೆರಗಾಗಿ ಕೇಳಿದನು.

' ಕಾಕಾ ಅವರೊಡನೆ ಬಂದಿದ್ದೇನೆ. ?

' ಕಾಕಾ ಅವರೊಡನೆ ? ಎಲ್ಲಿ—ಕಾಣಲಿಲ್ಲ. ' ಸುಧೆಯು ಉತ್ತರ ಕೊಡಲಿಲ್ಲ. ಒಂದು ಬಗೆಯ ಉತ್ತೇಜನದ ಆಕಸ್ಮಿಕ ಆಘಾತವು ಕಡಿಮೆಯಾದ ಮೇಲೆ ನಿಶ್ಚಿಂತ ಶಾಂತ ಛಾಯೆಯು ಸುರೇಶನ ರುಗ್ಣಮುಖದ ಮೇಲೆ ಮೂಡುತ್ತಲಿತ್ತು. ಆ ಮೇಲೆ, ' ನೀನು ಬರಲಿಕ್ಕಿಲ್ಲವೆಂದು ಎನಿಸಿತ್ತು ' ಎಂದನು.

' ಯಾಕೆ ? '

ಸುರೇಶನು ಉತ್ತರ ಕೊಡಲಿಲ್ಲ. ಆದರೆ ಸುಧೆಯನ್ನು ನೋಡಿ ಅವನ ಪ್ರಾಣಕ್ಕೆ ಆಶೆಯು ಉದಯವಾದಂತಾಗಿತ್ತು. ಅದನ್ನು ಹತ್ತಿಕ್ಕಿಕೊಳ್ಳಲು ಆಗದೆ, ' ಸ್ನೇಹಾ ನಿನ್ನನ್ನು ನೋಡಿರುವಳೆ ? ' ಎಂದು ಕೇಳಿದನು.

' ಹುಂ. '

' ನೀನು ಕುಳಿತು ಎಷ್ಟು ಹೊತ್ತಾಯಿತು ? '

' ಬಹಳ ಹೊತ್ತಾಗಿಲ್ಲ. '

ಸುರೇಶನು ಕಂಣು ಮುಚ್ಚಿಕೊಂಡು ತನ್ನಷ್ಟಕ್ಕೆ ತಾನು ಮೆಲ್ಲಗೆ ಹೇಳಿಕೊಂಡನು, ' ಬೇಗ ನೆಟ್ಟಗಾಗಿ ಎದ್ದು ಕೂಡುವೆನೆಂದು ಎನಿಸುತ್ತದೆ. ' ಸುಧೆಯು ಉತ್ತರ ಕೊಡಲಿಲ್ಲ. ಸುಮ್ಮನೆ ತಲೆ ತಟ್ಟತೊಡಗಿದಳು ಮಾತ್ರ.

ಡಾಕ್ಟರನು ಬಂದು ಹೇಳಿದನು, ‘ ಹೆದರುವ ಕಾರಣವಿಲ್ಲ. ಆದರೆ ಈ ಜ್ವರದ ರೀತಿ ನೋಡಿದರೆ ತುಸು ಗೋಳಾಡಿಸಬಹುದು. ೨೧-೨೨ ದಿನಕ್ಕೆ ಮುನ್ನ ಜ್ವರ ಇಳಿಯಲಿಕ್ಕೂ ಇಲ್ಲ. ಆರೈಕೆ ಬಹಳಾಗಬೇಕು. ಹೊತ್ತು ಹೊತ್ತಿಗೆ ಔಷಧ ಬೀಳುತ್ತಿರಲಿ. ನಿಯಮಿತವಾಗಿ ಪಥ್ಯ ಕೊಡುತ್ತಿರಬೇಕು. ’

ದಿವಾಣನು, ‘ ಆ ಬಗ್ಗೆ ತಾವು ಚಿಂತಿಸಬೇಡಿರಿ ’ ಎಂದನು.

ಕೆಲ ದಿನ ರೋಗವು ಹೆಚ್ಚುತ್ತಲೇ ಹೋಯಿತು. ಜ್ವರದ ಉತ್ತಾಪವು ಒಂದು ಡಿಗ್ರಿ ಕಡಿಮೆಯಾದರೆ ಎರಡು ಡಿಗ್ರಿ ಮತ್ತೆ ಏರಿ ಹೋಗುವದು. ಮೈಯಲ್ಲಿ ನೋವು ತಾಳಲಾರದಷ್ಟು. ನಿದ್ದೆ ಹಗಲೂ ಇಲ್ಲ ರಾತ್ರಿಯೂ ಇಲ್ಲ. ಯಾತನೆಯ ಕ್ಲಾಂತಿ ಮೂಲಕವಾಗಿ ಒಂದು ವಿಧವಾದ ತಂದ್ರಾಮೋಹವು ರೋಗಿಯನ್ನು ಆವರಿಸುವದು. ಸುಧೆಯು — ತನ್ನ ಸ್ವಭಾವಕ್ಕನುಸರಿಸಿ, ನಿದ್ದೆ ನೀರಡಿಕೆಯೆನ್ನದೇ ರೋಗಿಯ ಆರೈಕೆಯಲ್ಲಿ ಹಗಲಿರುಳೂ ತೊಡಗಿ ಕೊಂಡಳು. ಸ್ನೇಹಳಿಗೆ ಪ್ರಭಾತನನ್ನು ನೋಡಿಕೊಂಡಿರಲು ಹೇಳಿದಳು. ಬಿಂದಿಯು ಇನ್ನೆಲ್ಲರ ಪರಾಮರಿಕೆಯಲ್ಲಿ

ಮಧ್ಯರಾತ್ರಿ. ದಿನವೆಲ್ಲ ಸುಧೆಗೆ ಸಹಾಯಮಾಡಿ ದಣಿದು ದಿವಾಣನು ಇನ್ನೊಂದು ಕೋಣೆಗೆ ಹೋಗಿ ಮಲಗಿಕೊಂಡನು. ಹೊರಗೆ ಊಳಿಗದವನ ಕೈಯಲ್ಲಿ ತೂಗುಬೀಸಣಿಕೆಯ ದಾರವು ಶಿಥಿಲವಾಗುತ್ತ ನಡೆದಿದೆ. ಸುಧೆಯು ಗೋಡೆಗೆ ಆತುಕೊಂಡು ನೀರವಳಾಗಿ ಸುರೇಶನ ಮುಖದ ಹತ್ತಿರ ಕುಳಿತು-ಕೊಂಡಿದ್ದಾಳೆ. ಕೋಣೆಯಲ್ಲಿ ಗಡಿಯಾರದ ಟಿಕ್-ಟಿಕ್ ಧ್ವನಿಯೊಂದೇ ಗಭೀರ ನಿಸ್ತಬ್ಧತೆಯನ್ನು ಭಂಗಗೊಳಿಸುತ್ತಿದೆ. ಮಗ್ಗುಲಿನ ಕೋಣೆಯಲ್ಲಿ ಪ್ರಭಾತನು ಇಷ್ಟುಹೊತ್ತು ಹಟಹಿಡಿದು ಸ್ನೇಹಳನ್ನು ಗೋಳಾಡಿಸಿಬಿಟ್ಟಿದ್ದನು. ಈಗ ಅವರೂ ನೀರವವಾಗಿದ್ದಾರೆ. ಸುಧೆಯು ಸುಮ್ಮನೆ ಕುಳಿತು ಏನೇನನ್ನೋ ಯೋಚಿಸುತ್ತಿದ್ದಳು. ಆವಳ ನೋತ ಕಂಣುಗಳು ಮಬ್ಬು-ಗೊಂಡು ತೂಗತೊಡಗಿವೆ. ಬೆರಗುವಡೆದು ಮತ್ತೆ ಅರಳಿಕೊಳ್ಳುತ್ತಲೇ ರೋಗಿಯ ಕಾದತಲೆಯ ಮೇಲೆ ಕೈಯಾಡಿಸಿ ಕಂಣೊರೆಸಿ ಅವಳು ಗಡಿಯಾರದ ಕಡೆಗೆ ನೋಡುತ್ತಾಳೆ, ನಡುನಡುವೆ ಔಷಧ ಹಾಕುವ ಹೊತ್ತಾ-ಯಿತೋ ಹೇಗೆಂದು.

ಒಮ್ಮೆಂದೊಮ್ಮೆ ಒಂದು ಶಬ್ದ ಕೇಳಿ ಸುಧೆಯ ಮಬ್ಬಿನ ಪರೆಯು ಹರಿದುಹೋಯಿತು. ನೋಡುತ್ತಾಳೆ—ಸುರೇಶನು ಹಾಸಿಗೆಯ ಮೇಲೆ ಎದ್ದು ಕುಳಿತಿದ್ದಾನೆ. ವಿಚಲಿತವಾಗಿ ಸುಧೆಯು ರೋಗಿಯ ತೋಳುಗಳೆರಡನ್ನೂ

ಎರಡೂ ಕೈಗಳಿಂದ ಹಿಡಿದು ತಡೆದು, ‘ ಇದೇನು ? ಎಲ್ಲಿಗೆ ಹೋಗ-ಬೇಕೆನ್ನುವೆ ? ’ ಎಂದಳು.

ಸುರೇಶನು ಜಡಿತಸ್ವರದಲ್ಲಿ ಎಂದನು, ‘ ಗಂಗೆಯಲ್ಲಿ ಈಸುವೆ, ಬಿಟ್ಟು ಬಿಡು ಸ್ನೇಹಾ ! ’

‘ ಮಲಗು, ಮಲಗು. ತಲೆಯ ಮೇಲೆ ಮಂಜು ಇಡುತ್ತೇನೆ; ಗಾಳಿ ಹಾಕುತ್ತೇನೆ; ಮೈ ತಂಪಾಗುವದು ಈಗಲೇ; ಮಲಗು. ’

‘ ಮಂಜು ? ಗಾಳಿ ? ಬೇಡ. ಗಂಗೆಯಲ್ಲಿ ಈಸುವೆ ಬಿಡು. ’ ತಡೆ-ಗಟ್ಟಲ್ಪಟ್ಟದ್ದರಿಂದ ಸುರೇಶನು ಅತ್ಯಂತ ಉತ್ತೇಜಿತನಾಗಿ, ‘ ಸ್ನೇಹಾ— ಬಿಡು, ಬಿಡು, ಬಿಡು ಎನ್ನುತ್ತೇನೆ— ನನ್ನನ್ನು ತಡೆಯುವೆಯಾ ? ನಿನಗೆ ಇಂದು ಏನಾಗಿದೆ ? ’

‘ ನಿನಗೆ ಏನಾಗಿದೆ ? ನನ್ನಮಾತು ಕೇಳಲೊಲ್ಲೆಯೇಕೆ ? ಸ್ನೇಹಾ ಯಾರಿಗೆನ್ನುವೆ ? ’

‘ ಯಾಕೆ ನಿನಗೆ ? ಹಾಗಾದರೆ ನೀನು ಯಾರು ? ಯಾರು ನೀನು ? ’

ಸುಧೆಯು ಮಾತಿಲ್ಲದೆ ಈಗ ಸುಮ್ಮನೆ ಅವನನ್ನು ನೋಡುತ್ತ ತಡೆದು ಹಿಡಿಯತೊಡಗಿದಳು. ಸುರೇಶನು ಉಸುರಾಡಿಸಿಕೊಂಡು ಮತ್ತೆ ಬಡಬಡಿಸ ತೊಡಗಿದನು, ‘ ನೀನು ? ನನ್ನ ರೋಗಶಯ್ಯೆಯ ಬಳಿಯೂ ಮತ್ತೆ ನೀನೆ ! ನೀನು ನಿನ್ನ ಸೇವೆಯಿಂದ, ಆರೈಕೆಯಿಂದ ನನ್ನನ್ನು ನೆಟ್ಟಗೆ ಮಾಡಲು ಬಂದೆಯಾ ? ಆದರೆ ಅದೇಕೆ ಈ ಸೇವೆ ಸಲ್ಲಿಸುವೆ ? ನಾನಾದರೂ ಯಾವ ಅಧಿಕಾರದಿಂದ ಈ ಸೇವೆಯನ್ನು ಕೊಳ್ಳಲಿ— ? ’ ಸುಧೆಯು ಬಲವಾಗಿ ಅವನನ್ನು ಹಿಡಿದು ಹಾಸಿಗೆಯಲ್ಲಿ ಮಲಗಿಸಿ ಒಂದು ಕೈಯಿಂದ ಮಂಜಿನ ಚೀಲವನ್ನು ಅವನ ತಲೆಯ ಮೇಲಿಟ್ಟು ಇನ್ನೊಂದರಿಂದ ಸವೇಗವಾಗಿ ಗಾಳಿ ಬೀಸತೊಡಗಿದಳು. ಒಂದು ಕ್ಷಣ ಕಣ್ಣು ಮುಚ್ಚಿದ್ದು ಸುರೇಶನು ಮೃದುಮೃದುವಾಗಿ ಹೇಳತೊಡಗಿದನು, ‘ ಸ್ನೇಹಾ— ಸ್ನೇಹಾ— ಬಾ ನನ್ನಬಳಿಗೆ—ಗಾಳಿ ಹಾಕು, ಹತ್ತಿರ ಕುಳಿತುಕೋ. ಛೀ— ನಿನಗೆ ಎಳ್ಳಷ್ಟೂ ಬುದ್ಧಿಯಿಲ್ಲವೇ ಸ್ನೇಹಾ ? ಯಾರಿಂದ ಈ ಸೇವೆ ಸಲ್ಲಿಸಿಕೊಳ್ಳಹಚ್ಚಿರುವೆ— ನೀನೂ ಸಲ್ಲಿಸಿಕೊಳ್ಳುತ್ತಿರುವೆ ? ತಿಳಿಯುವದಿಲ್ಲವೇ ನಿನಗೆ ? ಯಾರಿಗೆ ಏನನ್ನೂ ನಾನು ಹುಟ್ಟಿಸಿಲ್ಲವೊ, ಯಾರ ಬಳಿ ನಾನು ಅತ್ಯಂತ— ಸ್ನೇಹಾ— ಸ್ನೇಹಾ, ನನ್ನ ಋಣವನ್ನು ಇನ್ನು ಹೆಚ್ಚಿಸಬೇಡ ಸ್ನೇಹಾ, ನೀನೇ ನನ್ನ ಆರೈಕೆ ಮಾಡು— ನೀನೇ ಬಾ. ’

ಸುಧೆಯು ಬಾಗಿಲ ಕಡೆಗೆ ನೋಡಿದಳು. ಅವಳು ಯಾವುದಕ್ಕೆ ಹೆದರಿಕೊಂಡಿದ್ದಳೋ ಅದೇ ಘಟಿಸಿದೆ. ಸುರೇಶನ ಉತ್ತೇಜಿತ ಕಂಠಕ್ಕೆ ಎಚ್ಚೆತ್ತು ಸ್ನೇಹಳು ಬಾಗಿಲ ವರೆಗೆ ಬಂದು ಅಲ್ಲಿಯೇ ಅಚಲಳಾಗಿ ನಿಂತು-ಬಿಟ್ಟಿದ್ದಾಳೆ. ಸುಧೆಯು ಲಜ್ಜಿತಳಾಗಿ ಸ್ನೇಹಳ ಕಡೆಗೆ ನೋಡಲಾರದೇ ತಲೆ ಕೆಳಗೆ ಹಾಕಿದಳು. ಸುರೇಶನು ನಿಸ್ತೇಜನಾಗಿ ಸುಮ್ಮನಾದನು. ಸುಧೆಯು ಮತ್ತೆ ಬಾಗಿಲ ಕಡೆಗೆ ನೋಡಿದಾಗಲೂ ಸ್ನೇಹಳು ಹಾಗೇ ಮುಖ ಕೆಳಗೆ ಹಾಕಿ ನಿಂತಿದ್ದಾಳೆ.

ಸುಧೆಯು ಮೃದುಸ್ವರದಲ್ಲಿ ಕರೆದಳು, 'ಸ್ನೇಹಾ?' ಸ್ನೇಹಳು ಮೆತ್ತಗೆ ಒಳಗೆ ಬಂದು ಸುಧೆಯ ಹಿಂದೆ ನಿಂತಳು. ಸುಧೆಯು ಕೇಳಿದಳು, 'ಪ್ರಭಾತನು ಮತ್ತೆ ಅತ್ತಿಲ್ಲವಷ್ಟೆ? ಮಲಗಿರುವನೆ?'

'ಹುಂ.'

'ಉಃ! ಈಗ ಅದೆಷ್ಟು ಹೆದರಿದ್ದೆನೆಂದೆ ಸ್ನೇಹಾ!'

'ರೋಗವು ಹಾಗಾದರೆ ಬಹಳ ಹೆಚ್ಚಾಗಿ ಹೋಗಿದೆಯೇ ಅಕ್ಕ? ಇಲ್ಲದಿದ್ದರೆ ನಿನಗೆ ಯಾಕೆ ಹೀಗೆ ಇಷ್ಟು—' ಎಂದು ಹೇಳುತ್ತ ನಾಚಿಕೊಂಡು ಸ್ನೇಹಳು ತಲೆತಗ್ಗಿಸಿಕೊಂಡಳು.

ಸುಧೆಯು ಅವಳಿಗೆ ಧೈರ್ಯ ಕೊಟ್ಟು ಹೇಳಿದಳು, 'ಬಹಳ ಹೊತ್ತಿನ ವರೆಗೆ ತಲೆಗೆ ಮಂಜು ಹಚ್ಚಿರಲಿಲ್ಲ. ಎಂದೇ ತಲೆ ಬಹಳ ಕಾದು ಬಡಬಡಿಕೆಯಾಗಿರಬೇಕು ಅಷ್ಟೆ.' ಆ ಕೋಣೆಯಲ್ಲಿ ಪ್ರಭಾತನು ಅತ್ತ ಧ್ವನಿ ಕೇಳಿಸಲು ಸುಧೆಯು ಮೆಲ್ಲಗೆ ಹೇಳಿದಳು, 'ಸ್ನೇಹಾ, ನೀನೇ ತುಸು ಗಾಳಿ ಹಾಕುತ್ತಿರು. ನಾನು ಹೋಗಿ ಅವನನ್ನು ರಮಿಸಿ ಬರುತ್ತೇನೆ.' ಸ್ನೇಹಳು, ಪಠಾತ್ತಾಗಿ ಅನಿರೀಕ್ಷಿತವಾದ ಆಘಾತದಿಂದ ವ್ಯಥಿತಳಾಗಿ, 'ಅಕ್ಕ, ಅವರ ಈ ಸಮಯದ ಮಾತಿಗೂ ಕಿವಿಗೊಡುವೆಯಾ?' ಎಂದಳು.

. ಸ್ನೇಹಳ ವ್ಯಾಕುಲ ಕಂಠದಿಂದ ಸುಧೆಯು ಚೇತರಿಸಿಕೊಂಡು, ತನ್ನ ಮನಸ್ಸಿನ ದುರ್ಬಲತೆಯನ್ನು ಗೆದ್ದುಕೊಂಡು, 'ಹಾಗಾದರೆ ನೀನೇ ಹೋಗು—ನಿದ್ದೆ ಬಂದಂತಿದೆ ಅವರಿಗೆ ತುಸು—ಅಳುವ ದನಿಗೆ ನಿದ್ದೆ ಹಾರೀತು—' ಎಂದಳು. ಸ್ನೇಹಳು ಮತ್ತೆ ಮೆತ್ತಗೆ ಹೊರಟು ಹೋದಳು.

ಸ್ವಲ್ಪ ಹೊತ್ತಿನ ಮೇಲೆ ದಿವಾಣನು ಬಂದು, ರೋಗಿಯ ನಾಡಿಯನ್ನು ಪರೀಕ್ಷಿಸಿ, 'ನಾಡಿಯು ತುಸು ನಿಚ್ಚಳವಿದ್ದಂತೆ ತೋರುತ್ತದೆ. ತಾಯೀ, ನೀನು ತುಸು ಮಲಗುವದಿಲ್ಲವೆ?' ಎಂದನು.

' ನಾನು ಕೂತಕೂತಲ್ಲಿಯೇ ನಡುನಡುವೆ ತುಸು ತುಸು ತೂಕಡಿಸಿ ತೂಕಡಿಸಿ ನಿದ್ದೆ ಮುಗಿಸಿಕೊಳ್ಳುತ್ತೇನೆ. ಹೀಗೆ ನಿದ್ದೆ ಮಾಡಿಕೊಳ್ಳಲು ನನಗೆ ಎಳ್ಳಷ್ಟೂ ಕಷ್ಟವಾಗುವದಿಲ್ಲ. ನೀವು ಇನ್ನಷ್ಟು ಮಲಗಿರಿ. ಹಗಲೆಲ್ಲ ನಿಮಗೆ ಬಹಳ ಪರಿಶ್ರಮ ಮಾಡಬೇಕಾಗುವದು. ಅದರಲ್ಲಿ ಮತ್ತೆ ರಾತ್ರಿ ಜಾಗರಣೆ ಯಾದರೆ ತಡೆಯಲಿಕ್ಕಿಲ್ಲ. '

ದಿವಾಣನೂ ಹೊರಟು ಹೋದನು. ಮಾತಿನ ಮೃದುಗುಂಜನ ದಿಂದಲೋ ಅಥವಾ ಪ್ರಭಾತನ ಅಳುವ ದನಿಗೋ ಸುರೇಶನು ಮತ್ತೆ ಎಚ್ಚ-ತ್ತನು. ಕೆಂಪೇರಿದ ಕಂಣುಗಳಿಂದ ಸುಧೆಯನ್ನೇ ನೋಡುತ್ತ ನೋಡುತ್ತ, ' ಆದರೂ ?—ಆದರೂ ಬಂದೆಯಾ ?—ಓಡಿ ಬಂದೆನಾದರೂ ನನಗೆ ನಿಸ್ತಾರ ವಿಲ್ಲವೆ ? ದಯಮಾಡು-ದಯಮಾಡು ನನ್ನ ಮೇಲೆ. ನನ್ನ ಹತ್ತಿರ ಬರಬೇಡ-ನಾನಿನ್ನು ಸಹಿಸಲಾರೆ. ಹೋಗು ಇಲ್ಲದಿದ್ದರೆ ನನಗಾದರೂ ಹೋಗಗೊಡು. '

ಸುರೇಶನು ಉನ್ಮಾದಿತನಾಗಿ ಹಾಸಿಗೆ ಬಿಟ್ಟು ಏಳುವದನ್ನು ತಡೆದು ಮತ್ತೆ ಮಲಗಿಸಬೇಕಾದರೆ ಈ ಸಲ ಸುಧೆಗೆ ತನ್ನ ಮೈಯಲ್ಲಿಯ ಬಲವನ್ನೆಲ್ಲ ಪ್ರಯೋಗಿಸಬೇಕಾಗಿ ಬಂತು. ಗಾಳಿ ಹಾಕುವ ಇಲ್ಲವೇ ತಲೆಗೆ ಮಂಜು ಹಚ್ಚುವ ಉಪಾಯವಿಲ್ಲದೆ ಹೋಯಿತು. ಕೆಲವು ನಿಮಿಷಗಳ ಮೇಲೆ ಸುರೇಶನು ನಿಶ್ಚೇಷ್ಟಿತನಾಗಿ ಬಿದ್ದುಕೊಂಡನು. ಮತ್ತೆ ಮೆಲ್ಲಗೆ, ' ಹೋಗ ಗೊಡಲಿಲ್ಲವೇ ? ಹಾಗಾದರೆ ನೀನೂ ಇನ್ನು ಹೋಗಬೇಡ, ಇನ್ನು ಹೋಗ ಗೊಡುವದಿಲ್ಲ, ಹೀಗೇ ಇದ್ದುಬಿಡು ಹಾಗಾದರೆ ' ಎಂದು ಮುಂತಾಗಿ ಬಡ-ಬಡಿಸಿದನು.

ಸುರೇಶನು ಶಾಂತನಾದ ಮೇಲೆ ಸುಧೆಯು ಮತ್ತೆ ಒಂದು ಕೈಯಿಂದ ಗಾಳಿ ಹಾಕುತ್ತ ಇನ್ನೊಂದರಿಂದ ಮಂಜಿನ ಚೀಲವನ್ನು ಹಣೆಗೆ ಹತ್ತಿಕ್ಕುತ್ತ ರೋಗಿಯ ತಲೆಯ ಬದಿ ಕುಳಿತುಕೊಂಡಳು. ಆಗ ಅವಳ ಮೈಯೆಲ್ಲ ಗಡ-ಗಡ ನಡುಗುತ್ತಿದೆ. ಸುರೇಶನು ಆಡಿದ್ದೆಲ್ಲ ಬಡಬಡಿಕೆಯೆಂದು ಅವಳಿಗೆ ಗೊತ್ತಿದ್ದರೂ ಇದು ಬರೀ ಬಡಬಡಿಕೆಯಲ್ಲವೆಂದೂ ಎನಿಸಿತು. ಇದೇನೋ ಒಂದು ಮಾದರಿಯ ಮನಸ್ಸಿನ ಉತ್ತೇಜನೆ ! ನೆನೆದು ಸುಧೆಯು ನಡುಗಿದಳು.

ಸುಧೆಯು ಎದ್ದು ಅವನ ತಲೆಗೆ, ಕೈಗೆ, ಬಾಯಿಗೆ, ತಂಣೀರು ಸವರಿ ದೀಪವನ್ನು ತುಸು ಇಳಿಸಿ ಹೊರಗೆ ಪರಿಚಾರಕನ ಕೈಯಲ್ಲಿ ಶಿಥಿಲವಾಗಿದ್ದ ತೂಗು-ಬೀಸಣಿಕೆಯ ದಾರವನ್ನು ಬಲವಾಗಿ ಕೊಡವಿ, ಅವನನ್ನು ಜಾಗರಿಸಿ, ರೋಗಿಗೆ ನಿದ್ದೆ ಹತ್ತಲೆಂದು ತಲೆ ತಟ್ಟುತ್ತಲಿದ್ದಳು.

ಕ್ಷಣ ಹೊತ್ತಿನ ಮೇಲೆ ಮತ್ತೆ ಸ್ನೇಹಳು ಬಂದು ನೀರವಳಾಗಿ ಹಾಸಿಗೆಯ ಬದಿಗೆ ಕುಳಿತಳು. ಆಗಿನ್ನೂ ಅವಳ ಮುಖದ ಪಾಂಡು ವರ್ಣವು ಅಳಿಸಿಲ್ಲ; ಬೆದರಿ ಬೇಗುದಿಗೊಂಡ ಸ್ನೇಹಳ ಈ ದೀನ ಭಾವವನ್ನು ಸುಧೆಯು ಕಂಡು ವ್ಯಥಿತಳಾದಳು. ಮೊದಲಿನಂತೆ ಅಸಂಕೋಚವಾಗಿ ವ್ಯವಹರಿಸಿ ಸಹಜವಾಗಿ ಮಾತನಾಡದಿದ್ದರೆ ಸ್ನೇಹಳ ಈ ಲಜ್ಜಾಕರ ವೇದನೆಯು ಇನ್ನಷ್ಟು ಹೆಚ್ಚ ಬಹುದೆಂದು ಸುಧೆಯು ತಿಳಿದುಕೊಂಡಳು. ಮತ್ತು ಅವಳಿಗೆ ಹೋಗಿ ಮಲಗಲು ಹೇಳಿದಳು. ರೋಗಿಯ ತಲೆತಿರುಕ ಬಡಬಡಿಕೆಯನ್ನು ಗಣನೆಗೆ ತಂದುಕೊಳ್ಳುವದು ಉಚಿತವೂ ಅಲ್ಲ, ಈಗದು ಸಮಯವೂ ಅಲ್ಲವೆಂದು-ಕೊಂಡು ಸುಧೆಯು ಯಥಾರೀತಿಯಾಗಿ ತನ್ನ ಕೆಲಸದಲ್ಲಿ ತೊಡಗಿಕೊಂಡಳು. ಸುರೇಶನ ಹಣೆ ತುಸು ತುಸು ಬೆವರುತ್ತಿದ್ದುದರಿಂದ ಅದನ್ನು ಒರೆಸುತ್ತಲೇ ಸುರೇಶನು ಎಚ್ಚೆತ್ತು ಕಂಣು ತೆರೆದಾಗ ದೃಷ್ಟಿ ಅದೆಷ್ಟೋ ಸ್ವಚ್ಛವಾಗಿದೆ. ಆಗ ಕಿಡಿಕೆಯ ಛಿದ್ರದೊಳಗಿಂದ ಬೆಳಕು ಹಣಿಕಿ ಹಾಕಿ ಬೆಳಗಾದ ವರ್ತಮಾನ ವನ್ನು ಹೇಳಿತು. ಸುಧೆಯು ಮೆಲ್ಲಗೆ ‘ ಈಗ ಹೇಗಿರುವೆ ? ’ ಎಂದಳು

‘ ಸ್ವಲ್ಪ ಹಗುರೆನಿಸುತ್ತದೆ. ನೀನೊಬ್ಬಳೇ ರಾತ್ರಿಯೆಲ್ಲ ಕುಳಿತಿದ್ದೆಯಾ ? ’

‘ ಇಲ್ಲ, ಸ್ನೇಹಳೂ ಇದ್ದಳು—ಕಾಕಾ ಅವರೂ ಬಂದಿದ್ದರು. ತಲೆ ಈಗ ಹಗುರಾಗಿದೆಯೆ ? ’

‘ ಹುಂ, ಆದರೆ ಬಹಳ ಹೈರಾಣವೆನಿಸುವದು. ಮಾತಾಡಲು ತ್ರಾಸು ಎನಿಸುವದು. ’

ಸುಧೆಯು ಅವನ ತಲೆಯ ಮೇಲೆ ಕೈಯಿಟ್ಟು, ‘ ಹಾಗಾದರೆ ಮಾತಾಡ ಬೇಡ—ಮಲಗು ’ ಎಂದಳು.

ಸುರೇಶನು ಎಚ್ಚರಿಕೆಯಲ್ಲಿ ಆಡಿದ ಮಾತಿನಲ್ಲಿ ಮತ್ತು ಸುಧೆಯ ಭಾವ ದಲ್ಲಿಯಾವ ವ್ಯತ್ಯಯವನ್ನೂ ಕಾಣದೇ ಸ್ನೇಹಳು ನಿಶ್ಚಿಂತಳಾಗಿ ಮನೆಗೆಲಸಕ್ಕೆ ಹೋದಳು. ಸುಧೆಯು ಸಹ ಸಮಾಧಾನಪಟ್ಟುಕೊಂಡಳು. ಸುರೇಶನ ರಾತ್ರಿಯ ಅಸಂಬದ್ಧ ಮಾತುಗಳಿಂದ ಅವಳಿಗೆ ತುಸು ಹೆದರಿಕೆಯೆನಿಸಿತ್ತು.

ಸುಧೆಯ ಹೇಳಿಕೆಯಂತೆ ಸುರೇಶನು ಮತ್ತೆ ಮಲಗಿದನು. ಸುಧೆಯು ದೀಪವನ್ನು ಶಾಂತಮಾಡಿ ಕಿಡಿಕೆಗಳನ್ನೆಲ್ಲ ತೆರೆದಿಟ್ಟು ವಸ್ತ್ರದಿಂದ ಅವನ ಹಣೆ ಒರೆಸಿ ಮೆಲ್ಲಮೆಲ್ಲಗೆ ಗಾಳಿಹಾಕುತ್ತಿರಲು, ಅವಳ ಕಂಣುಗಳೂ ನಿದ್ದೆಯಿಂದ ತೂಗುತ್ತಿದ್ದವು. ಆಗ ಬೀಸಣಿಕೆ ಜಗ್ಗಿದಂತಾಗಲು ಕಣ್ದೆರೆದು ನೋಡುತ್ತಾಳೆ-

ಸುರೇಶನು ಕಂಪಿತ ಹಸ್ತದಿಂದ ಬೀಸಣಿಕೆ ಜಗ್ಗುತ್ತಿದ್ದಾನೆ. ಸುಧೆಯು, 'ಯಾಕೆ ?' ಎಂದಳು. ಅವನು, 'ನೀನು ರಾತ್ರಿಯೆಲ್ಲ ಎದ್ದಿರುವೆ—ಇನ್ನು ಗಾಳಿ ಸಾಕು' ಎಂದನು. ಸುಧೆಯು ಬೀಸಣಿಕೆ ಇರಿಸಿದಳು 'ರಾತ್ರಿಯೆಲ್ಲ ಒಬ್ಬಳೇ ಏಕೆ ಎಚ್ಚತ್ತಿರುವೆ ? ಇನ್ನಾರ ಮೇಲಾದರೂ ತುಸು ತುಸು ಭಾರ ಹಾಕುತ್ತಿರು. ನಾನೀಗ ನೆಟ್ಟಗಿದ್ದೇನೆ. ನೀನು ಮಲಗು ಹೋಗು—' ಎಂದು ಸುರೇಶನು ಹೇಳಿದನು.

ಸುಧೆಯು ಕಣ್ಣು ಉಜ್ಜುತ್ತ, 'ಈಗ ಮಲಗುವ ಹೊತ್ತೇ ? ಬೆಳಗಾಗಿ ಹೋಗಿದೆ' ಎಂದಳು. ಆ ಮೇಲೆ ಔಷಧ ಸೇವನಮಾಡಿಸಿ ಉತ್ತಾಪವನ್ನು ನೋಡಿದಳು. ಈಗ ಜ್ವರ ತೀರ ಕಡಿಮೆ. ಅಷ್ಟರಲ್ಲಿ ಡಾಕ್ಟರನೂ ಬಂದು ನೋಡಿ, 'ಇದೊಂದು ದಿನ ಬಹಳ ಜಾಗರೂಕತೆಯಿಂದ ನೋಡಿಕೊಂಡರೆ ಬೇಗ ಜ್ವರ ಇಳಿದುಬಿಡಬಹುದು' ಎಂದು ಹೇಳಿಹೋದನು. ಸ್ನೇಹಳು ಮತ್ತು ದಿವಾಣನು ಸುಧೆಗೆ ವಿಶ್ರಮಿಸಲು ಎಷ್ಟು ಹೇಳಿದರೂ ಅವಳು ಕೇಳದೆ, 'ಇಂದು ಆದಾಗದು, ನಾಳಿನಿಂದ ಬೇಕಾದರೆ' ಎಂದು ಹೇಳಿಬಿಟ್ಟಳು.

ಸುರೇಶನಿಗೆ ಗುಣವಾಗತೊಡಗಿತು. ದಿವಾಣನು ಸುಧೆಗೆ ಹೇಳಿದನು, 'ಗೊತ್ತಷ್ಟೇ ತಾಯಿ, ಯಾವ ಸ್ಥಿತಿಯಲ್ಲಿ ಎಲ್ಲವನ್ನೂ ಬಿಟ್ಟು ಬಂದಿರುವೆನೆಂಬುದು. ಇನ್ನೇನು ಭಯದ ಕಾರಣವಿಲ್ಲ. ಜತನ ಜೋಪಾನದ ಬಗ್ಗೆಯಂತೂ ನಿನಗೆ ನಾನೇನು ಹೇಳಿಕೊಡುವದಿದೆ ? ಈಗ ಒಪ್ಪಿಗೆ ಕೊಟ್ಟೆಯಾದರೆ ನಾನು ಊರಿಗೆ ಹೋಗುತ್ತೇನೆ.' ಸುಧಾಸುರೇಶರಿಬ್ಬರೂ ಸಮ್ಮತಿಸಲು ಎಲ್ಲ ವ್ಯವಸ್ಥೆಯನ್ನೂ ಮಾಡಿಕೊಟ್ಟು ದಿವಾಣನು ಊರಿಗೆ ಹೋದನು.

ಸುರೇಶನು ಅತ್ಯಂತ ದುರ್ಬಲನಾಗಿಬಿಟ್ಟಿದ್ದಾನೆ. ಕೆಲದಿನವಂತೂ ಹಾಸಿಗೆಯಿಂದ ಏಳಲೂ ಆಗುತ್ತಿರಲಿಲ್ಲ. ಪ್ರಭಾತನನ್ನೂ ಸಂಸಾರದ ಕೆಲಸವನ್ನೂ ನೋಡಿಕೊಂಡು ಸ್ನೇಹಳು ನಡುನಡುವೆ ಬಂದು ಸುರೇಶನ ಬಳಿ ಕುಳಿತುಕೊಳ್ಳುವಳು ಮಾತ್ರ. ಅನುದಿನವೂ ಅವಳು ಸುಧೆಯ ಮೇಲೆ ಸಮಸ್ತಭಾರ ವಹಿಸಿ ತಾನು ನಿಶ್ಚಿಂತಳು. ರೋಗಿಯ ಆರೈಕೆಗೆ ತಾನು ತಕ್ಕವಳಲ್ಲವೆಂದು ದೂರ ಇದ್ದುಬಿಡುತ್ತಿದ್ದಳು.

ಪ್ರವಾಸದಲ್ಲಿಯ ಆ ಸಂಗಹೀನವಾದ ರೋಗಶಯ್ಯೆಯ ಬಳಿ, ಸುರೇಶನ ಏಕಮಾತ್ರ ಸಂಗನಿಯೆಂದರೆ ಸುಧೆ. ಅವನ ಮನಸ್ಸನ್ನು ಅರಳಿಸುತ್ತಾಳೆ. ಅವಸನ್ನ ಹೃದಯವನ್ನು ಸಂತೈಸುತ್ತಾಳೆ. ರುಗ್ಣಶರೀರದ ಯಾತನೆಯನ್ನು ಆರೈಕೆಯಿಂದ ಹೋಗಲಾಡಿಸುತ್ತಾಳೆ. ಹೀಗೆ ತನ್ನ ಪ್ರಾಣದಿಂದ ಅವನ

ಪ್ರಾಣವನ್ನು ಪೋಷಿಸಿ ಪುಷ್ಪಗೊಳಿಸುತ್ತಿದ್ದಾಳೆ. ವ್ಯೆಮನಗಳು ಬಳಲಿ ಅವಶವಾದಾಗ, ತನ್ನವರ ಸ್ನೇಹ ಪ್ರೇಮಗಳನ್ನು ಅನುಭವಿಸಬೇಕೆಂದು ಜೀವಕ್ಕೆ ಅನಿವಾರವಾದ ಆಶೆಯೆನಿಸುವದು. ಹಾಗೆಯೇ, ಉಳಿದ ದಿನಗಳಲ್ಲಿ ಮನದ ಮೂಲೆಯಲ್ಲಿ ಅವಿತುಕೊಂಡಿದ್ದ ಒಲವಿನ ಸೆಲೆಯೀಗ ಅಕಾರಣವಾಗಿ ಚಿಮ್ಮಿ ಬಂದು ತನ್ನವರೆನ್ನುವವರೆಲ್ಲರ ಎದೆಯನ್ನು ತೋಯಿಸಿ ತಣ್ಪನೀಡಲೂ ಹಾತೊರೆಯುವದು. ದುರ್ಬಲ ಪ್ರಾಣವು ಪ್ರೇಮವನ್ನು ಪಡೆಯಲು ಆತುರಗೊಳ್ಳುವಂತೆ ಕೊಡಲೂ ಕಾತರಗೊಳ್ಳುವದು. ಸುರೇಶನ ಎದೆಯಲ್ಲಿ ಅವಿತ ಪ್ರೀತಿಯು ಬುಗ್ಗೆಯು ನುಗ್ಗಿ ಸುಧೆಯನ್ನು ತೋಯಿಸಿ ಮೀಯಿಸಿ ಬಿಡಲು ಹಾತೊರೆಯುತ್ತಿದ್ದರೆ ಆಶ್ಚರ್ಯವೇನು ?

## ೧೭

ಆಗ ಸಂಜೆಯಾಗಿದೆ. ಕಿಡಿಕೆಯೊಳಗಿಂದ ಹೂದೋಟದ ನರುಗಂಪು ಒಳಗೆ ಬಂದು ಅಲ್ಲಿದ್ದವರನ್ನು ಆನಂದಗೊಳಿಸುತ್ತದೆ. ಸುರೇಶನು ಪರ್ಯಂಕದ ಮೇಲೆ ಮಲಗಿದ್ದಾನೆ. ಸುಧೆಯು ಒಂದು ಬದಿಗೆ ಕುಳಿತು ಅವನಿಗೆ ಬಂಕಿಮಚಂದ್ರರ ' ಕೃಷ್ಣಕಾಂತನ ಉಯಿಲು ' ಓದಿ ಹೇಳುತ್ತಿದ್ದಾಳೆ. ಎದುರಿನ ಸಣ್ಣ ಮೇಜಿನ ಮೇಲೆ ದೀಪ ಉರಿಯುತ್ತಿದೆ. ಸುರೇಶನು ಒಮ್ಮನಸ್ಸಿನಿಂದ ಕೇಳುತ್ತಿದ್ದಾನೆ. ಅವನು ಈ ಪುಸ್ತಕವನ್ನು ಓದಿಲ್ಲವೆಂತಲ್ಲ. ಆದರೆ ಈಗಿನ ಸೋತ ಮ್ಯೆಮನಕ್ಕೆ ಆ ಓದಿದ ಪುಸ್ತಕವೂ ಹೊಸದೊಂದು ರುಚಿಕೊಡುತ್ತಿದೆ.

ಸ್ನೇಹಳು ಕ್ಷಣಹೊತ್ತು ಕೇಳಿ, ' ಇನ್ನು ಓದಬೇಡ ಅಕ್ಕ ? ಕೇಳಿದರೆ ಕಷ್ಟವಾಗುವದು ' ಎಂದಳು.

ಸುಧೆಯು ಪುಸ್ತಕ ಮುಚ್ಚಹೋಗಲು ಸುರೇಶನು, ' ಇಲ್ಲಿಲ್ಲ, ಇನ್ನಷ್ಟು ' ಎಂದನು.

' ಹಾಗಾದರೆ ನೀವು ಓದಿರಿ, ನಾನು ಪ್ರಭಾತನ ಬಳಿ ಹೋಗುತ್ತೇನೆ. ಅಷ್ಟು ದುಃಖ ನನಗೆ ಸೇರುವದಿಲ್ಲ ' ಎಂದು ಸ್ನೇಹಳು ಎದ್ದುಹೋದಳು. ಸುಧೆಯು ಓದುತ್ತ ಓದುತ್ತ ಕಂಣೆತ್ತಿನೋಡಿದಳು- ಸುರೇಶನ ಕಂಣಿಗೆ

ಬೆಳಕು ತಾಕುತ್ತಿತ್ತಾಗಿ ಅವನು ಕೈಯೆತ್ತಿ ಕಣ್ಣಿಗೆ ಮರೆಮಾಡಿಕೊಳ್ಳು-ತ್ತಿದ್ದಾನೆ. ದೀಪವನ್ನು ಮರೆಗೆ ಸರಿಸಲು ಹೇಳುವುದಕ್ಕೂ ಅವನ ಮನಸ್ಸೊಪ್ಪದು; ಅಷ್ಟು ತನ್ಮಯನಾಗಿದ್ದಾನೆ.

ಸುಧೆಯು ಮುಗುಳು ನಗೆಯಿಂದ, ' ಕಂಣಿಗೆ ಬೆಳಕು ತಾಕುತ್ತಿದೆ, ಅದನ್ನೂ ಸಹ ಹೆರರೇ ಹೇಳಬೇಕೆ ? ನೀನೇ ಹೇಳಬೇಡವೆ ? ' ಎಂದಳು.

ಸುರೇಶನೂ ನಕ್ಕನು. ಸುಧೆಯು ದೀಪವನ್ನು ಸರಿಸಿರಿಸಿ, ' ದುರ್ಬಲ ಮನಸ್ಸು, ಬಹಳ ಹೊತ್ತು ಒಂದೇ ಕಡೆಗೆ ಲಕ್ಷ್ಯಹಚ್ಚಿಕೊಂಡಿರುವದು ಒಳ್ಳೆಯದಲ್ಲ. ಇಂದು ಓದುವದನ್ನು ಸಾಕು ಮಾಡೋಣವೆ ? ' ಎಂದಳು.

' ಇನ್ನಷ್ಟು ಓದು. '

ಸುಧೆಯು ಓದತೊಡಗಿದಳು. ಎದೆಗರಗುವ ರಚನೆಯಿಂದ ಅವಳ ಕಲ್ಲಿನ ಕಂಣುಗಳಲ್ಲಿಯೂ ನೀರು ಹರಿದಿತು. ಆಗ ಕಂಣೊರೆಸಿ ಕಂಠವನ್ನು ಸರಿಪಡಿಸಿ ಸುಧೆಯು ' ಇಂದು ಸಾಕು ' ಎಂದಳು.

ಸುರೇಶನೂ ಕಂಣೊರೆಸಿಕೊಂಡು, ' ಹಾಗಾದರೆ ಸಾಕು ' ಎಂದನು.

' ರಾತ್ರಿ ಎಂಟಾಗಿ ಹೋಯಿತು. ಅನ್ಯಮನಸ್ಕಳಾಗಿ ಇನ್ನೂ ಕಿಡಿಕೆ-ಯನ್ನೇ ಮುಚ್ಚಿಲ್ಲ ' ಎಂದು ಸುಧೆಯು ಏಳಹೋದಳು. ಸುರೇಶನು ಸಹಸಾ ಅವಳ ಕೈ ಹಿಡಿದು ತಡೆದು, ' ಇನ್ನಷ್ಟು ಹೊತ್ತು ತೆರೆದಿರಲಿ. ಬಹಳ ಕಂಪು ವಾಸನೆ ಬರುತ್ತಿದೆ. ಏನಾದರೂ ಮಾತುಕಥೆ ಹೇಳು ' ಎಂದನು.

' ಏನು ಹೇಳುವದು ? '

' ಏನಾದರೂ—ಹಾಗೆಂದು ಹುಲಿಯು ನರಿಯು ಮಾತಲ್ಲ. '

' ಅದಲ್ಲದೇ ನಮ್ಮ ವಿದ್ಯೆಯು ಓಟವು ಇನ್ನೆಷ್ಟರದು ? ಅದನ್ನೇ ಕೇಳುವೆಯಾದರೆ ಹೇಳಬಲ್ಲೆ. '

' ಅದಲ್ಲ, ಮತ್ತೇನಾದರೂ ಹೇಳು. ಇಂದು ನಿಮ್ಮ ತಂದೆ ಪತ್ರ ಬರೆದಿದ್ದಾರೆ—ಏನು ಬರೆದಿದ್ದಾರೆ ? '

' ಅದು ಬಹಳ ಬಹಳ—ನಾನು ಇನ್ನೂ ಅವರಿಗೆ ಕೂಸಿನಂತೆ ಭಾಸ ವಾಗಿರಬೇಕು. ಬಗೆಬಗೆಯಾಗಿ ಬರೆದಿದ್ದಾರೆ. ಕೊನೆಗೆ, "ಇನ್ನೂ ಕೆಲ ದಿನ ನೀನು ಬರುವ ಹಾದಿಯನ್ನು ನೋಡುವೆ " ನೆಂದು ಬರೆದಿದ್ದಾರೆ. '

ಸುರೇಶನು ಒಂದು ಕ್ಷಣ ಸುಮ್ಮನಿದ್ದು, ' ಏನು ಉತ್ತರ ಕೊಡುವ ದಾಗಿ ಯೋಚಿಸುವೆ ? ' ಎಂದನು.

‘ ಇನ್ನೂ ಯೋಚಿಸಿಲ್ಲ. ಹೇಳು ಏನು ಉತ್ತರ ಬರೆಯಲಿ ? ’

‘ ಬರೆ—ನಾನು ಬರುವ ಉಪಾಯವಿಲ್ಲ ’ ಎಂದು.

ಸುಧೆಯು ಮೆಲುನಗೆಯಿಂದ, ‘ ಕೇವಲ ಹುಡುಗತನದ ಮಾತು. ಕೈ ಕಾಲು ಎಲ್ಲಾ ಉಂಟು ಎಂದರೆ—ಉಪಾಯವೇಕಿಲ್ಲ ? ’

‘ ಕೈ ಕಾಲು ಎಲ್ಲರಿಗೂ ಇರುವದುಂಟು. ಹಾಗೆಂದು ಹೋಗುವ-ದಾದೀತೆ ? ಸ್ನೇಹಾ ಈಗ ಹೋಗಬಲ್ಲಳೆ ? ’

ಸುಧೆಯು ನಕ್ಕಳು. ‘ ಸ್ನೇಹಾ ಹಾಗೂ ನಾನು ? ಇದು ಮತ್ತೆ ಹುಡುಗತನದ ಮಾತು. ’

‘ ಹುಡುಗತನದ ಮಾತಲ್ಲ—ಪ್ರಭಾತನನ್ನು ಬಿಟ್ಟು ನಮ್ಮನ್ನು ಬಿಟ್ಟು ಈಗ ನೀನು ಹೋಗಬಲ್ಲೆಯಾ? ’ ಸುಧೆಯು ತಲೆ ಬಾಗಿಸಿದಳು. ಈ ಮಾತಿಗೆ ಉತ್ತರ ಕೊಡುವದು ಉಚಿತವೋ ಅಲ್ಲವೋ ಒಂದು ಕ್ಷಣ ಭಾವಿಸಿಕೊಂಡಳು. ಆವಳು ಸುಮ್ಮನಿದ್ದದ್ದು ನೋಡಿ ಸುರೇಶನು ಮತ್ತೆ, ‘ ಹೋಗಬಲ್ಲೆಯಾ ? ’ ಎಂದು ಕೇಳಿದನು.

ಸುಧೆಯು ತುಸು ನಕ್ಕಳು. ‘ ನೀನೇನೆನ್ನುವೆ ? ಹೋಗಬಲ್ಲೆನೋ, ಹೋಗಲಾರೆನೊ ? ’

ಸುರೇಶನು ತುಸು ವಿಚಾರಿಸಿ ಹೇಳಿದನು, ‘ ಹೋಗಬಲ್ಲಿ. ’

‘ ಹಾಗಾದರೆ ಹೋಗಬಲ್ಲೆ. ’

ಸುರೇಶನು ನಕ್ಕು ಹೇಳಿದನು, ‘ ಆದರೆ ನಾನು ಮನಸಾರೆ ಹೇಳಿಲ್ಲ, ನೀನೇನು ಹೇಳುವೆಯೋ ತಿಳಿಯಲು ಹಾಗೇ ಬಾಯಿಂದ ಹೇಳಿದೆ. ’

‘ ಇದರಲ್ಲಿಯೂ ಮನಸಾರೆ ಬಾಯಾರೆ ಎಂದು ಬೇರೆ ಉಂಟೇನು ? ಹೋಗಲಿ. ಈಗಂತೂ ತಿಳಿದುಕೊಂಡೆಯಷ್ಟೆ ? ’

‘ ತಿಳಿದುಕೊಂಡೆ. ’

‘ ಏನು ತಿಳಿದುಕೊಂಡೆ ? ’

‘ ನಿಜವಾಗಿ ಹೇಳಲೇ ? ’

‘ ಹೇಳು. ’

‘ ಹೋಗಲಾರೆ. ’

ನಕ್ಕು ಕೇಳಿದಳು, ‘ ಯಾಕೆ ? ’

‘ ಯಾಕೆಂದು ಹೇಳಲಾರೆ. ಹೀಗೇ ಮನಸ್ಸಿಗೆನಿಸುವದು. ’

‘ ಮನಸ್ಸಿನ ಮಾತನ್ನು ನಂಬುವದು ಒಳ್ಳೆಯದಲ್ಲ. ಮನಸ್ಸು ಅನೇಕ ಸಲ ತಪ್ಪಾಗಿಯೂ ಹೇಳುವದು. ’ ಹೀಗೆ ಹೇಳುತ್ತ ಹೇಳುತ್ತ ಸುಧೆಯು ಎದ್ದು ಕಿಡಿಕೆಯನ್ನು ಮುಚ್ಚಿದಳು.

ಅವಳು ಹೋಗುತ್ತಿರುವದನ್ನು ಕಂಡು ಸುರೇಶನು, ‘ ಹೊರಟೆಯಲ್ಲ?’ ಎಂದನು.

‘ ನೋಡುವಾ, ಸ್ನೇಹಾ ಎಲ್ಲಿಗೆ ಹೋದಳು. ’

ಕೆಲವು ದಿನಗಳಲ್ಲಿ ಸುರೇಶನು ಆಡ್ಡಾಡುವ ಹಾಗಾಗಲು ಸುಧೆಯು, ‘ ಊರಿಗೆ ಹೋಗುವದಾದರೆ ನಡೆ ಹೋಗುವಾ ’ ಎಂದಳು.

ಸುರೇಶನು, ‘ ಇನ್ನು ಕೆಲದಿನಗಳ ಮೇಲೆ ’ ಎಂದನು.

‘ ಹಾಗಾದರೆ ನಾನು ಹೋಗುತ್ತೇನೆ. ’

ಸುರೇಶನು ಅವಳ ಮುಖದ ಕಡೆಗೆ ಗಂಭೀರನಾಗಿ ನೋಡುತ್ತ ‘ ನಿನ್ನಿಚ್ಛೆ ’ ಎಂದನು.

ಸುಧೆಯು ವ್ಯಂಗ್ಯದ ಪ್ರಲೋಭನವನ್ನು ಜಯಿಸಲಾರದೆ, ‘ ಬರುವಾಗ ನನ್ನ ಇಚ್ಛೆಯಿಂದಲೇ ಇಲ್ಲಿಗೆ ಬಂದಿದ್ದೆನೆ ? ’ ಎಂದಳು.

ಸ್ನೇಹಳು, ‘ ನೀನೇ ಹೇಳು ಅಕ್ಕಾ ! ನಿನ್ನಿಚ್ಛೆಯಂತೆ ! ’ ಎಂದು ಹಂಗಿಸಿದಳು.

ಸುರೇಶನು ಗಂಭೀರನಾಗಿ ಪದಚಾರಣ ಮಾಡತೊಡಗಿದನು. ಸುಧೆಯು ನಕ್ಕು, ‘ ಅಣೆಯೆಂದರೂ--- ಸಾಮಾನ್ಯ ಮಾತಿಗೂ ಅಷ್ಟು ತಪ್ಪು ಹುಡುಕ ಬೇಡಿರಿ. ಹಾಗಾದರೆ ಬದುಕುವದಸಾಧ್ಯ. ’

ಇಳಿಹೊತ್ತಿಗೆ ಸುರೇಶನು ಉದ್ಯಾನದಲ್ಲಿ ಕುಳಿತು ಇದೇ ಮಾತನ್ನೇ ಮನಸ್ಸಿನಲ್ಲಿ ಆಲೋಚಿಸುತ್ತಿದ್ದನು. ಅವನು ಯಾವುದೋ ಒಂದು ಉದ್ಭ್ರಾಂತಭಾವದ ಹಸ್ತದಿಂದ ನಿಸ್ತಾರ ಪಡೆಯಲು ಓಡಿಬಂದಿದ್ದಾನೆ. ಅದು ಇನ್ನಾರಿಗೂ ಹೇಳುವಂತಹದಲ್ಲ, ಆದರೆ ಅದೃಷ್ಟವು ಮತ್ತೆ ಅವನನ್ನು ಅದೇ ತಿರುಗಣಿಯ ಸೆಳವಿಗೆ ಎಳೆದುಬಿಟ್ಟದೆ ಈಗ ! ಈಗ ಅದರಿಂದ ಪಾರಾ ಗುವ ಶಕ್ತಿಯೂ ಅವನಲ್ಲಿಲ್ಲ; ಇಚ್ಛೆಯೂ ಇಲ್ಲ. ಈಗ ಅದೇ ಆ ತಿರುಗಣಿಯ ಸುಳಿಯ ಸೆಳೆತಕ್ಕೇ ಅವನ ಜೀವನದ ಸರ್ವೋತ್ತಮ ಸಫಲತೆಯೆಂದೆನಿ ಸುತ್ತಿದೆ ! ಈ ದುರ್ದಾಂತ ಪ್ರವಾಹದಿಂದ ಪಾರಾಗುವ ಬಗೆ ? ಪಾರಾಗುವ ಇಚ್ಛೆಯೇ ಈಗ ಇಲ್ಲ !

ಪ್ರಭಾತನೊಡನೆ ಸುಧೆಯೂ, ಸ್ನೇಹಳೂ ಉದ್ಯಾನಕ್ಕೆ ಬಂದರು. ಸುರೇಶನು ' ಈಗ ಸಮಯವಾಯಿತೆ ? ಪಾಪ ! ಇಲ್ಲಿ ನಾನೊಬ್ಬನೇ ಪೇಚಾಡುವಾಗ ನೀವಲ್ಲಿ ಸ್ವಚ್ಛಂದವಾಗಿದ್ದಿರಿ, ಅಲ್ಲವೇ ? ' ಎಂದನು.

ಸ್ನೇಹಳು ಉತ್ತರ ಕೊಟ್ಟಳು, ' ನಮ್ಮ ಹತ್ತಿರ ಬರಲಿಕ್ಕೆ ನಿನಗಾರು ಬೇಡವೆಂದಿದ್ದರು ? ಬಂದಿದ್ದರಾಗುತ್ತಿತ್ತು. '

ಸುಧೆಯು ಎಂದಳು, ' ಯಾಕೆ? ಏನಾದರೂ ಓದಲೂ ಬಹುದಾಗಿತ್ತು. ಒಬ್ಬನೇ ಪೇಚಾಡುವ ಕಾರಣ ? '

' ಅದು ಇನ್ನು ಬೇರೆ ವೇಳೆಯಲ್ಲಿ. ಈ ವೇಳೆಯು ಹರಟೆಯದು. '

ಹೀಗೆ ಕುಳಿತುಕೊಂಡಿರುವದು ಶ್ರೀಮಾನ್ ಪ್ರಭಾತಕುಮಾರರ ಮನಸ್ಸಿಗೆ ಬರಲಿಲ್ಲವೇನೊ. ಅವರು ಸುಧೆಯನ್ನು ಎಳೆಯತೊಡಗಿದರು. ಸುರೇಶನು ಬೇಸರಿಕೆಯಿಂದ, ' ಅದಂತೂ ಇಲ್ಲದ ಗೊಂದಲ ಹಾಕುತ್ತದೆ. ದಾಸಿಯ ಬಳಿ ಬಿಟ್ಟು ಬಾ ' ಎಂದನು. ಸುಧೆಯು ಪ್ರಭಾತನನ್ನು ಕರೆದು ಕೊಂಡು ಹೊರಟುಹೋದಳು. ಸ್ನೇಹಾಸುರೇಶರು ಬಹಳ ಹೊತ್ತು ಮಾತು-ಕಥೆಯಾಡಿದರು. ಕಡೆಗೆ ಸುರೇಶನು, ' ಎಲ್ಲಿ, ತಿರುಗಿ ಬರಲೇ ಇಲ್ಲವಲ್ಲ ? '

' ಪ್ರಭಾತನು ಬರಗೊಟ್ಟಿರಲಿಕ್ಕಿಲ್ಲ. ನಾನು ಹೋಗಿ ಕರೆತರುವೆ. '

ಸ್ನೇಹಳು ಹೋದ ಮೇಲೆ ಸುರೇಶನು ಅಧೀರನಾಗಿ ಅತ್ತಿತ್ತ ಅಲೆದಾಡ ತೊಡಗಿದನು. ಬಹಳ ಹೊತ್ತಾದರೂ ಸ್ನೇಹಳಾಗಲೀ ಸುಧೆಯಾಗಲೀ ಬಾರದಿದ್ದದ್ದು ನೋಡಿ ಸುರೇಶನೂ ಮನೆಯ ಕಡೆಗೆ ಹೊರಟನು; ಮತ್ತು ಮೆಲ್ಲಮೆಲ್ಲಗೆ ಸುಧೆಯ ಕೋಣೆಯೊಳಗೆ ಹೊಕ್ಕು ನೋಡುತ್ತಾನೆ- ಸುಧೆಯು ಒಂದು ಪತ್ರ ಬರೆಯುತ್ತಿದ್ದಾಳೆ. ಸುರೇಶನು ನಿಃಶಬ್ದವಾಗಿ ಹೋಗಿ ಹಿಂದಿನಿಂದ ಲೆಕ್ಕಣಿಕೆಯನ್ನು ಎಳೆದುಕೊಂಡನು. ಚಮಕಿತಳಾಗಿ ಸುಧೆಯು ತಿರುಗಿ ನೋಡಿದಳು— ನಗೆಯೊಡನೆ ಅವಳ ಕೆನ್ನೆ ಕೆಂಪೇರಿ ಹೋದವು; ' ಅದೇನು ಚೆಂದ ? ' ಎಂದಳು.

' ನಾವು ಹಾಂ ಎಂದು ಬಾಯಿ ಬಿಟ್ಟುಕೊಂಡು ದಾರಿ ಕಾಯುತ್ತೇವೆ; ಮತ್ತೆ ನೀವುಗಳು ಒಳಗೆ ಬಂದು ಸೌಖ್ಯವಾಗಿ ಕುಳಿತು ಪತ್ರ ಬರೆಯುತ್ತಿರುವಿರಿ. ಒಳ್ಳೇ ಮನುಷ್ಯರು, ಏನೇ ಆಗಲಿ ! '

' ಕೆಲಸದ ಪತ್ರ. ಪತ್ರ ಬರೆಯಲಿಕ್ಕೂ ಸಮಯ ಬೇಕಲ್ಲವೇ ?

' ಯಾಕೆ ? ನಾನೇನು ನಿನ್ನ ಸಮಯವನ್ನೆಲ್ಲ ತಳಕ್ಕೆ ಹಾಕಿಕೊಂಡು ಕುಳಿತಿರುವೆನೆ ? ಬೇರೆ ಸಮಯದಲ್ಲಿ ಬರೆದರೆ ಸರಿ. '

‘ ಒಳ್ಳೇದು, ನಾಳಿನಿಂದ ಹಾಗೇ ಆಗಲಿ. ಇಂದು ದಯಮಾಡಿರಿ. ’

‘ ನೀನು ಬರೆ, ನಾನು ಕೂಡುತ್ತೇನೆ. ’

‘ ಇಲ್ಲ, ಅದಾಗುವದಿಲ್ಲ ! ’

‘ ಯಾರಿಗೆ ಬರೆಯುತ್ತಿರುವೆ ? ’

‘ ಕಾಕಾ ಅವರಿಗೆ. ’

‘ ನೋಡುವಾ ’ ಎಂದು ಸುರೇಶನು ಪತ್ರವನ್ನು ಕಸಿದುಕೊಂಡನು. ಮತ್ತು ಸುಧೆಯ ಕ್ರೋಧಮಿಶ್ರಿತ ನಿರಾಕರಣೆಯನ್ನೂ ಉಪೇಕ್ಷಿಸಿ ಓದಿಬಿಟ್ಟು ಗಂಭೀರ ಮುಖನಾಗಿ ನಿಂತುಕೊಂಡನು. ಸುಧೆಯು ಸಿಟ್ಟಿನಿಂದ ಹೇಳಿದಳು, ‘ ಪರರ ಪತ್ರ ಓದುವದು ಬಹಳ ಅನ್ಯಾಯ. ’

‘ ಅನ್ಯಾಯವಿರಲಿ— ನನಗೆ ಊರಿಗೆ ಹೋಗಲು ಬರೆಯುವದಾಗಿ ಕಾಕಾ ಅವರಿಗೆ ಇಷ್ಟೊಂದು ಬೇಡಿಕೊಂಡದ್ದೇಕೆ ? ಇಲ್ಲಿ ಅಷ್ಟೇನು ನಿನಗೆ ಅನನುಕೂಲವಾಗಿದೆ ? ’

ಸುಧೆಯು ಅಪ್ರತಿಭಳಾಗಿ ಸುಮ್ಮನಿದ್ದಳು.

‘ ಅನನುಕೂಲವೇನು, ಅನುಗ್ರಹಿಸಿ ಹೇಳಲೂ ಬಹುದು. ಹೇಳ ಬಾರದೆ ಏನು ಅನನುಕೂಲ ? ’

‘ ಅನನುಕೂಲವೇನೂ ಇಲ್ಲ. ’

‘ ಹಾಗಾದರೆ ಊರಿಗೆ ಹೋಗಲು ಇಷ್ಟೇಕೆ ತವಕ ? ’

‘ ಸುಮ್ಮನೇ. ’

‘ ಸುಮ್ಮನೇ ಅಲ್ಲ. ನನಗೆ ತಿಳಿದಿದೆ. ’

ಸುಧೆಯು ಸುರೇಶನ ಮುಖದ ಕಡೆಗೆ ನೋಡಿ ‘ ಏನು ? ’ ಎಂದಳು.

‘ ನನ್ನ ಮೇಲೆ ಸಿಟ್ಟಾಗಿರುವೆ. ’

ಸುಧೆಯು ನಸುನಕ್ಕು, ‘ ಅದೂ ಒಳ್ಳೆಯದೇ ’ ಎಂದಳು.

‘ ಅದು ಒಳ್ಳೆಯದಲ್ಲ. ನಿನಗೆ ಸರಿಬಾರದ್ದನ್ನು ನಾನೇನಾದರೂ ಮಾಡಿ ದರೆ ನೀನು ಹಾಗಲ್ಲವೆಂದೇಕೆ ಹೇಳುವದಿಲ್ಲ ? ನಾನು ಅಗಲೇ ಸುಧಾರಿಸಿ ಕೊಳ್ಳುವೆನು. ’

ಮಾತು ಅಷ್ಟೇನು ದೊಡ್ಡದಲ್ಲ— ಅತಿ ಸಾಧಾರಣವಾದ ಮಾತು.

ಆದರೆ ಸುರೇಶನ ಕಂಠಸ್ವರದಿಂದ ಸುಧೆಯ ಮಾತಿನ ಶಕ್ತಿಯೇ ಕಡಿಮೆಯಾಗ ತೊಡಗಿತು. ಸುರೇಶನು ಮತ್ತೆ, ' ನಿನಗೆನಿಸುತ್ತಿರಬೇಕು— ನನಗೇನೂ ತಿಳಿಯದೆಂದು. ನನಗೆ ತಿಳಿದಿದೆ. ಆದರೆ ನಿನಗೆ ಕೇಳುವದಿಷ್ಟೇ, ಇದರಲ್ಲಿ ನಿನ್ನ ಅಡ್ಡಿಯೇನು ? ನಾವು ಈ ಅಲ್ಪ ಆಮೋದದಿಂದ ತೃಪ್ತಿಗೊಳ್ಳುತ್ತಿದ್ದರೆ ನಿನ್ನ ಅನಿಚ್ಛೆಯೇಕೆ ? '

ಸುಧೆಯು ಏನು ಹೇಳಬೇಕು ? ಅನುದಿನವೂ ಆತ್ಮಸಂವರಣದಲ್ಲಿ ಅಭ್ಯಸ್ತಳಿದ್ದವಳಿಗೆ ಇಂದು ಅದೇಕೋ ವಾಕ್ಯಸ್ಫುರಣವೇ ಆಗಲೊಲ್ಲದು.

ಸುರೇಶನು ಸಹಸಾ ಅವಳ ಕೈಯನ್ನು ಹಿಡಿದುಬಿಟ್ಟನು. ರುದ್ಧಕಂಠ ದಿಂದ, ' ನಾನು ಈ ಕೆಲದಿನಗಳಿಂದಲೂ ನಿನಗೆ ಈ ಮಾತು ಕೇಳಬೇಕೆಂದು ಮಾಡಿದ್ದೆ. ಹೇಳು, ಉತ್ತರ ಕೊಡು, ನಾನು ಹೆಚ್ಚೇನೂ ಬೇಡುವದಿಲ್ಲ- ಬೇಡುವ ಅಧಿಕಾರವನ್ನೂ ಇಟ್ಟುಕೊಂಡಿಲ್ಲ. ಇಷ್ಟು ಸಲಿಗೆಯನ್ನು, ಈ ಸಹವಾಸವನ್ನು ದೂರದ ಆಪ್ತರಿಷ್ಟರೂ ಸಹ ಪಡೆಯಬಹುದು. ಅವರಿ ಗಿಂತಲೂ ನಾನು ಪರನೆ ? ನನಗೆ ಅಷ್ಟನ್ನೂ ಕೊಡಲು ಬಾರದೆ ? ಇಷ್ಟನ್ನೂ ಪಡೆಯುದಷ್ಟು ಅಯೋಗ್ಯನೇ ನಾನು ? '

ಮತ್ತೆ ಅದೇ ಆ ಉನ್ಮತ್ತತೆ— ಅದೇ ಬಗೆಯ ಬಡಬಡಿಕೆ ! ಇದನ್ನೇ ಅಂದು ಸುಧೆಯು ರೋಗಶಯ್ಯೆಯಲ್ಲಿ ಸುರೇಶನ ಕಂಣಿನಲ್ಲಿ ಕಂಡು ಅವನ ಮುಖದಿಂದ ಕೇಳಿ ಅವಳ ಮೈಮನಗಳು ನಡುಗಿಹೋಗಿದ್ದವು. ಇತ್ತಿತ್ತ ಲಾಗಿ, ಸುರೇಶನ ಕಂಣಿನಲ್ಲಿ, ಮಾತಿನಲ್ಲಿ, ವ್ಯವಹಾರದಲ್ಲಿ ಅದೇಕೋ ಅದೇ ಬಗೆಯ ಉನ್ಮಾದದ ಅಭಾಸವು ಕಂಡು ಬರುತ್ತಿದೆ ! ' ಏನು— ಇದು ? ಇದೇನು ಹಾಗಾದರೆ ? ಈ ಅಸಮಯದಲ್ಲಿ, ಅಯೋಚಿತವಾಗಿ ಅನಿರೀಕ್ಷಿತ ವಾಗಿ ಇದೇನು ? ಛಿ, ಛಿ— ಇನ್ನೇಕೆ ಅದೆಲ್ಲ ? '

ಇನ್ನು ಸುಮ್ಮನಿರುವುದು ಸರಿಯಲ್ಲವೆಂದು ಸುಧೆಯು ಕೈಬಿಡಿಸಿಕೊಂಡು ಸಾವರಿಸಿಕೊಂಡು ಸಹಜ ಕಂಠದಲ್ಲಿ, ' ಮರುಳಾದೆಯೋ ಏನು ? ' ಎಂದಳು.

ಸುರೇಶನು ಮುಂದರಿದು ಮತ್ತೆ ಅವಳ ಕೈ ಹಿಡಿದುಬಿಟ್ಟು ಉತ್ತೇಜಿತ ಕಂಠದಿಂದ, ' ಹುಂ ಮರುಳಾಗಿರುವೆ. ಉತ್ತರಕೊಡು—' ಎಂದನು.

ಸುಧೆಯು ಕೈಕೊಸರಿಕೊಂಡು ಸರಿದು ನಿಂತಳು. ಕುತ್ತಿಗೆಯನ್ನೆತ್ತಿ ಹಿಡಿದು, ತನ್ನ ಸ್ಥಿರವಾದ ಉಜ್ವಲವಾದ ಕಂಣುಗಳನ್ನು ಸುರೇಶನ ಕಂಣು ಗಳಲ್ಲಿ ನಾಟಿಸಿ, ಅಕಂಪಿತಕಂಠದಿಂದ ಹೇಳಿದಳು— ' ಇಲ್ಲ, ನಿನಗೆ

ಅಷ್ಟನ್ನೂ ಕೊಡಲು ಬಾರದು. ಪರರಿಗಿಂತ ಪರನು ನೀನು. ಗೊತ್ತಿಲ್ಲವೇ, ತೀರ ಹತ್ತಿದವರು ಹೊಂದಿದವರು ದೂರ ಸರಿದರೆ ಪರರಿಗಿಂತ ಪರರಾಗುವ ರೆಂದು ? ಆದರೂ ತಿಳಿದಿರು, ನಾನು ನಿನಗೆ ಸ್ನೇಹ-ಮಮತೆಯನ್ನು ತೋರಿಸುತ್ತ ಬಂದಿದ್ದುದು ಕೇವಲ ಸ್ನೇಹಾ ಪ್ರಭಾತರಿಗಾಗಿ. ಅವರೇ ನನ್ನ ಸರ್ವಸ್ವ. '

' ಗೊತ್ತು — ಗೊತ್ತದು ನನಗೆ. ಆದರೂ—ಆದರೂ—ನಾನೇನನ್ನೂ ಬಯಸಬಾರದೆ ? ಅಣು—ಅಣುಮಾತ್ರವೂ ? ನಾನೇನೇ ಇರಲಿ—ನಾನೆಷ್ಟೇ ದುಷ್ಟನಿರಲಿ—ಆದರೂ ನನ್ನ ನಿನ್ನ ಸಂಬಂಧವನ್ನಾರು ಬದಲಿಸಬಹುದು ? ಹಾಗೆಂದ ಮೇಲೆ ನಾನೇಕೆ ನನ್ನ ಭಾಗವನ್ನು—ಅಲ್ಲಲ್ಲ, ಹಾಗಲ್ಲ ನಾನು ಹೇಳಬೇಕೆನ್ನುವುದು—ನಾನೆನ್ನುತ್ತೇನೆ, ಬಹು ದೂರದವರೂ ಸಹ ಅದೆಷ್ಟು ಸಲಿಗೆಯಿಂದಿದ್ದರೆ ದೋಷವೆನಿಸದೋ ಅಷ್ಟಕ್ಕೂ ನಾನು ಅಯೋಗ್ಯನೆ ? '

' ಹುಂ, ಅಯೋಗ್ಯನು. ಕೇವಲ ಸ್ನೇಹಳಿಗಾಗಿ ನಿನ್ನೊಡನೆ ನನ್ನ ಸಲಿಗೆ. ನಾನು ದೂರದೂರವಾಗಿರಲೇ ಹೆಣಗಿದ್ದೇನೆ. ನಿನಗದು ತಿಳಿಯದೆ ? ಕೇವಲ ಅವಳೇ ನನ್ನನ್ನು ಎಳೆದೆಳೆದು ತಂದಿದ್ದಾಳೆ. ಜಗದಲ್ಲಿ ನಿನಗಿಂತ ಪರರು ನನಗಿನ್ನಾರೂ ಇಲ್ಲ. '

ಸುರೇಶನು ದಿಂಗ್ಮೂಢನಾಗಿ ಮತ್ತೆ ಸುಧೆಯ ಬಳಿಸಾರಿದನು. ಸುಧೆಯು ಅವನನ್ನು ಕೂರ್ಗಣ್ಣುಗಳಿಂದ ತಿವಿದು ಹೂಂಕರಿಸಿ ಹೊರಟುಹೋದಳು.

ಸುಧೆಯು ಯಾರೂ ಇಲ್ಲದಲ್ಲಿ ಹೋಗಿ ಕುಳಿತಳು. ಅದೃಷ್ಟದ ಈ ಉಪಹಾಸ ! ಮೊದಲು ಒಂದು ದಿನ ತನ್ನ ಉನ್ಮುಖ ತರುಣ ಹೃದಯವು ಆಘಾತಗೊಂಡು, ತನ್ನೆಲ್ಲ ಬಲದಿಂದ ಸುರೇಶನಿಗೆ ಪ್ರತ್ಯಾಘಾತ ಮಾಡಲು ಹೋಗಿತ್ತು. ಆಗ ಅವನನ್ನು ಎಳ್ಳಷ್ಟೂ ವಿಚಲಿತಗೊಳಿಸಲಾಗಿರಲಿಲ್ಲ. ಆದರೆ ಇಂದಿದೇನಾಯಿತು ? ಇಂದು ಅವಳು ತನ್ನ ತಾರುಣ್ಯದ ತಾಪಹೀನ ವಾದ, ಅಮ್ಲಾನವಾದ, ವಾಸನಾರಹಿತವಾದ ನೇಹವನ್ನೇ ಸುರೇಶನಿಗೆ ನೀಡುತ್ತಿರುವುದು. ಮತ್ತೆ ಇಂದಿದೇಕೆ ಈ ಅಚಿಂತ್ಯಪೂರ್ಣವಾದ ಘಟನೆ ? ಪ್ರಥಮ ಯೌವನದ ವ್ಯಾಕುಲವಾಂಛನೆಯು ಅದೆಂದೋ ಸುರೇಶನ ಕಲ್ಲೆದೆಗೆ ಅಪ್ಪಳಿಸಿ ಅವಳೆದೆಯ ಗವಿಯಲ್ಲಿ ಗುಪ್ತವಾಗಿ ಹೋಗಿದೆ. ಇಂದು ಇಷ್ಟು ದಿನಗಳ ನಂತರ ಆ ರುದ್ಧದ್ವಾರದ ಮೇಲೇಕೆ ಮತ್ತೆ ಕರಾಘಾತ ? ಈ ಕರಾಘಾತವಾದರೂ ಯಾರದು ? ಸುರೇಶನದೇನೋ ನಿಜ, ಆದರೆ ಆ ಸುರೇಶನು ಇಂದು ಅಂದಿನವನಲ್ಲ. ಸ್ನೇಹಾಸ್ಪದ ಆತ್ಮೀಯನು ಮಾತ್ರ !

ತಂಗಿಯ ಅಧಿಕಾರವನ್ನು ತನ್ನ ಹೃದಯರಾಜ್ಯದಲ್ಲಿ ಪಸರಿಸಿ ಕುಳಿತ ಸ್ನೇಹಳ ಪತಿಯು ಅವನು. ಲಜ್ಜೆಯಿಂದ ಸುಧೆಯ ಆಪಾದಮಸ್ತಕವು ರಂಜಿತ ವಾಯಿತು. ಇದೇನು ವಿಡಂಬನೆ !

ಉತ್ತರ ಕೋರಿದವನಿಗೆ ಕೇಳಬಹುದಾಗಿತ್ತಲ್ಲವೇ, ' ಇಂದು ನೀನು ನಿವೇದಿಸಬಂದುದು ಈ ಮುನ್ನವೆಲ್ಲಿತ್ತೆಂದು ? ನನ್ನ ಹೊಸ ಹರೆಯದ ಆವೇಗವನ್ನು ಕುರುಡನಂತೆ ಕಡೆಗಣ್ಣಿದ ಅವಿಚಾರಕನು ನೀನೇ ಅಲ್ಲವೆ? ನಿನಗೆ ಇಂದಿನ ಈ ಮಾತುಗಾರಿಕೆ ಒಪ್ಪೀತೆ ? ನನ್ನ ಜೀವನದ ಶೂನ್ಯತೆಗೆ ಹೊಣೆಗಾರರಾರು ? ಯಾವುದನ್ನು ನನ್ನಿಂದ ಕಸಿದು ಇನ್ನೊಬ್ಬರ ಅಡಿಯಲ್ಲಿ ಎಡೆ ಮಾಡಿದೆಯೋ ಅದನ್ನೇ ಮತ್ತೆ ನನಗೆ ನಿವೇದಿಸಬಂದೆಯಾ ? ಛಿ, ಛಿ ! ನಾಚಿಕೆಯೆನಿಸದೇ ನಿನಗೆ ? ಪ್ರಥಮ ಜೀವನದ ಸಂಕಟದಿಂದ ಪಾರಾಗಿ, ಇಂದು ಆತ್ಮನಿರ್ಭರಳಾಗಿ, ಹೊಸ ಹಾದಿಯನ್ನು ಹುಡುಕಿಕೊಂಡು ಧೀರಳಾಗಿ ಒಬ್ಬಳೇ ಸಾಗಿರುವ ಪಥಿಕಳ ಆಶ್ರಯವನ್ನು ಇಷ್ಟು ದಿನಗಳ ಮೇಲೆ ಕೋರಿ ಬರಲು ಸಂಕೋಚವಾಗದೇ ನಿನಗೆ ? ಇನ್ನು ನಿನ್ನ ಆವಶ್ಯಕತೆಯು ಅವಳಿಗೂ ಉಳಿದಿಲ್ಲ. ನೀನು ಹೋಗು.' '

ಈ ಬಗೆಯ ಉತ್ತರವು ಸುಧೆಯ ಕಂಠದಲ್ಲಿ ಎಷ್ಟೋ ಸಲ ತೂರಿ ತೂರಿ ಬರುತ್ತಿತ್ತು— ಆದರೆ ಅವಳು ತುಟಿಯ ವರೆಗೆ ಬರಗೊಟ್ಟಿದ್ದಿಲ್ಲ. ಅವಳಿಗೆ ಗೊತ್ತು– ಈ ಉತ್ತರದ ಗರಲ ಉತ್ತಾಪವೆಷ್ಟು ಎಂದು. ಆಕಾಂಕ್ಷೆಯನ್ನೇ ತೊರೆದಿರಲು ಅದರ ಉಲ್ಲೇಖವಾದರೂ ಯಾಕೆ ಬೇಕು ? ಅಲ್ಲದೆ ಈ ಬೆಂಕಿಯನ್ನು ಕಾರುವುದು ಯಾರ ಮೇಲೆ ? ಇದೇ ಈ ಸರಲ ಸ್ವಭಾವದ ವಿಶ್ವಸ್ತ ಹೃದಯದ ತನ್ನ ಸ್ನೇಹಳ ಸರ್ವಸ್ವವಾದ ಸುರೇಶನ ಮೇಲೆ ! ಎಂದೇ ಅವಳು ಆ ಅಗ್ನಿವರ್ಷಣವನ್ನು ಮಾಡದೇ ಹೋದಳು.

' ಛಿ, ಛಿ, ಸ್ನೇಹಳಿಗೆ ತಿಳಿದರೆ ! ' ಸುಧೆಯು ಹಣೆಯ ಬೆವರೊರೆಸಿಕೊಂಡಳು. ಇದಕ್ಕಿಂತ ಲಜ್ಜಾಸ್ಪದವಾದ ಮಾತು ಮತ್ತೊಂದಿಲ್ಲ. ಸ್ನೇಹಳ ಪತಿಯ ಮೇಲೆ ಸುಧೆಯು ಸಿಟ್ಟಿರಲಾರದು; ಸೆಡವಿರಲಾರದು ! ಆದರೆ ಇಂದಿದೇನು ವಿಡಂಬನೆ ? ಅವಳಂತೂ ಸ್ನೇಹಾ ಪ್ರಭಾತರೊಡನೆ ಸುರೇಶನನ್ನೂ ತನ್ನ ಸ್ನೇಹವೇಷ್ಟನೆಯಲ್ಲಿ ಎಳೆದುಕೊಂಡಿದ್ದಳು. ಇಂದು ಸುಧೆಯ ವಿಶ್ವಸ್ತ ಹೃದಯಕ್ಕೆ ಮತ್ತೇಕೆ ಸುರೇಶನ ಈ ದಂಶನವು ! ಇದು ಸುಧೆಯ ಇಚ್ಛಾಕೃತವೆಂದು ಸ್ನೇಹಳು ತಿಳಿದುಕೊಂಡಳಾದರೆ ? ಸುಧೆಯು ಕುಳಿತಲ್ಲಿಯೇ ಮಲಗಿ ಎರಡೂ ಕೈಗಳಿಂದ ಮುಖ ಮುಚ್ಚಿಕೊಂಡಳು.

ರಾತ್ರಿಯೆಲ್ಲ ಈ ಚಿಂತೆಯಲ್ಲಿಯೇ ಕಳೆದುಹೋಯಿತು. ‘ ಉಪಾಯ ವೇನು ? ಉಪಾಯವೇನು ? ಮೈದೆಗೆದರೆ ಸ್ನೇಹಾ ಸಂದೇಹಪಟ್ಟು- ಕೊಂಡರೆ ? ಸುರೇಶನ ಚಂಚಲತೆಯನ್ನು ಸ್ನೇಹಾ ಕಂಡು ಹಿಡಿದಿದ್ದಾಳೆ. ಆದರಲ್ಲಿ ನಾನು ಹೀಗೆ ಮೈದೆಗೆದು ಬಿಟ್ಟರೆ ಅವಳು ಕೂಡಲೇ ತಿಳಿದು ಬಿಡು ವಳು. ನಾನು ಎದುರಿಗೆ ಇಲ್ಲದಾಗ ತುಸು ವಿಕೃತವಾಗಿಯೇ ತಿಳಿದುಕೊಳ್ಳ ಬಹುದು. ಹೋಗುವದು ಉಚಿತವಲ್ಲ. ಹತ್ತಿರ ಇದ್ದು ಕೊಂಡೇ ಈ ಲಜ್ಜಾಕರ ಕಲಂಕವನ್ನು ತೊಳೆದುಹಾಕುವ ಉಪಾಯ ಮಾಡಬೇಕು. ’ ಬೆಳಗಿನ ಜಾವಕ್ಕೆ ಕ್ಲಾಂತಳಾದ ಸುಧೆಯು ಮಲಗಿಕೊಂಡಳು. ಆದರೆ ಕನಸಿನಲ್ಲಿಯೂ ಇದೇ ಹಳವಂಡ.

## ೧೮

ಎಲ್ಲರೂ ಮುಂಗೇರಿನಿಂದ ಊರಿಗೆ ಬಂದರು. ಊರಿಗೆ ಬಂದು ಸುಧೆಯು ಸಾವಧಾನದಿಂದಿರಲು ಯತ್ನಿಸತೊಡಗಿದಳು. ತಿಳುವಳಿಕೆಯೂ ತೂಕವೂ ತಪ್ಪಿಹೋಯಿತೆಂದೂ ದೂರ ದೂರ ಇದ್ದುಕೊಳ್ಳುವದೇ ವಿಹಿತ ವೆಂದೂ ಈಗ ಅವಳಿಗೆ ತೋರತೊಡಗಿತು. ಸಲಿಗೆಯಿಂದ ವಿಪರೀತ ಪರಿ ಣಾಮವಾಗಿ ಹೋಗಿದೆ ! ಸಂಬಂಧವೇ ಅಂತಹದಲ್ಲವೆ ? ಸುಧೆಯು ಸುರೇಶ ನೊಡನೆ ವ್ಯವಹರಿಸುವಾಗ ಅಸರಲಮಾರ್ಗದಿಂದಲೇ ನಡೆದು ಹೋಗ ಬೇಕೆಂದು ವಿಧಿಲಿಪಿಯಿದ್ದಂತೆ ಕಾಣುತ್ತದೆ. ಸಮಾಧಾನವಿಷ್ಟೇ— ಈ ರೀತಿ ಯಲ್ಲಿ ಸುರೇಶನ ಇಂದಿನ ದುರ್ಬಲತೆಯು ದೂರಾಗಲೂ ಬಹುದು.

ಸುಧೆಯು ಸುರೇಶನೊಡನೆ ಮಾತುಕಥೆ ನಿಲ್ಲಿಸಿಬಿಟ್ಟಳು. ಭೆಟ್ಟಿಗೂ ಅರದಾಳ ಬಿತ್ತು. ಸ್ನೇಹಳೊಡನೆಯೂ ಮೊದಲಿನಂತೆ ಆಮೋದ ಪ್ರಮೋದ ಕ್ಕೆಂದು ಕೂಡುತ್ತಿಲ್ಲ. ದಿನಕ್ಕೊಂದು ಹೊಸದಾಗಿ ಹುಡಿಕಿಕೊಂಡ ಗೃಹಕಾರ್ಯ ಗಳಲ್ಲಿ ದಿನವೆಲ್ಲ ಕಳೆಯುತ್ತಿದ್ದಳು. ಪ್ರಭಾತನು ಅವಳನ್ನು ಕಾಡಿದಾಗ ಮಾತ್ರ ಸುಧೆಯು ತುಸು ಮೈಮರೆತು ಮೈದಡವಿ ಆವನನ್ನು ರಮಿಸುತ್ತಿದ್ದಳು. ಸ್ನೇಹಳು ಸುಧೆಯ ಈ ಹೊಸ ರೀತಿಗೆ ಅಸಂತುಷ್ಟಳಾಗಿ ಅವಳೊಡನೆ ಯಾವಾ ಗಲೂ ವಾದಿಸುತ್ತಿದ್ದಳು. ಸುಧೆಯು ನಕ್ಕು ಹಾರಿಸಿಬಿಟ್ಟು, ‘ ಚೆನ್ನಾಗಿ

ಮನಸ್ಸು ಹಾಕದಿದ್ದರೆ ಸಂಸಾರವು ಸಾಗುವ ಬಗೆ ಹೇಗೆ ? ' ಎಂದು ಹೇಳಿ ಬಿಡುವಳು. ಇತ್ತ ದಿವಾಣನು ಅವಳಿಗೆ ಏನಾದರೂ ಸಲಹೆ ಕೇಳಿದರೆ, ' ಇನ್ನು ನನ್ನನ್ನು ಅದೆಲ್ಲ ಜಂಜಾಲದಲ್ಲಿ ಎಳೆಯಬೇಡಿರಿ. ಸಾಧ್ಯವಾದಷ್ಟು ಮಾಡಿರಿ. ನಿಮಗೆ ಅಸಾಧ್ಯವಾದದ್ದು ಬಿದ್ದುಕೊಂಡಿರಲಿ ' ಎಂದು ಹೇಳಿ ಕಳಿಸುವಳು. ಸುಧೆಯ ಚಿತ್ತವು ವಿಕ್ಷಿಪ್ತವಾಗಿರುವದೆಂದು ತಿಳಿದು ಅವನು ಹೆಚ್ಚಿಗೆ ಕೇಳುತ್ತಿರಲಿಲ್ಲ; ಕೇಳದಿರಲೂ ಆಗುತ್ತಿರಲಿಲ್ಲ.

ಸುಧೆಯು ಒಳಗೊಳಗೇ ಸುರೇಶನನ್ನು ತಿರಸ್ಕರಿಸಲು ಯತ್ನಿಸತೊಡಗಿ ದಳು. ದೃಢಚರಿತ್ರನಲ್ಲದಾತನು ಅದೇತರ ಮನುಷ್ಯ ? ಇಂದು ಸ್ನೇಹ ಳನ್ನು ಬಿಟ್ಟು ಅನ್ಯಳ ಚಿಂತನದಲ್ಲಿ ಒಂದರೆಗಳಿಗೆ ಕಳೆದರೂ ಅದು ವಿಶ್ವಾಸ ಘಾತವಲ್ಲವೆ ? ಸುರೇಶನು ಸುಧೆಯ ವಿವೇಚನೆಯಲ್ಲಿ ಇಂದು ಚರಿತ್ರಹೀನನೇ!

ಆದರೆ ಸುಧೆಯು ತಿಳಿದುಕೊಂಡಷ್ಟು ಆತ್ಮಗ್ಲಾನಿಯಾಗಲೀ ಚರಿತ್ರ-ಹೀನತೆಯಾಗಲೀ ಸುರೇಶನಲ್ಲಿ ತಲೆದೋರಿಲ್ಲವೆಂದೇ ಹೇಳಬೇಕು. ಸ್ನೇಹಳ ಬಗ್ಗೆ ಅವನ ಪ್ರೇಮವು, ವಿಶ್ವಾಸವು ಒಂದಣುವೂ ಕಡಿಮೆಯಾಗಿಲ್ಲ. ಆದರೆ ಈಗವನಿಗೆ ಎನಿಸುತ್ತಿದೆ— ತನ್ನ ಪ್ರೀತಿಯ ಭಾಂಡಾರವನ್ನು ತೂಗಿ ಕೊಡು ವಾಗ ತನ್ನಿಂದ ಅನ್ಯಾಯವಾಗಿ ಹೋಗಿದೆ ಎಂದು. ಅದನ್ನೇ ಇಂದು ಸುಧಾ-ರಿಸಿ ಸಮತೆಗೆ ತರಲು ಅವನು ಹಾತೊರೆಯುತ್ತಿದ್ದಾನೆ. ಇದರಲ್ಲಿ ಸುರೇಶನ ದೇನು ತಪ್ಪು ?

ಅಲ್ಲದೇ ಸುಧೆಯು ತನ್ನ ಅವಿಶ್ರಾಂತ ಸೇವೆಯಿಂದ, ಶುಶ್ರೂಷೆಯಿಂದ, ಉದಾರಹೃದಯದಿಂದ, ಸ್ನೇಹದ ವ್ಯವಹಾರದಿಂದ, ತನ್ನ ನಗೆಯಿಂದ, ದುಃಖವನ್ನು ನುಂಗಿದ ನಲಿವಿನಿಂದ, ತನ್ನ ಸೌಂದರ್ಯದಿಂದಲೂ ಸುರೇಶನ ಹೃದಯವನ್ನು, ನಿಮಿಷ ನಿಮಿಷವೂ, ದಿನ ದಿನವೂ, ಮಾಸ ಮಾಸವೂ, ವರ್ಷ ವರ್ಷವೂ ಗೆಲ್ಲುತ್ತ ಬಂದಿಲ್ಲವೆ ? ಈ ಎಲ್ಲ ಪ್ರಲೋಭನದ ಫಲವಾಗಿ ಅವನ ವಿಮುಖ ಪುರುಷಹೃದಯವು ತನ್ನ ಅರ್ಧಾಂಗಿಯೆನಿಸಿಕೊಂಡವಳ ಕಡೆಗೆ ಉನ್ಮುಖವಾಗಿ ನೋಡಿದರೆ ಆಶ್ಚರ್ಯವೇತರದು— ಅಪರಾಧ ವೇತರದು ?

ಕೆಲವು ದಿನಗಳು ಕಳೆದ ಮೇಲೆ ಸುಧೆಯು ನೋಡಿದಳು— ತಾನು ಯೋಜಿಸಿದ ಹೊಸ ರೀತಿಯಿಂದ ಪ್ರಯೋಜನವಾಗಿಲ್ಲವೆಂದು. ಸುರೇಶನಿಂದ ತಾನು ಮಾರು ದೂರ ಸರಿದು ಅವನೊಡನೆ ಒಂದು ಮಾತನ್ನೂ ಆಡುತ್ತಿಲ್ಲ ವಾದರೂ ಸುರೇಶನ ಆ ದುರ್ಬಲತೆಯು ಇನ್ನೂ ಮಾಯವಾಗಿಲ್ಲವೆಂದು

ಅವಳು ಅವನ ಚಲನ-ವಲನಗಳಿಂದ, ಎಂದಾದರೊಮ್ಮೆ ಕಂಡ ಅವನ ಮುಖಭಾವದಿಂದ ಊಹಿಸಿಕೊಂಡಳು. ಸುರೇಶನು ಕಾರಣವಿಲ್ಲದೆ ಮನೆಯೊಳಗೆ ಬರುತ್ತಿಲ್ಲ. ಇರುಳಲ್ಲದೆ ಸ್ನೇಹಳನ್ನು ಸಹ ಕಾಣುತ್ತಿಲ್ಲ. ಬೇಟೆಗೆ ಹೋಗುತ್ತಿಲ್ಲ. ಮನೆಯ ಹೊರಗೆ ಅಂಥದೇನು ಕೆಲಸವೋ ತಿಳಿಯದಾದರೂ ಹೊರಗೇ ಅವನ ದಿನವೆಲ್ಲ ಕಳೆದು ಹೋಗುವದು. ದಿಂಗ್ಮೂಢಳಾದ ಸ್ನೇಹಳು, ಆಗಾಗ ಸುಧೆಗೆ, 'ಅಕ್ಕ, ಇಬ್ಬರೂ ಒಮ್ಮೆಗೇ ನನ್ನ ಕೈಬಿಟ್ಟಿರಾ ?' ಎಂದು ಕರುಣೆಯಿಂದ ಕೇಳಿದಾಗಲೆಲ್ಲ ಸುಧೆಯು ಕರಗಿ ಉಪಾಯ ಹುಡುಕತೊಡಗುವಳು.

ಅಂದಿನ ಬೈಗು ಸುಧೆಯು ಸ್ನೇಹಳನ್ನು ಹುಡುಕಲು ಹೋಗಿ ನೋಡುತ್ತಾಳೆ – ಕೋಣೆಯೊಳಗೆ ಸ್ನೇಹಾ ಸುರೇಶರು. ಸುಧೆಯು ಬದಿಗೆ ಸರಿದು ನಿಂತುಕೊಂಡು ಕೇಳಿದಳು.

ಸ್ನೇಹಳು ಸುರೇಶನಿಗೆ, 'ನಿನಗೆ ಆಗಿರುವದಾದರೂ ಏನು ? ಹೊರಗೆ ಅಷ್ಟೇನು ಕೆಲಸ ?' ಎಂದು ಕೇಳುತ್ತಾಳೆ.

ಸುರೇಶನು ನಕ್ಕು, 'ಏನೂ ಇಲ್ಲ' ಎಂದನು.

'ಹಾಗಾದರೆ ಮಧ್ಯಾಹ್ನವಾಗಲೀ ಸಾಯಂಕಾಲವಾಗಲೀ ಮಾತಾಡಲು ಬರುತ್ತಿಲ್ಲವೇಕೆ ?'

ಸುರೇಶನು ಒಂದು ಕ್ಷಣ ಸುಮ್ಮನಿದ್ದು ಹೇಳಿದನು, 'ಮನಸ್ಸಾಗುವದಿಲ್ಲ. ಯಾಕೆ ? ನಿನ್ನ ಮನಸ್ಸಿಗೆ ಸಮಾಧಾನವಿರುವದಿಲ್ಲವೆ ?'

'ಮನಸ್ಸಿಗೆ ಅಸಮಾಧಾನವಾಗದಿದ್ದರೂ, ಹೇಳಬಾರದೆ ನೀನೇಕೆ ಬರುವದಿಲ್ಲ ?'

'ಸ್ನೇಹಾ, ಇನ್ನೆಲ್ಲಿಗಾದರೂ ಹೋಗೋಣ, ಬರುವೆಯೇನು ?'

'ಎಲ್ಲಿಗೆ ?'

'ಎಲ್ಲಿಗಾದರೂ ಸರಿ — ಇನ್ನಾವದೇ ದೇಶಕ್ಕೆ. ಅಂದರೆ ಹಗಲಿರುಳೂ ನಾನು ನಿನ್ನ ಹತ್ತಿರವೇ ಇದ್ದು ಬಿಡುವೆ.'

ಸ್ನೇಹಳು ಮುಖವನ್ನು ಭಾರವಾಗಿಸಿ ಹೇಳಿದಳು, 'ಮತ್ತೆ ? ನನಗಂತೂ ಸಾಹಸವಾಗುವದಿಲ್ಲ. ಅದಕ್ಕಿಂತ ಹೀಗೇ ಇದ್ದು ಬಿಡು, ಇದೇ ಸುಖ.'

ಸುರೇಶನು ಈ ಸಲ ದುಶ್ಚಿಂತೆಯನ್ನು ನಿವಾರಿಸಿಕೊಳ್ಳಲು ಓಡಿಹೋಗಬೇಕೆಂದು ಬಯಸುತ್ತಿಲ್ಲ. ಈಗೊಮ್ಮೆ ಈ ದುಶ್ಚಿಂತೆಯ ಅಂಕುರವನ್ನು ಕಂಡು ಹೆದರಿಕೊಂಡು ಓಡಿಹೋಗಿದ್ದನು. ಆದರೆ ಆಗ ಅದೃಷ್ಟವು ಅವನಿಗೆ

ಅನುಕೂಲವಾಗಿರಲಿಲ್ಲ, ಈಗ ಆ ಬಯಕೆಯಿರದಿದ್ದರೂ, ಸ್ನೇಹಳಿಗೆ ದಿನ ದಿನವೂ ಅನ್ಯಾಯ ಮಾಡಿದಂತಾದೀತೆಂದು ಶಂಕಿಸಿ ಅವಳೊಡನೆ ದೂರ ಹೋಗಬೇಕೆಂದೆನಿಸುವದು. ಆದರೆ ಸ್ನೇಹಳು ಒಪ್ಪಲಿಲ್ಲ.

ಸುರೇಶನು ಹೊರಗೆ ಹೋಗುತ್ತಿದ್ದನು. ಹಿಂದಿನಿಂದ ಕರೆದಂತಾಯಿತು– ' ಕೇಳು —' ಎಂದು. ತಿರುಗಿ ನೋಡುತ್ತಾನೆ– ಸುಧೆ !

ಸುಧೆಯು, ' ಹೀಗೆ ಬಾ, ಕೆಲವೊಂದು ಮಾತುಂಟು ' ಎಂದಳು.

ಸುರೇಶನ ಹೃದಯದ ರಕ್ತವೆಲ್ಲ ತರಂಗಿತವಾಯಿತು. ಮೂಗು ಕಿವಿ ಕೆನ್ನೆಗಳು ಕೆಂಪೇರಿಹೋದವು. ಅತಿಕಷ್ಟದಿಂದ ಉಚ್ಛ್ವಾಸವನ್ನು ದಮನ ಮಾಡಿಕೊಂಡು ಸುರೇಶನು ಸುಧೆಯ ಹಿಂದೆ ಹಿಂದೆ ನಡೆದನು.

ಸುಧೆಯು, ' ನೀನು ಸ್ನೇಹಳನ್ನೊಡಗೊಂಡು ದೂರ ಹೋಗಬೇಕೆನ್ನುವೆಯಾ ? ' ಎಂದಳು.

ಮುಖ ತಗ್ಗಿಸಿ ಸುರೇಶನು, ' ಹುಂ ' ಎಂದನು.

' ಇದೇನು ಕೆಡಕಲ್ಲ, ಒಳ್ಳೆಯದೇ. ಹೋಗು. ಆದರೆ ಕೆಲವೊಂದು ಮಾತುಂಟು. '

' ಹೇಳು. '

ಸುಧೆಯು ತನ್ನ ಹರವಾದ ಕಪ್ಪು ಕಂಣುಗಳಿಂದ ಸುರೇಶನ ಮುಖವನ್ನು ಕಣ್ಣಾಪೆಯುನ್ನಲುಗಿಸದೆ ಬೆಳಕುಗುವ ನೋಟದಿಂದ ನೋಡುತ್ತ, ' ಆ ಮೇಲೆ ? ಮರಳಿ ನನ್ನೆದುರಿಗೆ ಬಂದಾಗ ಈಗಿನ ನಿನ್ನ ಮಂಕು–ಮರುಳು ನಿಚ್ಚಳವಾಗಿ ನೀನು ಎಚ್ಚರವಾದದ್ದು ನೋಡಬಹುದಷ್ಟೇ ನಾನು ? '

ಸುರೇಶನು ಉತ್ತರಕೊಡಲಿಲ್ಲ. ಅವನ ನೋಟವು ನತವಾಯಿತು. ಸುಧೆಯು ಮತ್ತೆ, ' ಹೇಳು – ನನಗೆ ಉತ್ತರಬೇಕು. ಹಾಗೆ ನಿಚ್ಚಳವಾಗಿ ಅಚ್ಚಮನದಿಂದ ಬರಲಾರೆಯಾದರೆ ಹೀಗೆ ದೂರ ಸರಿದು ಹೋಗುವದು ವಿಡಂಬನೆ ಮಾತ್ರ. ಹೇಳು – ಹಾಗೆ ಬರಬಹುದಷ್ಟೆ ? '

ಸುರೇಶನು ಮುಖವೆತ್ತಿ ಆವೇಗರುದ್ಧಸ್ವರದಲ್ಲಿ, ' ನಿಜ, ಸುಧಾ – ನಾನು ದೂರ ಸರಿದು ಹೋಗುವದು ವಿಡಂಬನೆ ಮಾತ್ರ. ನಾನು ಅದಕ್ಕಾಗಿ ದೂರ ಹೋಗುವೆನೆಂದು ತಿಳಿಯಬೇಡ—' ಎಂದನು.

' ಹಾಗಾದರೆ ? ಹಾಗಾದರೆ ಯಾಕೆ ಹೋಗುವೆ ? '

‘ ಸ್ನೇಹಳಿಗೆ ಅನ್ಯಾಯ ಮಾಡೇನೆಂಬ ಭಯದಿಂದ. ’ ಸುಧೆಯು, ದೃಢಕಂಠದಿಂದ ಹೇಳಿದಳು, ‘ ಮತ್ತೆ, ಈಗ ಮಾತ್ರ ಅವಳ ಬಳಿ ನ್ಯಾಯವಾಗಿ ನಡೆದುಕೊಳ್ಳುವೆಯೇನು ? ಅವಳನ್ನುಳಿದು ಇನ್ನೊಬ್ಬಳ ಪ್ರೇಮ ಚಿಂತನೆ ಮಾಡಿದೆಯಾದರೆ ಅದು ಅಮಾರ್ಜನೀಯ ಅಪರಾಧವೆಂದೆನಿಸದೇ ನಿನಗೆ ? ’

ಸುರೇಶನು ಸ್ಖಲಿತಕಂಠದಿಂದ ಹೇಳಿದನು, ‘ ಅವಳ ಬಳಿ ಇದು ಅಮಾರ್ಜನೀಯ ಅಪರಾಧವೆ ? ಹಾಗಾದರೆ ನಿನ್ನಬಳಿ ನಾನು ಮಾಡಿದ ಅಪರಾಧವು ಮಾರ್ಜನೀಯವೇನು ? ’

‘ ಆದರೆ ನಾನು ನಿನಗೆ ಮಾರ್ಜನಾದಾನ ಮಾಡಿದ್ದೇನೆ. ’

ಸುರೇಶನು ತುಂಬಿ ಬಂದ ದನಿಯಲ್ಲಿ ಹೇಳಿದನು, ‘ ಯಾಕೆ ಮಾಡಿದೆ ? ನನಗೇನು ನಿನ್ನ ಮಾರ್ಜನಾದಾನ ಬೇಕಿರಲಿಲ್ಲ. ನಾನು ಈಗ ಆ ಅಪರಾಧದ ಪ್ರಾಯಶ್ಚಿತ್ತ ಮಾಡಿಕೊಳ್ಳಬಯಸುತ್ತೇನೆ. ನೀನು ನನಗಷ್ಟರ ಅನುಕೂಲ ಮಾಡಿಕೊಡಬೇಕು. ನಾನು ನಿನ್ನ ಹತ್ತಿರಕ್ಕೆ– ತೀರ ಹತ್ತಿರಕ್ಕೆ ಬರಬೇಕೆನ್ನುವದಿಲ್ಲ––, ದೂರದಿಂದಲೇ ನನ್ನ ಪಾಪದ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕೆನ್ನುವೆ. ಎಂದೇ ಇಂದು ಬೇಡುವ ಅಧಿಕಾರವಿಲ್ಲದಿದ್ದರೂ ನಿನಗೆ ಬೇಡುತ್ತೇನೆ. ಈ ಪ್ರಾಯಶ್ಚಿತ್ತವನ್ನು ಈ ಶಾಸ್ತಿಯನ್ನು ಶಿರಸಾವಹಿಸಬೇಕೆನ್ನುತ್ತೇನೆ. ಸುಧಾ ! ಈ ಶಾಸ್ತಿಯಲ್ಲಿಯೇ ನನಗೆ ಇಂದು ಸುಖವಿದೆ ! ಇಷ್ಟು ಸುಖವನ್ನು ನೀನು ನನಗೆ ಕೊಡಬೇಕು ! ’

‘ ಒಂದು ಅನ್ಯಾಯದ ಪ್ರಾಯಶ್ಚಿತ್ತಮಾಡಿಕೊಳ್ಳಲು ಹೋಗಿ ಇನ್ನೊಂದು ಅನ್ಯಾಯವನ್ನು ಮಾಡುವದೆ ? ಈ ಪ್ರಾಯಶ್ಚಿತ್ತಕ್ಕೆ ನಾನು ಅನುವುಗೊಡಬಹುದೆಂದು ನೀನು ಕನಸಿನಲ್ಲಿಯೂ ತಿಳಿಯಬೇಡ. ಗೊತ್ತೆ ನಿನಗೆ–– ಯಾಕೆ ನಾನು ಮಾರ್ಜನೆಮಾಡಿರುವೆನೆಂದು ? ನೀನೆಂದು ನಿನಗೆ ಮಾರ್ಜನೆಮಾಡಲಿಲ್ಲ. ಸ್ನೇಹಳಿಗಾಗಿ ನಿನಗೆ ಮಾರ್ಜನೆಮಾಡಿದ್ದೇನೆ. ನಿನಗೆ ನನಗೆ ಎಂದಿನ ಯಾವ ಸಂಬಂಧ ? ನೀನಿನ್ನು ನನಗೇನೂ ಅಲ್ಲ. ಎಂದೂ ಇರಲಿಲ್ಲ. ’

ಸ್ತಂಭಿತ ಸುರೇಶನ ಅಡಿಯ ಬುಡದಲ್ಲಿನ ನೆಲವೇ ಸರಿದು ಹೋದಂ–ತಾಯಿತು. ಮಿಂಚು ಬಂದು ಮೈದಡವಿದಂತಾಯ್ತು. ಅತಿ ಕಷ್ಟದಿಂದ

ಇಷ್ಟನ್ನು ಮಾತ್ರ ಉಚ್ಚರಿಸಿದನು, ' ಮುಖದ ಮುಂದೆ ಇಷ್ಟೊಂದು ನಿರ್ದಯತೆಯನ್ನು ಯಾರೂ ತೋರಿಸರು. ನೀನು ಏನೇ ಅಂದುಕೊಳ್ಳು; ಆದರೆ ಈ ಭಿಕ್ಷೆಯೊಂದನ್ನು ಮಾತ್ರ—'

' ತುಸು ಮೆತ್ತನೆಯ ಮಾತಿನಲ್ಲಿ ಹೇಳಲೆ? ಮಾತು ಬಹಳ ಬಿರುಸಾಯಿತೇನು? ಮನಸ್ಸಿಗೆ ಹತ್ತಿತೆ? ನನ್ನ ಪ್ರಥಮ ಜೀವನದಲ್ಲಿ ನೀನು ಈ ದಯೆಯನ್ನು ತೋರಿಸಿದ್ದೆಯಾ? ಇಂಥ ಸಾಮಾನ್ಯ ಮಾತೂ ಮನಸ್ಸಿಗೆ ತಾಕಿದರೆ ತಾಳಲಾರದ ಸಂಕಟವಾಗುವದೆಂದು ಆಗ ಒಮ್ಮೆಯಾದರೂ ನಿನಗೆನಿಸಿತ್ತೆ? ಒಮ್ಮೆ ಒಂದು ಅರೆನಿಮಿಷವಾದರೂ ನನ್ನ ನೆನವು ನಿನಗಾಗಿತ್ತೆ? ನೆನೆಸದೆಯಿದ್ದದ್ದು ನೆಟ್ಟಗೇ ಇತ್ತು. ಆದಕ್ಕಾಗಿ ನಿನ್ನ ಬಗ್ಗೆ ನನ್ನಲ್ಲಿ ಶ್ರದ್ಧೆಯುಂಟಾಗಿತ್ತು. ನೀನು ಸುಚರಿತ್ರನೆಂದೆನಿಸಿತ್ತು. ಏಕನಿಷ್ಠನೆಂದು ತೋರಿತ್ತು. ಸ್ನೇಹಳನ್ನು ಪ್ರೀತಿಸಿ ನನ್ನನ್ನು ಪತ್ನಿಯಹಾಗೆ ಕಾಣಲು ನಿನಗೆ ಒಪ್ಪಿತವಾಗಲಿಲ್ಲವೆಂದು ಮನವರಿಕೆಯಾಗಿತ್ತು. ಆದರೆ ಇಂದು? ಇಂದು ನನ್ನ ಆ ಶ್ರದ್ಧೆಯನ್ನೂ ಸಹ ಹುಡಿಗೂಡಿಸಬಂದೆಯಾ?'

ಸುರೇಶನು ಮಂಕನಂತಾಗಿ ಮೆಲ್ಲಮೆಲ್ಲಗೆ ಒಂದು ಆಸನದ ಮೇಲೆ ಕುಸಿದು ಕುಳಿತನು. ಸುಧೆಯು ಬಹಳ ಹೊತ್ತಿನ ವರೆಗೆ ಎವೆಯಿಕ್ಕದೆ ಅವನನ್ನೇ ನೋಡಿ ನೋಡಿ, ಕೊನೆಗೆ ಒಮ್ಮಿಗೇ ಅವನ ಹತ್ತಿರ ಬಂದು, ಕಂಪಿತಕಂಠದಿಂದ ಹೇಳಿದಳು, ' ಕ್ಷಮಿಸು, ನಾನು ಅನ್ಯಾಯದ ಅನೇಕ ಮಾತುಗಳನ್ನಾಡಿದೆ. ಈ ಆಘಾತವನ್ನು ನಾನು ನಿನಗೆ ಕೊಡಲು ಇನ್ನು ಎಳ್ಳಷ್ಟೂ ಇಚ್ಛಿಸುವದಿಲ್ಲ. ನನ್ನ ಅದೃಷ್ಟದ ದೋಷದಿಂದ, ಸ್ವಭಾವ ವಶದಿಂದ, ನಾನು ಹೊಟ್ಟೆಯಲ್ಲಿದ್ದದ್ದನ್ನು ಹೊರಗೆಡವದಿರಲಾರೆ, ಕ್ಷಮಿಸು. ನಾನು ನಿನ್ನನ್ನು ಆತ್ಮೀಯನೆಂದೇ ತಿಳಿದಿದ್ದೇನೆ; ವಿಶ್ವಾಸವಿರಿಸಿದ್ದೇನೆ, ಗೆಳೆಯನೆಂದು ಭಾವಿಸಿದ್ದೇನೆ. ನನ್ನ ಸ್ನೇಹಳ ಪತಿಯು ನೀನು. ನಿನಗೆ ನಾನು ದುಃಖಕೊಡಲು ಇಚ್ಛಿಸುವದಿಲ್ಲ.'

ಸುರೇಶನು ಎರಡೂ ಕೈಗಳಿಂದ ಮುಖ ಮುಚ್ಚಿಕೊಂಡು ಆರ್ತಕಂಠದಿಂದ, ' ಸಾಕು ಸಾಕು, ಇನ್ನು ಬೇಡ. ಈ ದಯೆ ಇನ್ನು ಬೇಡ.'

ಸುಧೆಯು ಸುಮ್ಮನಾಗಲಿಲ್ಲ. ' ನಾನು ನಿನ್ನನ್ನು ಮೊದಲಿನಂತೆ ಅನನ್ಯಪರಾಯಣನಾಗಿ ಸ್ನೇಹಾಗತಪ್ರಾಣನಾಗಿರುವುದನ್ನೇ ನೋಡಲು ಬಯಸುತ್ತೇನೆ. ನಾನು ಇದಕ್ಕಾಗಿಯೇ ಕ್ಷೋಭೆಗೊಂಡು ನಿನಗೆ ಅಷ್ಟು ಕಹಿ ಮಾತುಗಳನ್ನಾಡಿದ್ದು– ಸೇಡು ತೀರಿಸಿಕೊಳ್ಳಲೆಂದಲ್ಲ.'

' ಅತ್ಯಂತ ನಿಷ್ಠುರಳು ನೀನು ! ಇಷ್ಟನ್ನೂ ಒಪ್ಪಿಕೊಳ್ಳಲಾರೆಯಾ ? " ನನಗೆ ನ್ಯಾಯವಾದದ್ದೂ ದೊರೆತಿಲ್ಲವೆಂದು; ನಿನಗೂ ನ್ಯಾಯವಾಗಿ ದೊರಕಬೇಕಾದ್ದರ ಒಂದಣುವನ್ನೂ ಸಲ್ಲಿಸದೆ ಇಂದು ನಾನು ಸೇಡು ತೀರಿಸಿಕೊಳ್ಳುತ್ತಿರುವೆನೆಂದು ? " ನಾನು ಇಷ್ಟಕ್ಕೂ ಅಯೋಗ್ಯನೇ ? ನಿನ್ನ ಸಿಟ್ಟನ್ನೂ— ನಿನ್ನ ಸೇಡನ್ನೂ ಪಡೆಯುವಷ್ಟು ಅಧಿಕಾರವು ನನಗಿಲ್ಲವೆ ?— ಒಂದು ದಿನ ಈ ಅಧಿಕಾರವಿತ್ತು— ಆ ದಿನದ ಮಾತನ್ನು ನೆನೆದಾದರೂ— '

' ನಿನ್ನ ಮೇಲೆ ನನ್ನದು ಅದೇತರ ಸಿಟ್ಟು ? ಯಾವ ದಿನವೂ ನಿನ್ನೊಡನೆ ನನ್ನ ಯಾವ ಸಂಪರ್ಕವೂ ಇರಲಿಲ್ಲ. '

ಸುರೇಶನು ಎದ್ದು ಅಲ್ಲಿಂದ ಸವೇಗವಾಗಿ ಹೊರಟು ಹೋದನು.

ಸುಧೆಯು ತವರೂರಿಗೆ ಹೋಗುವದಾಗಿ ಆಕಸ್ಮಾತ್ತಾಗಿ ಎಲ್ಲರಿಗೂ ಗೊತ್ತಾಯಿತು. ತಿರುಗಿ ಬರುವದಿಲ್ಲವೆಂದೂ ಎಲ್ಲರ ಗ್ರಹಿಕೆಯಾಯಿತು.

ದಿವಾಣನು ' ಇದೇನು ತಾಯಿ ! ' ಎಂದನು.

' ಪ್ರಭಾತನ ಅಸ್ತಿಯನ್ನು ಪರರಿಗೇಕೆ ಬಿಡಲಿ ಕಾಕಾ ? ' ಎಂದು ಅವನಿಗೆ ಉತ್ತರ ಕೊಟ್ಟಳು.

ಸುಧೆಯ ನಿಶ್ಚಿತಭಾವವನ್ನು ನೋಡಿ ದಿವಾಣನು ಸುಮ್ಮನಾದನು. ಸುರೇಶನಿಗೆ, ' ಹಾಗಾದರೆ ನನ್ನ ಕಾಶೀವಾಸವನ್ನು ನೀವು ಘಟಿಸಿ ಕೊಡಬಾರದೆನ್ನುವಿರಾ ? ' ಎಂದನು.

ಸುರೇಶನು, ' ಇಲ್ಲ ಕಾಕಾ, ನೀವು ಹೋಗಿರಿ. ನಾನೀಗ ಎಲ್ಲ ಕಲಿತುಕೊಂಡಿದ್ದೇನೆ. ನಿಮ್ಮ ಪರಕಾಲದ ಕಾರ್ಯದಲ್ಲಿ ತಡೆಯೊಡ್ಡುವದಿಲ್ಲ. ಜಗತ್ತಿನಲ್ಲಿಯ ಯಾರ ಯಾವ ಕಾರ್ಯಕ್ಕೂ ತಡೆಯೊಡ್ಡುವ ಅಧಿಕಾರ ನನಗಿಲ್ಲ— ' ಎಂದನು.

ಸ್ನೇಹಳು ಬಂದು ಎರಡೂ ಕೈಗಳಿಂದ ಸುಧೆಯ ಕೊರಳನ್ನು ಅಪ್ಪಿ ನಿಂತಳು. ಮಾತನಾಡಲಿಲ್ಲ, ಬರೀ ಕಂಣೀರಿನಿಂದ ಸುಧೆಯ ಎದೆಯನ್ನು ತೋಯಿಸತೊಡಗಿದಳು. ಈ ಸಲ ಸುಧೆಗೂ ಕಂಣೀರನ್ನು ಇಂಗಿಸಿಕೊಳ್ಳುವದಾಗಲಿಲ್ಲ. ಕೆಲಹೊತ್ತಿನ ಮೇಲೆ ಸಾವರಿಸಿಕೊಂಡು, ' ಸ್ನೇಹಾ— ನನ್ನಕ್ಕ— ನನ್ನನ್ನು ಮನ್ನಿಸು— ಹೀಗೆ ಮಾಡಿ ನನ್ನನ್ನು ಅಳಿಸಬೇಡ— ' ಎಂದಳು.

' ಅಕ್ಕ ? ನೀನು ಅದೇ ಅಕ್ಕನೆ ? ನೀನು ಎಷ್ಟು ನಿಷ್ಠುರಳು ! '

ಎರಡೂ ಕೈಗಳಿಂದ ಸ್ನೇಹಳ ಮುಖವನ್ನೆತ್ತಿ ಹಿಡಿದು, ಕಂಣೀರೊರೆಸಿ ಸುಧೆಯು, ' ನೀನು ಇಂಥ ಮಾತನ್ನಾಡಬೇಡ ಸ್ನೇಹಾ. ಜಗದ ಜನರೆಲ್ಲ ನನ್ನನ್ನು ಅತಿಹೀನಳೆಂದು, ದುರ್ಬಲಳೆಂದು, ನಿಷ್ಠುರಳೆಂದು ಅವರವರ ಮನ ಬಲ್ಲಂತೆ ತಿಳಿಯಲೊಲ್ಲರೇಕೆ. ಆದರೆ ನೀನು ಮಾತ್ರ ಹಾಗೆ ಹೇಳಿದೆಯಾದರೆ, ನನ್ನ ಎದೆಯೊಡೆದು ಪ್ರಾಣವೇ ಹಾರಿ ಹೋಗುವದು— ' ಎಂದಳು.

ಸ್ನೇಹಳು ಮತ್ತೆ ಅವಳನ್ನು ಅವಚಿಕೊಂಡು, ' ಹಾಗಾದರೆ ಹೋಗುವೆ ಏಕೆ ಅಕ್ಕ— ? ಹೋಗಬೇಡ— ' ಎಂದಳು.

' ಈ ಮನವೆಯನ್ನು ಮಾತ್ರ ಮಾಡಬೇಡ ಸ್ನೇಹಾ— ಮನ್ನಿಸಲಾಗುವ ದಿಲ್ಲ. ಹಾಗೆ ನೆನೆದುಕೊಂಡರೂ ಮನಸ್ಸಿಗೆ ಅಷ್ಟು ಕಷ್ಟವಾಗುವದು ' .

' ಯಾಕೆ ನಿನಗಿಂಥ ಇಚ್ಛೆಯಾಯಿತು ಅಕ್ಕ ? ತಂದೆಯ ಬಳಿಗಂತೂ ಇಷ್ಟು ದಿನ ಹೋಗಿರಲಿಲ್ಲ. '

' ದೇವರು ಆ ಇಚ್ಛೆ ಮಾಡಿಸಿದ ಸ್ನೇಹಾ— ಯಾಕೆ ಹೋಗುವೆನೆಂಬು ದನ್ನು ದೇವರೇ ಬಲ್ಲ. ತಿಳಿದು ನೋಡು, ತಂದೆಯವರಿಗಾದರೂ ಇನ್ನಾ ರಿದ್ದಾರೆ ? ಅಲ್ಲದೆ ಪ್ರಭಾತನ ಆಸ್ತಿಯನ್ನು ಪರರಿಗೇಕೆ ಬಿಟ್ಟುಕೊಡಲಿ ? '

ಸ್ನೇಹಳು ಅವಳನ್ನು ತಡೆದು ಹೇಳಿದಳು, ' ಪ್ರಭಾತನಿಗೆ ಅದೇತರ ಅಭಾವವಿದೆ ಅಕ್ಕ ? ನಿನ್ನನ್ನು ಬಿಟ್ಟು ಅವನಿರಬಹುದೆ ? '

' ಏನು ಮಾಡಲಿ ತಂಗೀ, ನಾನು ನಿರುಪಾಯಳು. '

' ಹಾಗಾದರೆ ಎಂದು ಬರುವೆ ? '

' ಪ್ರಭಾತನಿಗೆ ಮಗುವಾದಾಗ ನಿನ್ನ ಆನಂದದಲ್ಲಿ ಪಾಲುಗೂಡಲು ಬರುತ್ತೇನೆ. '

. ' ಅಕ್ಕ - ಅಕ್ಕ ! ಬಿಟ್ಟಿರಬಲ್ಲೆಯಾ ? ನಿನ್ನ ಪ್ರಾಣವು ಇಷ್ಟು ಕಠಿಣವೆ ? '

ಸುಧೆಯು ಸುಮ್ಮನೆ ಕಿರುನಗೆ ನಕ್ಕಳು.

' ಅಕ್ಕ, ಎಂದೂ ಕೇಳವ ಸಾಹಸವಾಗಿಲ್ಲ— ಇಂದು ಕೇಳುತ್ತೇನೆ. ಪತಿರಾಯನೂ ನಿನಗೇನೂ ಅಲ್ಲವೆ ? '

ಸುಧೆಯು ನಕ್ಕು ಸ್ನೇಹಳ ಗಲ್ಲವನ್ನು ಹಿಚುಕಿಹಿಡಿದು ಹೇಳಿದಳು— ' ಏನೂ ಅಲ್ಲವೇಕೆ ? ನನ್ನ ಸ್ನೇಹಳ ಅತಿ ಪ್ರೀತಿಯ ಪತಿರಾಯನಲ್ಲವೆ ? '

' ಅವರಿಗಾಗಿ ನೀನು ಸಲ್ಲಿಸಬೇಕಾದ ಕರ್ತವ್ಯವಿನಿಸೂ ಇಲ್ಲವೆ ? '

' ಇಲ್ಲ, ಅದನ್ನು ನಿನಗೆ ಬಿಟ್ಟಿದ್ದೇನೆ. '

' ಅಕ್ಕ ಕ್ಷಮಿಸು— ಈ ಮಾತನ್ನು ನಿನಗಿಷ್ಟು ದಿನ ಹೇಳಲು ಧೈರ್ಯವಾಗಿಲ್ಲ. ನಿನ್ನ ಪತಿಯೇ ಅವರು. ನೀನು ನಿನ್ನ ಅಧಿಕಾರದಿಂದೇಕೆ ವಂಚಿತಳಾಗಿರುವೆ ಅಕ್ಕ ? ನಿನ್ನಬಳಿ ಅವರು ಮಾಡಿದ ದೋಷವನ್ನು ನೀನು ಮನ್ನಿಸಿರುವೆಯೆಂಬುದು ಗೊತ್ತು ನನಗೆ—. ಹೀಗಿರಲು ಹೊಸದಾಗಿ ಮತ್ತೆ ನಮ್ಮನ್ನೇಕೆ ಇಂದು ತ್ಯಾಗಮಾಡಿ ಹೋಗುವೆ ? ನಿನ್ನ ಸ್ಥಾನವನ್ನು ನೀನು ತೆಗೆದುಕೊಂಡು, ನನ್ನನ್ನು ನಿನ್ನ ನೇಹದ ನೆರಳಿನಲ್ಲಿ, ಮತ್ತು ಅವರ ಒಲವಿನ ನೆರೆಯಲ್ಲಿ ಇರಿಸು. ನಾನು ಇದನ್ನೇ ಬಯಸುತ್ತೇನೆ- ನಮ್ಮನ್ನು ತ್ಯಾಗ ಮಾಡಬೇಡ—ಅಕ್ಕಾ. '

' ಸ್ನೇಹಾ, ನನಗಾಗಿ ನಿನ್ನಲ್ಲಿ ಇನಿಸಾದರೂ ಪ್ರೇಮವಿದ್ದರೆ, ಹೀಗೆ ನನ್ನನ್ನು ತಡೆಯಬೇಡ. ಅನುದಿನವೂ ಅಕ್ಕನೆಂದು ಕರೆದವಳು, ಈ ದಿನ, ಹೊರಡುವಾಗ ಸವತಿಯೆಂದೇಕೆ ತಿಳಿಯುವೆ ತಂಗಿ ? ನಾನು ನಿನ್ನ ಕಲ್ಯಾಣ ಚಿಂತನೆ ಮಾಡುವ ಅಕ್ಕ— ಸವತಿಯಲ್ಲ. '

' ಮನ್ನಿಸು ಅಕ್ಕ— ತಿಳಿಗೇಡಿ ನಾನು— ಮನ್ನಿಸು. '

' ಹಾಗಾದರೆ ಮತ್ತೆ ಇರುವದಾಗಿ ಹೇಳಬೇಡ. '

ಹೊರಡುವ ದಿನ ಬಂತು. ಪ್ರಭಾತನಿಗೆ ನೂರು-ನೂರು ಮುತ್ತಿಟ್ಟು, ಎದೆಗವಚಿಕೊಂಡು ಕಂಣೀರಲ್ಲಿ ತೋಯುತ್ತ ತೋಯುತ್ತ ಸುಧೆಯು, ' ದೊಡ್ಡವನಾಗಿ ನನ್ನ ಹತ್ತಿರ ಬಾ ಪ್ರಭಾ ' ಎಂದಳು.

ಸ್ನೇಹಳು ಬಿಗಿದ ಕುತ್ತಿಗೆಯಿಂದ, ' ಈಗಲೇ ಕರೆದೊಯ್ಯು ಅಕ್ಕಾ. '

' ಇಲ್ಲ, ಇನ್ನಷ್ಟು ದೊಡ್ಡವನಾಗಲಿ. ಹಾಗಾದರೆ ಹೋಗುತ್ತೇನೆ ಸ್ನೇಹಾ— ' ಸ್ನೇಹಳು ಎರಡೂ ಕೈಗಳಿಂದ ಮುಖ ಮುಚ್ಚಿಕೊಂಡಳು. ಎರಡೂ ಕೈಗಳಿಂದ ಅವಳ ಮುಖವನ್ನು ಎತ್ತಿ ಹಿಡಿದು, ಅವಳ ಗಲ್ಲದ ಮೇಲೆ ತನ್ನ ಸ್ನೇಹಾಶ್ರುವನ್ನುದುರಿಸಿ, ತಲೆಯ ಮೇಲೆ ಕೈಯಿಟ್ಟು ಮನಸ್ಸಿನಲ್ಲಿಯೇ ಸುಧೆಯು ಆಶೀರ್ವದಿಸಿದಳು. ಮನೆಯಲ್ಲಿ ಎಲ್ಲರ ನಿರೋಪ ತೆಗೆದುಕೊಂಡಳು. ಎಲ್ಲರೂ ಎದೆಬಿರಿವಂತೆ ಅತ್ತರು. ಹಾಯ್ ! ಅವಳು ಗೃಹದ ಲಕ್ಷ್ಮಿ ! ಸಂಸಾರದ ಸಂಪದ ! ಯಾರ ಶಾಪದಿಂದಲೊ ಅವಳಿಂದು ನಿರ್ವಾಸಿತಳಾಗತೊಡಗಿದ್ದಾಳೆ !

ಹೋಗುವಾಗ ಸುಧೆಯು ಸುರೇಶನನ್ನು ಕಂಡು, ' ನಾನು ಹೊರಟೆನು ' ಎಂದಳು.

ಸುರೇಶನು ಅವಳ ಮುಖದ ಕಡೆ ಉದಾಸದೃಷ್ಟಿಯಿಂದ ನೋಡಿ, ಧೀರ ಸ್ವರದಿಂದ ' ಹೋಗು ' ಎಂದನು.

ಸುಧೆಯು ಏನನ್ನೋ ತುಸು ಭಾವಿಸಿ, ' ಅನೇಕ ದೋಷಗಳನ್ನು ಮಾಡಿದ್ದೇನೆ; ಸಾಧ್ಯವಾದರೆ ಕ್ಷಮಿಸು ' ಎಂದಳು.

ಸುಧೆಯು ಒಂದೆರಡು ಹೆಜ್ಜೆ ಮುಂದರಿಯುತ್ತಲೇ ಸುರೇಶನು ಧಾವಿಸಿ ಹೋಗಿ ಅವಳ ಕೈ ಹಿಡಿದನು. ' ಒಪ್ಪು ಸುಧಾ, ಒಪ್ಪಿ ಹೋಗು. ಈಗಲ್ಲ ಬಿದ್ದರೂ, ಒಂದು ದಿನ ನೀನು ನನ್ನವಳಿದ್ದೆ. ನಿನಗೆ ಹೀಗೆ ಹೇಳುವ ಅಧಿಕಾರವು ನನಗೊಮ್ಮೆ ಇತ್ತು. ಇನ್ನೇನೂ ಬೇಡ, ಇಷ್ಟನ್ನು ಮಾತ್ರ ಹೇಳಿ ಹೋಗು— ಇನ್ನೂ ತುಸು— ತುಸು ಸ್ನೇಹವು ನನಗಾಗಿ ನಿನ್ನಲ್ಲುಂಟು ಎಂದು. ಪ್ರತಿಜ್ಞೆ ಮಾಡುತ್ತೇನೆ— ಈ ಜನ್ಮದಲ್ಲಿನ್ನು ನಾನು ನಿನಗೆ ಮುಖ ತೋರಿಸುವದಿಲ್ಲ, ಇನ್ನೇನನ್ನೂ ಬೇಡುವದಿಲ್ಲ. ಒಮ್ಮೆ ಇಷ್ಟನ್ನು ಮಾತ್ರ ಒಪ್ಪಿ ಹೋಗು ಸುಧಾ. '

ಅಪಲಕ ನೇತ್ರಗಳಿಂದ ಪತಿಯ ಕಡೆ ನೋಡುತ್ತ ಸುಧೆಯು ' ಇಲ್ಲ ' ಎಂದು ಉಚ್ಚರಿಸಿದಳು.

ಸುಧೆಯು ಧೀರಪದದಿಂದ ಹೋಗಿ ಬಂಡಿಯನ್ನೇರಿದಳು. ವಿಸ್ತೃತ ಅಟ್ಟಾಲಿಕೆಯ ಅಂಶವು, ಉದ್ಯಾನದ ಪ್ರಾಚೀರವು, ಒಂದೊಂದಾಗಿ ಅವಳ ಕಣ್ಮರೆಯಾಗಿ ಹೋದವು. ಆಗ ಒಮ್ಮಿಂದೊಮ್ಮೆ ಬಂಡಿಯಲ್ಲಿ ಉರುಳಾಡಿ ಸುಧೆಯು ರುದ್ಧಕಂಠದಿಂದ ಬಿಕ್ಕಿ ಬಿಕ್ಕಿ ಅಳುತ್ತ— ' ಒಪ್ಪುತ್ತೇನೆ, ಒಪ್ಪುತ್ತೇನೆ,— ಇನ್ನೆಂದೂ ಒಪ್ಪದಿರುವದಿಲ್ಲ— ನಾನು ಸಾವಿರ ಸಲ ಹೇಳುವೆ— ಒಮ್ಮೆ ಅಧಿಕಾರವಿತ್ತು ನಿನಗೆ— ಎಲ್ಲ ಅಧಿಕಾರವೂ ಇತ್ತು—ಮತ್ತು— ಈಗಲೂ—ಈಗಲೂ...... ... .. '